# ಕೆ.ವಿ. ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯ

ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ಪ್ರಬಂಧ









...ಭಾಗ
...ಯ
...ಲಯ, ಹಂಪಿ
...ದ್ಯಾ... ೫೮೩ ೨೭೬

# ಕೆ.ವಿ.ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯ

(ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಪ್ರೌಢಪ್ರಬಂಧ)

ಸಂಶೋಧಕರು

ವಿಶ್ವನಾಥ್ ಕಂಡಿ

ಮಾರ್ಗದರ್ಶಕರು

ಡಾ|| ಶಿವಾನಂದ ಹೆಚ್. ಬಂಟನೂರು




ದೃಶ್ಯಕಲಾ ವಿಭಾಗ
ಲಲಿತಕಲಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೪

# ಪರಿವಿಡಿ

ಅಧ್ಯಾಯ ಒಂದು
**ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ** ೧–೧೭

ಅಧ್ಯಾಯ ಎರಡು
**ಜನನ, ಬಾಲ್ಯ ಪರಿಸರ, ಶಿಕ್ಷಣ ಮತ್ತು ವೃತ್ತಿ ಜೀವನ** ೧೮–೨೩

ಅಧ್ಯಾಯ ಮೂರು
**ಸಂಪಾದನಾ ದೃಶ್ಯಕಲಾ ಸಾಹಿತ್ಯ** ೨೪–೪೪

ಅಧ್ಯಾಯ ನಾಲ್ಕು
**ವ್ಯಕ್ತಿ ಕೇಂದ್ರಿತ ದೃಶ್ಯಕಲಾ ಸಾಹಿತ್ಯ** ೪೫–೫೬

ಅಧ್ಯಾಯ ಐದು
**ತಾತ್ವಿಕ ದೃಶ್ಯಕಲಾ ಸಾಹಿತ್ಯ** ೫೭–೭೫

ಅಧ್ಯಾಯ ಆರು
**ಕ್ಯಾಟಲಾಗ್ ದೃಶ್ಯಕಲಾ ಸಾಹಿತ್ಯ** ೭೬–೮೩

ಅಧ್ಯಾಯ ಏಳು
**ಸಂಶೋಧನಾ ದೃಶ್ಯಕಲಾ ಸಾಹಿತ್ಯ** ೮೪–೯೧

ಅಧ್ಯಾಯ ಎಂಟು
**ಪತ್ರಿಕಾ ದೃಶ್ಯಕಲಾ ಸಾಹಿತ್ಯ** ೯೨–೧೬೧

ಅಧ್ಯಾಯ ಒಂಬತ್ತು
**ಸಂಕೀರ್ಣ ದೃಶ್ಯಕಲಾ ಸಾಹಿತ್ಯ** ೧೬೨–೧೮೧

ಅಧ್ಯಾಯ ಹತ್ತು
**ಸಮಾರೋಪ** ೧೮೨–೧೮೮

**ಅನುಬಂಧಗಳು** ೧೮೯–೧೯೬

೧. ಗ್ರಂಥಋಣ
೨. ಛಾಯಾಚಿತ್ರಗಳು

ಅಧ್ಯಾಯ ಒಂದು

# ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವಿಧಾನ

## ಪ್ರಸ್ತಾವನೆ

ಸೃಷ್ಟಿಯಲ್ಲಿ ಮೊದಲು ಮಾನವನು ತನ್ನ ಜೀವನ ನಿರ್ವಹಣೆಗಾಗಿ ಸುತ್ತಲಿನ ಪರಿಸರದೊಂದಿಗೆ ನಿಕಟವರ್ತಿಯಾಗಿ ಸಂಚರಿಸುವಾಗ ತನಗೆ ಆದ ಅಪೂರ್ವ ಅನುಭವಗಳನ್ನು ವ್ಯಕ್ತಪಡಿಸಿದ ಪ್ರಯತ್ನವೇ ಚಿತ್ರಲಿಪಿಯ ಹುಟ್ಟಿಗೆ ಕಾರಣವಾಯಿತು. ಪ್ರಾರಂಭದಲ್ಲಿ ಮಾನವನು ಗುಹೆಯ ಮೇಲೆ, ಮರದ ಮೇಲೆ, ಮಡಿಕೆಗಳ ಮೇಲೆ, ಮನೆಯ ಗೋಡೆ ಮೇಲೆ, ತಾನು ವಾಸಿಸುವ ಬಂಡೆಗಳು ಮುಂತಾದೆಡೆಗಳಲ್ಲಿ ಕುಟ್ಟಿದ, ಗೀರು ಚಿತ್ರಗಳನ್ನು ಪ್ರಾರಂಭಿಕ ಲಿಪಿ ಎಂದು ಹೇಳಲಾಗಿದೆ. ಹೀಗಾಗಿ ಲಿಪಿಯ ಮೂಲವು ಚಿತ್ರದ ಮೂಲಕವಾಗಿ ಮುಂದೆ ನಿಶ್ಚಿತವಾದ ಬರವಣಿಗೆ ಅಥವಾ ಲಿಪಿಯು ಸಾಹಿತ್ಯವಾಗಿ ಬೆಳೆದು ಬಂದಿದೆ. ಇದಕ್ಕಿಂತ ಪೂರ್ವದಲ್ಲಿ ಇತರ ಪ್ರಾಣಿಗಳಂತೆ ವಾಸಿಸುತ್ತಿದ್ದಾಗ ತಾನು ಮಾತನಾಡಬಹುದು ಎಂಬುದನ್ನು ತಿಳಿದುಕೊಂಡಾಗ ಮೊದಲು ಕೈಸನ್ನೆ ಮತ್ತು ಬಾಯಿ ಸನ್ನೆಯ ಮೂಲಕ ತನ್ನ ವಿಚಾರಗಳನ್ನು ಪರರಿಗೆ ತಿಳಿಸಲು ಪ್ರಯತ್ನಿಸಿದ. ಜ್ಞಾಪಕಶಕ್ತಿ ಬೆಳೆದ ಹಾಗೆ ತನಗೆ ಸರಿಕಂಡ ವಿಚಾರಗಳನ್ನು ಒಂದು ನಿರ್ದಿಷ್ಟ ಲಿಪಿಯನ್ನು ಬಳಸಿ ಬರೆಯ ತೊಡಗಿದರು. ಈ ರೀತಿ ತಮ್ಮ ಭಾವನೆಗಳನ್ನು, ವಿಚಾರಗಳು, ಭವಿಷ್ಯತ್ ಕಾಲದ ಜನರಿಗೆ ತಿಳಿಯಲಿ ಎಂಬ ಉದ್ದೇಶದಿಂದ ಲಿಪಿಯನ್ನು ಗುರುತಿಸಿದರು ಎನ್ನಬಹುದು. ತಮ್ಮ ಭಾವನೆಯನ್ನು ವ್ಯಕ್ತಪಡಿಸಲು ಮಾತನ್ನು ಬಳಸಿದರು. ಅವಶ್ಯಕತೆಯು ಈ ಅನ್ವೇಷಣೆಯ ಹಿಂದೆ ತೀವ್ರ ಒತ್ತಡವನ್ನುಂಟು ಮಾಡಿರುತ್ತದೆ. ಹೀಗೆ ಮಾನವನಿಗೆ ತನ್ನಲ್ಲೇ ಇದ್ದ ಸಾಮರ್ಥ್ಯದ ಅರಿವಾಗಲು ಸಾಕಷ್ಟು ವರ್ಷಗಳೇ ಗತಿಸಿರಬೇಕು.

ಮಾನವನು ಸಮಾಜ ಜೀವ ಎಂದು ಅರಿಸ್ಟಾಟಲ್ ಹೇಳುತ್ತಾನೆ. ಸಾಮಾಜಿಕ ಜೀವನದಲ್ಲಿ ಪಾಲ್ಗೊಳ್ಳಲು ಶಕ್ತವಾಗಿಲ್ಲದ ಮಾನವ ಇಲ್ಲವೇ ಪ್ರಾಣಿಯಾಗಿರಬೇಕು ಮತ್ತು ದೇವನಾಗಿರಬೇಕು. ಅಂದರೆ ಮಾನವರು ಸಮಾಜವಿಲ್ಲದೆ ಜೀವಿಸಲಾರರು. ಮಾನವನಾಗಲು ಬೇಕಾದ ಗುಣಲಕ್ಷಣಗಳನ್ನು ಹೊಂದಿರುವ ಜೈವಿಕ ಜೀವಿಯಾಗಿ ಈ ಜಗತ್ತಿಗೆ ಬಂದ ಮಾನವನ ಲಕ್ಷಣಗಳನ್ನೆಲ್ಲಾ

ಸಂಪೂರ್ಣವಾಗಿ ಅರಳಿ ವಿಕಾಸ ಹೊಂದುವುದು ಸಾಮಾಜಿಕ ಪರಿಸರದಲ್ಲಿ ಮಾತ್ರ. ಈ ಸಮಾಜ ಜೀವಿಯ ಪರಿಸರದಿಂದ ಪ್ರೇರಣೆಗೊಂಡು ಬುದ್ಧಿವಂತ, ವಿಚಾರಶಕ್ತಿಯುಳ್ಳ ಪ್ರಾಣಿಯಾಗಿ ಬಾಳಲು ಸಾಧ್ಯವಾಗಿದೆ. ಮಾನವ ಪ್ರಾಣಿಗೂ ಮತ್ತು ಇತರ ಪ್ರಾಣಿಗೂ ಈ ವ್ಯತ್ಯಾಸ ಕಂಡುಬರುವುದರಿಂದ ಮಾನವನು ಇತರ ಪ್ರಾಣಿಗಳಿಂದ ಭಿನ್ನವಾಗಿಸಿದೆ.

ಮಾನವನು ಗುಂಪು ಜೀವಿಯಾದ ನಂತರದ ಕಾಲದಲ್ಲಿ ಅಂದರೆ ಪ್ರಾಣಿಗಳಿಗಿಂತ ಭಿನ್ನವಾದ ಬದುಕನ್ನು ರೂಪಿಸಿಕೊಳ್ಳುವ ಹೊತ್ತಿಗೆ ಆಂಗಿಕ ಸಂಕೇತಗಳನ್ನು ಅದರಲ್ಲೂ ಧ್ವನಿ ಸಂಕೇತಗಳನ್ನು ಹೆಚ್ಚು ಹೆಚ್ಚು ಬಳಸಲು ಪ್ರಯತ್ನಿಸತೊಡಗಿದ. ಹಾಗೆ ಮಾನವನು ಯಾವಾಗ ಧ್ವನಿಗಳನ್ನು ತನಗೆ ಅನುಕೂಲವಾಗುವಂತೆ ಬಳಸುತ್ತ ತನ್ನ ಸೂಕ್ಷ್ಮ ವಿಚಾರಗಳನ್ನು ಭಾವನೆಗಳನ್ನು ಇತರರಿಗೆ ತಿಳಿಸಲು ಯಶಸ್ವಿ ಆದನೋ ಆವಾಗಲೇ ಭಾಷೆಯ ಉಗಮವಾಯಿತು. ಕ್ರಿ.ಪೂ.ಸುಮಾರು ೧೬೦೦ ವರ್ಷಗಳ ಆಚೆ, ಪ್ರಾಚೀನ ಬೆಬಿಲೋನಿಯಾದಲ್ಲಿ ಭಾಷೆ ಹೇಗೆ ಹುಟ್ಟಿತು ಎಂಬ ಜಿಜ್ಞಾಸೆ ಚಿಂತನೆ ಆರಂಭಗೊಂಡಿತು ಎಂದು ಭಾಷಾ ವಿಜ್ಞಾನಿ ವಾದಿಸುತ್ತಾರೆ. ಸಂಸ್ಕೃತದ 'ಭಾಷೆ' ಎಂಬ ಶಬ್ದ 'ಮಾತನಾಡು' ಎಂಬ ಅರ್ಥವನ್ನು ಹೊಂದಿದೆ. ಆದ್ದರಿಂದ ಭಾಷೆ ಮಾತನಾಡುವ ಕ್ರಿಯೆಯನ್ನು ಸೂಚಿಸುತ್ತದೆ. ಮಾನವನನ್ನು ಪ್ರಾಣಿಗಳಿಂದ ಭಿನ್ನವಾಗಿಸುವುದು ಮಾತು ಮಾತ್ರ. ಮಾತು ದೇವರ ಕೊಡುಗೆ ಎಂದು ಭಾವಿಸಲಾಗಿದೆ.[೧]

ದಂಡಿ ಎಂಬ ವಿದ್ವಾಂಸ "ಭಾಷೆಯೆಂಬ ಬೆಳಕು ಜೀವನದಲ್ಲಿ ಬೆಳಗದಿದ್ದರೆ ಲೋಕವೆಲ್ಲ ಕತ್ತಲಿನಿಂದ ತುಂಬಿ ಹೋಗುತ್ತಿತ್ತು" ಎಂದು ಹೇಳಿ ಭಾಷೆಯ ಪ್ರಾಮುಖ್ಯತೆಯನ್ನು ತಿಳಿಸಿದ್ದಾರೆ. ಪ್ರಸಿದ್ಧ ಭಾಷಾ ವಿಜ್ಞಾನಿ ಸಿ.ಎಫ್.ಹಾಕೆಟ್ "ಭಾಷೆ ಎಂಬುದು ಮಾನವ ಜನಾಂಗದ ಅಮೂಲ್ಯ ಸೊತ್ತು" ಎಂದು ಅದರ ಮಹತ್ವವನ್ನು ಸಾರಿ ಹೇಳಿದ್ದಾನೆ.

ಕೇಶಿರಾಜನ ಪ್ರಕಾರ ಶಬ್ದ ಜನಿಸುವುದು ಮನೋವೃತ್ತಿ ನಿಮಿತ್ತವಾಗಿ "ತನುವಾದ್ಯಂ ನಾಲಿಗೆ ವಾದನ ದಂಡಂ ಕರ್ತೃ ವಾತ್ಮನ ವರ್ಣ ಮಕರ ರೂಪ" ಎಂದಿದ್ದಾನೆ.[೨] ಆದರೆ ಕ್ರೈಸ್ತರ ಪ್ರಕಾರ 'ಶಬ್ದವೆಂಬುದು ಕೂಡ ದೇವರಿಂದಲೇ ಹೊರಬಂದು ಅದು ಭಾಷೆಯಾಗಿ ರೂಪುಗೊಂಡಿತು. ಈ ದೈವದಿಂದಲೇ ಜನರು ಮಾತನಾಡಲು ಪ್ರಾರಂಭಿಸಿದರು.[೩] ಎಂದು ಹೇಳಲಾಗಿದೆ. ಹೀಗೆ ಭಾಷೆಯ ಹುಟ್ಟಿನ ಬಗೆಗೆ ಅನೇಕ ದಂತಕತೆಗಳು ಪುರಾಣಕತೆಗಳು ಇವೆ. ಅನೇಕ ವಿಜ್ಞಾನಿಗಳೂ ತಮಗನ್ನಿಸಿದ ರೀತಿಯಲ್ಲಿ ಭಾಷೆಯನ್ನು ಕುರಿತು ತರ್ಕಗಳನ್ನು ಮಾಡಿದ್ದಾರೆ.

ಸ್ಟೋರ್ ಟೆವೆಂಟ್ ಎಂಬುವವನು "ಒಂದು ಸಮಾಜದ ವ್ಯಕ್ತಿಗಳು ಪರಸ್ಪರ ವ್ಯವಹಾರಕ್ಕಾಗಿ ಬಳಸುವ ಯಾದೃಚ್ಚಿಕ ಧ್ವನಿ ಸಂಕೇತಗಳ ವ್ಯವಸ್ಥೆ" ಎಂದು ಅಭಿಪ್ರಾಯಪಟ್ಟಿದ್ದಾರೆ,[೪] ಕಾಂಡಿಲಾಕ್ ಎನ್ನುವ ವಿದ್ವಾಂಸನ ಪ್ರಕಾರ ಪ್ರಕೃತಿಯಲ್ಲಿ ಬಂದ ಮೊದಲ ಪುರುಷ ಮತ್ತು ಸ್ತ್ರೀ ಇವರಿಬ್ಬರೂ ಭಾಷೆಯಂತೆ ಇರುವ ಮತ್ತೊಂದು ಬಗೆಯ ಸಾಧನವನ್ನು ನಿರ್ಮಿಸಿಕೊಂಡಿರಬಹುದು ಎಂದು ಊಹಿಸಿದನು. ಈ ಇಬ್ಬರ ಸ್ವಭಾವದಲ್ಲಿರುವ ಭಾವಾವೇಶದ ಫಲವಾಗಿ ಬಂದ ಉಚ್ಚಾರಗಳು,

ಶಬ್ದಗಳು, ಉತ್ಕಟ ಭಾವನೆಯ ಫಲವಾಗಿ ಹೊರಬಿದ್ದ ಉದ್ಗಾರಗಳು ಕ್ರಮೇಣ ಶಬ್ದಗಳಾಗಿ ಈ ಶಬ್ದಗಳು ಸಂಕೇತಗಳಾಗಿ ಭಾಷೆಯಾಗಿ ರೂಪುಗೊಂಡಿರಬಹುದು ಎಂದು ಹೇಳಿದ್ದಾರೆ.[೫]

ಭಾಷೆಯ ಹುಟ್ಟಿನ ಬಗೆಗೆ ಅನೇಕ ದಂತಕತೆಗಳು, ಪುರಾಣಗಳೂ ಇವೆ. ಭಾಷೆ ದೈವದತ್ತವಾದುದು, ಭಾಷೆ ಮನುಷ್ಯನಿಗೆ ದೇವರು ನೀಡಿದ ವರ ಎನ್ನುವ ನಂಬಿಕೆ ಜಗತ್ತಿನಾದ್ಯಂತ ಇತ್ತು. ಈ ನಿಟ್ಟಿನಲ್ಲಿ ಈಜಿಪ್ಟ್ ದೇಶದ ಜನರಲ್ಲಿ ಒಂದು ನಂಬಿಕೆ ಇದೆಯಂಥೆ. 'ಥಾಥ್' ಎಂಬ ದೇವತೆ ಜನರಿಗೆ ಬಾಷೆಯನ್ನು ವರದಾನ ನೀಡಿದೆಯಂತೆ. ಹಾಗಾಗಿ ಇವರಿಗೆ ಭಾಷೆಗಾಗಿಯೇ ದೇವತೆ ಪ್ರತ್ಯೇಕವಾಗಿರುವುದು ಕಂಡುಬರುತ್ತದೆ. ೧೭ನೇ ಶತಮಾನದಲ್ಲಿ ಪ್ರಸಿದ್ಧವಾದ ವೈಯಾಕರಣಿ ಭಟ್ಟಾಕಳಂಕನೂ ಕೂಡ 'ಭಾಷೆಗಳೆಲ್ಲವೂ ಭಗವಂತನಿಂದಲೇ ಸೃಷ್ಟಿಯಾದವು ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಇದಕ್ಕೆ ವಿರುದ್ಧವೆಂಬಂತೆ ಹರ್ಡರ್ ಎಂಬ ವಿದ್ವಾಂಸ ಬರ್ಲಿನ್ ಅಕಾಡೆಮಿಯಲ್ಲಿ ಭಾಷೆಯ ಉಗಮದ ಬಗ್ಗೆ ಪ್ರಥಮ ಬಾರಿಗೆ ಒಂದು ಪ್ರಬಂಧ ಮಂಡಿಸಿ ಭಾಷೆ ದೈವದತ್ತವಾದುದಲ್ಲ ಎಂಬುದನ್ನು ಪ್ರಸ್ತಾಪಿಸಿದನು. ಭಾಷೆ ಮನುಷ್ಯ ನಿರ್ಮಿತ ಎನ್ನುವುದನ್ನು ಹೇಳಿದನು. ಇದು ಅನೇಕರ ಮನ್ನಣೆಗೆ ಪಾತ್ರವಾಯಿತು. ಆದರೆ ಇವ್ಯಾವುವೂ ಖಚಿತವಾದ ಉತ್ತರವನ್ನು ನೀಡುವಂತಿಲ್ಲ ಎಂಬುದು ಸ್ಪಷ್ಟಪಡಿಸುತ್ತದೆ. ಒಟ್ಟಾರೆ ಭಾಷೆ ಮನುಷ್ಯನ ಬದುಕಿನ ಅನಿವಾರ್ಯವಾದ ಅವಿಭಾಜ್ಯವಾದ ಭಾಗವಾಗಿದೆ. ಅದು ಸಮಾಜದ, ಸಂಸ್ಕೃತಿಯ ಹಾಗೂ ಮನುಷ್ಯನ ಸಕಲ ಚಿಂತನೆಗೂ, ವ್ಯವಹಾರಕ್ಕೂ ಅಗತ್ಯವಾದ ಭಾಗವಾಗಿದೆ.

ಮಾತು ಆರಂಭವಾಗಿ ಭಾಷೆಗಳು ರೂಪುಗೊಂಡು ನಾಗರಿಕತೆಯೆಡೆಗೆ ಮಾನವನು ಸಾಗಿದ ಸಂದರ್ಭದಲ್ಲಿ ಕೇವಲ ಶ್ರವಣವಾಗಿ ಇರುತ್ತಿದ್ದ ತನ್ನ ಭಾವನೆಗಳನ್ನು ಲಿಪಿಯಲ್ಲಿ ಹಿಡಿದಿಡಲು ಹೊರಟನು. "ಭಾಷೆಯ ಉಪಯೋಗವನ್ನು ಕಂಡುಕೊಂಡು ಮನುಷ್ಯ ಮನುಷ್ಯನಾದನು. ಲೇಖನದ ಉಪಯೋಗವನ್ನು ಕಂಡುಕೊಂಡು ಮನುಷ್ಯ ನಾಗರಿಕನಾದನು"ಎಂದು ಚಿದಾನಂದ ಮೂರ್ತಿಯವರು ಹೇಳಿದ್ದಾರೆ.

ಭಾಷೆಯು ಹುಟ್ಟಿದ ಸಾವಿರಾರು ವರ್ಷಗಳ ನಂತರ ಲಿಪಿ, ಬರಹ ಹುಟ್ಟಿತು. ಕ್ರಿ.ಶ.ಪೂರ್ವ ೨೫೦೦ರಿಂದ ೧೫೦೦ರ ಅವಧಿಯಲ್ಲಿ ಜಗತ್ತಿನಲ್ಲಿ ಬೇರೆ ಬೇರೆ ಭಾಗಗಳಲ್ಲಿ ಚಿತ್ರಲಿಪಿಯು ದೊರೆಯುತ್ತದೆ.[೬] ಈಜಿಪ್ತಿನ ಮಮ್ಮಿಗಳ ಮೇಲೆ ಬರೆದ ಚಿತ್ರಲಿಪಿ ಅತಿ ಪ್ರಾಚೀನ ಲಿಪಿಗಳಲ್ಲಿ ಒಂದು ಎಂದು ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದ ಜಾಕೋಬ್ ದಹ್ಲ ಎಂಬ ಸಂಶೋಧಕರು ಅಭಿಪ್ರಾಯಪಡುತ್ತಾರೆ. ಈ ಸಂಶೋಧನೆ ಚಿತ್ರಲಿಪಿಗೆ ೫೦೦೦ ವರ್ಷಗಳ ಪ್ರಾಚೀನತೆಯನ್ನು ತಂದುಕೊಟ್ಟಿದೆ. ಇದನ್ನು ಅಷ್ಟೊಂದು ನಿಖರವಾಗಿ ಹೇಳುವುದು ಸುಲಭವಲ್ಲ ಎನ್ನಬಹುದು.

ಲಿಪಿಯ ಹುಟ್ಟು ಬೆಳವಣಿಗೆ ಎನ್ನುವುದೇ ಒಂದು ಸೃಜನಶೀಲ ಕ್ರಿಯೆಯಾಗಿದೆ. ಇಂಥ ಸೃಜನಶೀಲ ನೆಲೆಗಳನ್ನು ಕೇವಲ ಕಲಾಭಿವ್ಯಕ್ತಿ ಅಥವಾ ಸಾಹಿತ್ಯ ಕೃತಿಗಳ ಆಶಯಗಳಾಗಿ ಪರಿಭಾಷಿಸುತ್ತ ಬರಲಾಗಿದೆ. ಆದರೆ ಸೃಜನಶೀಲ ಗುಣವಿಲ್ಲದಿರುವುದು ಯಾವುದೂ ಜೀವಂತವಾಗಿರಲು

ಸಾಧ್ಯವಿಲ್ಲ.[೭] ಅದೇ ತೆರನಾಗಿ ಲಿಪಿಯ ಹುಟ್ಟು ಬೆಳವಣಿಗೆ ಹಾಗೂ ವಿಕಾಸ ಎನ್ನಬಹುದಾಗಿದ್ದು ಅದೊಂದು ಪ್ರಯೋಗಶೀಲತೆಯಿಂದ ಮುನ್ನಡೆಯುತ್ತಾ ಬರುತ್ತಿದೆ.

'ಅಕ್ಷರ' ಅಥವಾ ಲಿಪಿ ಎಂಬುದು ಮಾತಿನಿಂದಲೇ ಹುಟ್ಟಿಕೊಂಡಿದೆ. ಲಿಪಿಯ ಮೂಲವಾದ ಮಾತು ಹೇಗೆ ಶೋಧಿಸಲ್ಪಟ್ಟಿತು? ಎಂಬ ಪ್ರಶ್ನೆಗೆ ಇನ್ನೂ ಸ್ಪಷ್ಟವಾದ ಉತ್ತರ ಇದುವರೆಗೆ ದೊರತಿಲ್ಲ. ನಿರ್ದಿಷ್ಟವಾದ ಆಕರಗಳೂ ಸಹ ದೊರೆತಿಲ್ಲ. ಮಾತಿನ ಬೆಳವಣಿಗೆಯಿಂದ ನಾಗರಿಕತೆಗಳು ಬೆಳವಣಿಗೆ ಪಡೆದವು. ಮಾನವ ನಾಗರಿಕತೆಯ ಆರಂಭದಲ್ಲಿ ತನ್ನ ಅಭಿವ್ಯಕ್ತಿ ಹಾಗೂ ಸಂವಹನಕ್ಕಾಗಿ ಮೊದಲು ಚಿತ್ರಲಿಪಿಯನ್ನು ಬಳಸಲಾಗಿತ್ತು. ನಂತರ ಭಾವ ಲಿಪಿ ಉಪಯೋಗಿಸುತ್ತಿದ್ದು, ಕಾಲಕ್ರಮದಲ್ಲಿ ಅದೇ ಅಕ್ಷರ ಲಿಪಿಯ ತಳಹದಿಯಾಯಿತು ಎಂದು ಲಿಪಿ ತಜ್ಞರು ಅಂದಾಜಿಸುತ್ತಾರೆ. ಅಕ್ಷರ ಲಿಪಿ ಬೆಳವಣಿಗೆಯಲ್ಲಿ ಚಿತ್ರಲಿಪಿ, ಭಾವಲಿಪಿ, ಪದ ಸೂಚಕ ಲಿಪಿ ಮತ್ತು ಏಕ ಶಬ್ಧಾತ್ಮಕ ವರ್ಣಲಿಪಿಗಳು ಎಂದು ವಿವಿಧ ಹಂತಗಳನ್ನು ಸುಲಭವಾಗಿ ಗುರುತಿಸಬಹುದಾಗಿದ್ದು ಎನ್ನುವಲ್ಲಿ ಲಿಪಿ ಬೆಳವಣಿಗೆಯ ಹೆಜ್ಜೆ ಗುರುತುಗಳನ್ನು ಕಾಣಬಹುದಾಗಿದೆ.

**೧. ಚಿತ್ರಲಿಪಿ:** ಒಂದು ವಸ್ತುವನ್ನು ಸೂಚಿಸಲು ಆ ವಸ್ತುವಿನ ಚಿತ್ರವನ್ನೇ ಬರೆದು ಸೂಚಿಸುವ ವಿಧಾನ.

**೨. ಭಾವಲಿಪಿ ಬರಹ:** ಚಿತ್ರಲಿಪಿ ವಸ್ತುಗಳಿಗೆ ಮಾತ್ರ ಸೀಮಿತವಾಗಿರದೆ ಭಾವನೆಗಳನ್ನು ಸೂಚಿಸಲು ಬಳಕೆಯಾದವು. ಆಗ ವಸ್ತುವಿಗೂ ಚಿತ್ರಕ್ಕೂ ಇರುವ ನೇರ ಸಂಬಂಧ ಕಳಚಿ ಲಿಪಿ ಚಿಹ್ನೆ ಸಂಕೇತವಾಗುವುದರತ್ತ ಹೆಜ್ಜೆ ಇಟ್ಟಿತು.

**೩. ಪದ ಲೇಖನ ಅಥವಾ ಬರಹ:** ಚಿಹ್ನೆಗಳಿಗೂ, ವಸ್ತುಗಳಿಗೂ, ಭಾವನೆಗಳಿಗೂ ಇದ್ದ ನೇರ ಸಂಬಂಧ ತಪ್ಪಿ, ಚಿಹ್ನೆಗಳು ಒಂದೊಂದು ಪದಗಳನ್ನು ಸೂಚಿಸತೊಡಗಿದವು. ಇದನ್ನು ಪದ ಲೇಖನ ಎನ್ನುತ್ತಾರೆ.

**೪. ಅಕ್ಷರ ಲೇಖನ:** ಇಲ್ಲಿ ಒಂದು ಚಿಹ್ನೆಯು ಸ್ವರ ಅಥವಾ ವ್ಯಂಜನ ಸಮೇತವಾದ ಸ್ವರವನ್ನು ಸೂಚಿಸುತ್ತದೆ.[೮]

ಹೀಗೆ ಲಿಪಿಯು ಹಂತಹಂತವಾಗಿ ಬೆಳೆದು ಬಂದಿರುವುದನ್ನು ನಾವು ಮನಗಾಣಬಹುದು. ಪ್ರಪಂಚದಲ್ಲಿ ದೊರೆತಿರುವ ಲಿಪಿಗಳಲ್ಲಿ ಪ್ರಾಚೀನವಾದುದೆಂದರೆ ಸುಮೇರಿಯನ್ನರು ಬಳಸಿದ ಲಿಪಿ. ಈ ಲಿಪಿಯು ಮೊಳೆಯಾಕಾರದಲ್ಲಿದ್ದು, ಕ್ರಿ.ಪೂ.೪೦೦೦ ವರ್ಷಗಳ ಹಿಂದಿನ ಇವರ ಬರವಣಿಗೆಯ ಮುದ್ರಿಕೆಗಳು ದೊರೆಯುತ್ತವೆ.[೯] ಅದಕ್ಕಿಂತ ಪೂರ್ವದಲ್ಲಿ ಅಂದಾಜಿಸಿರುವ ಪ್ರಕಾರ, ನಮಗೆ ಕಾಣುವುದು ಹರಪ್ಪ ಮತ್ತು ಮೆಹೆಂಜೋದಾರೋಗಳಲ್ಲಿ ದೊರೆತಿರುವ ಮುದ್ರಿಕೆಗಳು. ಸಿಂಧೂ ಸಂಸ್ಕೃತಿಯನ್ನು ಪರಿಭಾಪಿಸುವಂತವಾಗಿದೆ. ಸುಮಾರು ಮುನ್ನೂರು ಚಿಹ್ನೆಗಳಲ್ಲಿ ಹಲವು ಬೆಟ್ಟ, ಮರ, ಮೀನು, ಮನುಷ್ಯ, ಪಾತ್ರೆ ಮುಂತಾದವುಗಳು ಚಿತ್ರಗಳಂತೆ ಕಾಣುತ್ತವೆ. ವಿದ್ವಾಂಸರು

ಈ ಲಿಪಿ ಚಿತ್ರಲಿಪಿಗಿಂತ ಪದ ಲೇಖನ ಘಟ್ಟದ್ದು, ಇಲ್ಲದೆ ಇದಕ್ಕೂ ಮುಂದುವರೆದ ಅಕ್ಷರ ಲೇಖನ ಘಟ್ಟದ್ದಿರಬಹುದು ಎನ್ನುತ್ತಾರೆ.

ಸುಮೇರಿಯನ್ನರು ಬಳಸಿದ ಈ ಲಿಪಿ ಚಿತ್ರಗಳು ಭಾವ ಮತ್ತು ಧ್ವನಿ ನಿರೂಪಗಳಾಗಿ ಬದಲಾಗಿದೆ. ಚೀನಾದಲ್ಲಿ ಕ್ರಿ.ಪೂ.೧೧ನೆಯ ಶತಮಾನದಲ್ಲಿ ಉದಿಸಿದ್ದರೂ ಅದಕ್ಕಿಂತ ಹಿಂದೆ ಸೆಮಿಟೆಯಾ ವರ್ಣಲಿಪಿಗಳ ಜನನಕ್ಕೆ ಕಾರಣವಾಗಿರಬಹುದಾದ ಬೈಬ್ಲೋಗಳ ಅರೆವರ್ಣಲಿಪಿಯು ಕ್ರಿ.ಪೂ.೧೬ನೆಯ ಶತಮಾನದಲ್ಲಿ ಬಳಕೆಯಲ್ಲಿದೆ ಎಂದು ಹೇಳಲಾಗಿದೆ. ಈ ರೀತಿಯಾಗಿ ಲಿಪಿಯ ರಹಸ್ಯ ಬಿಡಿಸಿದ ಹೊರತು ಯಾವುದೇ ನಿರ್ಣಯಾತ್ಮಕ ಅಭಿಪ್ರಾಯ ಸಾಧ್ಯವಿಲ್ಲ.

ಕ್ರಿ.ಪೂ.೩೦೦೦ ವರ್ಷಗಳ ಹರಪ್ಪಾ ಲಿಪಿಯನ್ನು ಹೊರತುಪಡಿಸಿದ ನಂತರ ಭಾರತಕ್ಕೆ ಬಂದರೆ ಕ್ರಿ.ಪೂ.೩ನೇ ಶತಮಾನದಲ್ಲಿ ಹೆಚ್ಚು ಮಾಹಿತಿ ಒದಗಿಸುವ ಅಶೋಕನ ಶಾಸನಬರಹಗಳು ಇವು ಬ್ರಾಹ್ಮಿಲಿಪಿಯಲ್ಲಿ ಕಂಡುಬಂದಿವೆ. ಇದಕ್ಕಿಂತ ಪೂರ್ವದಲ್ಲಿ ನಮ್ಮಲ್ಲಿ ಬರವಣಿಗೆಯ ಆಧಾರಗಳು ಅಸ್ಪಷ್ಟ ಎನ್ನಲಾಗಿದೆ. ಬ್ರಾಹ್ಮಿ ಬ್ರಹ್ಮನಿಂದ ಹುಟ್ಟಿತೆಂದು ಹಿಂದುಗಳು ಭಾವಿಸಿದರೆ, ತೀರ್ಥಂಕರರು ತನ್ನ ಮಗಳಾದ ಬ್ರಾಹ್ಮಿಗೆ ಕಲಿಸಿಕೊಟ್ಟಿದ್ದೇ ಬ್ರಾಹ್ಮಿ ಲಿಪಿ ಎಂಬುದು ಜೈನರ ಅಭಿಮತ. ಅಶೋಕನ ಕಾಲದಲ್ಲಿಯ ಶಾಸನಗಳಲ್ಲಿರುವ ಲಿಪಿಯಲ್ಲಿ ನಲವತ್ತೊಂದು ಅಕ್ಷರಗಳು ಮಾತ್ರ ಬಳಕೆಯಾಗಿವೆ. ಬ್ರಾಹ್ಮಿಲಿಪಿಯ ನಂತರ ಖರೋಷ್ಟಿ, ದೇವನಾಗರಿ, ನಂದನಾಗರಿ, ಶಾರದಾ ಲಿಪಿ, ಬಂಗಾಳ ಲಿಪಿ, ಶುಂಕಲಿಪಿ ಇನ್ನೂ ಮುಂತಾದವು ಹುಟ್ಟಿ ಬೆಳೆದುಕೊಂಡು ಬಂದಿದೆ.

ಮಾನವ ಚರಿತ್ರೆಯಲ್ಲಿ ಮಾತು ಒಂದು ಸಿದ್ಧಿಯಾದರೆ ಆ ಮಾತನ್ನು ಮೂರ್ತಗೊಳಿಸಲು ಬಳಸಿಕೊಂಡ 'ಲಿಪಿ'(ಚಿಹ್ನೆ) ಮತ್ತೊಂದು ಸಿದ್ಧ. ಚೀನಾದಲ್ಲಿ ಕ್ರಿ.ಪೂ.೧೧ನೆಯ ಶತಮಾನದಲ್ಲಿ ಸೆಮಿಟಿಯಾದಲ್ಲಿ ವರ್ಣಲಿಪಿಯು ಬಳಕೆಗೆ ಬಂದಿದೆ ಎಂದು ವಿದ್ವಾಂಸರ ಅಭಿಪ್ರಾಯವಾಗಿದ್ದು ಕ್ರಿ.ಪೂ.೧೬ನೆಯ ಶತಮಾನದಲ್ಲಿ ಬೈಬ್ಲೋಗಳ ಅರೆವರ್ಣಲಿಪಿಯು ಬಳಕೆಯಲ್ಲಿತ್ತು. ಭಾರತದಲ್ಲಿ ಲಿಪಿ ಕ್ರಿ.ಪೂ.೩೨೬ರಲ್ಲಿ ಅಲೆಕ್ಸಾಂಡರ್‌ನ ಸೇನಾಧಿಪತಿ ನಿಮಾರ್ಕಸ್ ಲೇಖನ ವಸ್ತುಗಳನ್ನು ಹೆಸರಿಸಿದ್ದಾನೆ. ಈ ಆಧಾರಗಳಿಂದ ಭಾರತೀಯರಿಗೆ ಕ್ರಿ.ಪೂ.ದಲ್ಲಿಯೇ ಲಿಪಿ ತಿಳಿದಿತ್ತೆಂಬುದು ಸ್ಪಷ್ಟ. ವಾತ್ಸಾಯನ ಕಾಮಸೂತ್ರದಲ್ಲಿ 'ಪುಸ್ತಕ ವಾಚನ ಉಲ್ಲೇಖವಿದೆ. ಪುರಾಣಗಳಲ್ಲಿ ಮಶಿ, ಮಶಿಕೂಪಗಳ ಉಲ್ಲೇಖವಿದೆ. ಅತ್ಯಂತ ಪ್ರಾಚೀನ ಸಾಹಿತ್ಯವೆಂದು ಹೇಳಬಹುದಾದ ವೇದಗಳಲ್ಲಿ ಭಾರತದಲ್ಲಿದ್ದಿರಬಹುದಾಗಿದ್ದ ಬರವಣಿಗೆಯ ಬಗ್ಗೆ ಏನೂ ಹೇಳುವುದಿಲ್ಲ. ೧೯ನೆಯ ಶತಮಾನದವರೆಗೂ ವೇದಗಳು ಮೌಖಿಕ ಸಾಹಿತ್ಯವಾಗಿಯೇ ಇದ್ದವು. ಸಂಕೇತಗಲೇ ಅಕ್ಷರದ ಅರ್ಥವನ್ನು ಪಡೆದುಕೊಂಡಿದ್ದವು.

ಕ್ರಿ.ಪೂ.೫ನೇ ಶತಮಾನದಲ್ಲಿ ಬೌದ್ಧ ಸಾಹಿತ್ಯವು ಬರವಣಿಗೆಯ ಬಗ್ಗೆ ಸ್ಪಷ್ಟವಾದ ಆಧಾರಗಳನ್ನು ನೀಡುತ್ತದೆ. ವೇದಗಳು ಬಾಯಿಯಿಂದ ಬಾಯಿಗೆ ಬಂದಂತವುಗಳಾಗಿವೆ. ಹೀಗೆ

ಆದಿಮಾನವನು ತನ್ನ ಬುದ್ಧಿ ಸಾಮರ್ಥ್ಯದಿಂದ ಬೆಳೆಯ ತೊಡಗಿದಾಗ, ಭಾಷೆಗಳು ಹುಟ್ಟಿಕೊಂಡು ಭಾಷೆಯು ಅಕ್ಷರ ಅಥವಾ ಲಿಪಿಯ ಸ್ವರೂಪವನ್ನು ಪಡೆದು ಸಾಹಿತ್ಯವಾಗಿ ಬೆಳೆದಿದೆ.

ದೃಶ್ಯಕಲಾ ಸಾಹಿತ್ಯದ ಇತಿಹಾಸವನ್ನು ನೋಡುವುದಾದರೆ, ಮಾನವನು ನೆಲೆಸಿದ್ದ ಸ್ಥಳಗಳಲ್ಲಿ ತಾನು ರಚಿಸಿದ ಚಿತ್ರಗಳನ್ನು ಪಳಿಯುಳಿಕೆಯಾಗಿ ಬಿಟ್ಟು ಹೋಗಿದ್ದಾನೆ. ಈ ಚಿತ್ರಗಳು ರೇಖೆಗಳಿಂದ ಕೂಡಿದ್ದು, ಇವು ಆತನ ಯಾವುದೋ ಘಟನೆಯನ್ನು ನೆನಪಿಸುವ ಸನ್ನಿವೇಶವಾಗಿರುತ್ತದೆ. ಅಂತಹ ಸಂದರ್ಭಗಳನ್ನು ಚಿತ್ರಿಸುವಲ್ಲಿ ಬೇಟೆಯ ಸನ್ನಿವೇಶಗಳೇ ಹೆಚ್ಚು. ಬೇಟೆಯನ್ನೇ ಮುಖ್ಯ ಕಸುಬಾಗಿ ಹೊಂದಿದ್ದ ಆದಿಮಾನವ ತನಗೆ ಬೇಟೆ ದೊರೆತಾಗ ಅದರ ಸಂತೋಷದಲ್ಲಿಯೇ ಅಥವಾ ಬೇಟೆಯಾಡುವಾಗ ಬಲಿಯಾದ ತಮ್ಮವರ ನೆನಪಿನಲ್ಲಿಯೇ ಇದನ್ನು ರಚಿಸಿರಬೇಕು. ಈ ಬಗೆಯ ಬೇಟೆಯ ಚಿತ್ರಗಳೇ ಅಲ್ಲದೆ ಕುಣಿಯುವ, ಬರೀ ಪ್ರಾಣಿಗಳ ಇಂದಿಗೆ ಅರ್ಥೈಸಲಾಗದ ಅನೇಕ ರೇಖಾಚಿತ್ರಗಳನ್ನು ಸಹಜ ಗುಹಾಲಗಳಲ್ಲಿ ಹಾಗೂ ಕಲ್ಲಾಸರೆಗಳಲ್ಲಿ ಕಾಣುತ್ತೇವೆ. ೪೦,೦೦೦ ವರ್ಷಗಳಷ್ಟು ಪ್ರಾಚೀನ ಕಾಲದಿಂದಲೇ ಅಂದರೆ ಅಂತ್ಯ ಹಳೇ ಶಿಲಾಯುಗ ಹಂತದಿಂದ ಇಂಥ ವಿವಿಧ ಪ್ರಕಾರಗಳ ಕಲಾಕೃತಿಗಳು ಸೃಷ್ಟಿಯಾಗುತ್ತಾ ಬಂದವು. ಈ ಹಿನ್ನೆಲೆಯಲ್ಲಿ ಆದಿಮಾನವನ ಕಾಲದ ಚಿತ್ರಕಲೆಯನ್ನು ಒಂದು ರೀತಿಯಲ್ಲಿ ಚಿತ್ರರೂಪದ ದೃಶ್ಯ ಸಾಹಿತ್ಯ ಎಂಬುದಾಗಿಯೂ ಪರಿಗಣಿಸಬಹುದಾಗಿದೆ. ಹಾಗಾಗಿಯೇ ಪ್ರಾಗಿತಿಹಾಸ ಕಾಲದ ಚಿತ್ರಗಳಿಂದಲೇ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಆರಂಭವೆಂದೂ ನಾವು ಅನಾವರಣಗೊಳಿಸ ಬಹುದು.

ಇತಿಹಾಸ ಪೂರ್ವಕಾಲದ ಬಹುತೇಕ ನೆಲೆಗಳಲ್ಲಿರುವ ಚಿತ್ರಗಳು ರೇಖಾ ರೂಪಗಳಂತಿವೆ. ಬರವಣಿಗೆಯ ಸಾಹಿತ್ಯದಲ್ಲಿ ಅಕ್ಷರಗಳು ಸಂಕೇತಗಳಾದರೆ, ದೃಶ್ಯಕಲಾ ಸಾಹಿತ್ಯದಲ್ಲಿ ಸಂಕೇತಗಳು ಅಕ್ಷರಗಳಾಗಿರುತ್ತವೆ ಎನ್ನಬಹುದು. ಈ ಸಂಕೇತಗಳು ಭಾರತೀಯ ದೃಶ್ಯಕಲೆಯ ಪ್ರಮುಖ ಲಕ್ಷಣಗಳಾಗಿವೆ. ಸಂಕೇತಗಳು ಬೇರೆ ಬೇರೆ ಕಾಲಮಾನಗಳಲ್ಲಿನ ಭಾರತೀಯ ಜೀವನ ಮಟ್ಟವನ್ನು ವಿವಿಧ ಭಾಷೆಗಳೊಂದಿಗೆ ಪ್ರತಿನಿಧಿಸುತ್ತದೆ.

ಪ್ರತಿಯೊಂದು ಭಾಷೆಗೆ ತನ್ನದೇ ಆದ ಲಿಪಿ ಮತ್ತು ಅಕ್ಷರಗಳು ಇರುವುದನ್ನು ನಾವು ಕಾಣುತ್ತೇವೆ. ಕವಿಗೆ ಭಾಷೆಯು ಮಾಧ್ಯಮವಾಗಿದೆ. ಈ ಮೂಲಕ ಅವನು ತನ್ನ ಅಂತರಾಳದ ರಾಗ, ರಸ, ಪಲ್ಲವಿಗಳಿಂದ ಕೂಡಿದ ಸುಮಧುರ ಕಾವ್ಯವಾಗಿ ಹೊರಹೊಮ್ಮಿಸುತ್ತಾನೆ. ಅದರಂತೆ ಕಲಾವಿದನೂ ಸಹ ಕೆಲವೊಂದು ಸಂಕೇತಗಳನ್ನು ಸೃಷ್ಟಿಸಿ ಭಾಷೆಯಾಗಿ ಬಳಸುತ್ತಾನೆ. ಭಾಷೆಯಿಂದ ಕೆಲವು ವೇಳೆ ಖಚಿತವಾದ ಅಭಿಪ್ರಾಯವನ್ನು ಹೊರಗೆಡುಹಲು ಸಾಧ್ಯವಾಗದಿರಬಹುದು. ಆದರೆ ಸಂಕೇತಗಳಿಂದ ಯಾವುದೇ ಅಭಿಪ್ರಾಯವನ್ನು ಭಾಷೆಯ ಅಗತ್ಯವಿಲ್ಲದೆ ತಿಳಿಸಬಹುದು. ಒಂದು ಚಿತ್ರಕ್ಕೆ ಸಾವಿರ ಪದಗಳ ಅರ್ಥವಿದೆ ಎಂದು ಹೇಳಲಾಗಿದೆ. ಕಲಾವಿದನು ತನ್ನ ಭಾವನೆಗಳಿಂದ ಒಂದು ರೂಪ ನೀಡಿ ಚಿತ್ರಿಸುತ್ತಾನೆ. ಅದು ಸ್ವಪರಿಪೂರ್ಣವೂ, ನೈಜವೂ, ರಮ್ಯವೂ, ಮೌಲ್ಯಭರಿತವೂ ಆಗಿ ಹೊರ ಹೊಮ್ಮುತ್ತದೆ. ಆದುದರಿಂದ ಭಾರತೀಯ ದೃಶ್ಯಕಲೆಯಲ್ಲಿ ಸಂಕೇತಗಳು ಭಾಷೆಗಳು.

'ಭಾಷೆ' ಎಂಬ ಅರ್ಥಕ್ಕೆ ಅಗರ್‌ವಾಲರು ಹೇಳುವ ಹಾಗೆ ಒಂದು ಧರ್ಮ, ಒಂದು ತತ್ವ ಮತ್ತು ಒಂದು ಸಾಹಿತ್ಯವನ್ನು ತಿಳಿಯಪಡಿಸುವ ಸಾಧನವಾಗಿದೆ. ಇದು ದೃಶ್ಯಕಲಾ ಸಾಹಿತ್ಯದ ರೂಪವೆಂದು ಹೇಳಬಹುದು. ಈ ಎಲ್ಲ ಸಂಕೇತಗಳು ವೈದಿಕ ಕಾಲದ ಕಲ್ಪನೆಗಳಾಗಿವೆ. ಇದರಲ್ಲಿ ಕಂಡುಬರುವ ತೊಡಕುಗಳೆಂದರೆ ಈ ಸಂಕೇತಗಳ ಅಧ್ಯಯನ ಮತ್ತು ಅದರಲ್ಲಿ ಅಡಗಿರುವ ಅರ್ಥದ ಗ್ರಹಣ ಈ ಸಂಕೇತದ ಮೌಲ್ಯಗಳನ್ನು ಕುರುಡು ಮತ್ತು ಮೂಢ ನಂಬಿಕೆಯೆಂದು ಭಾವಿಸದೆ ವೈಜ್ಞಾನಿಕ ರೀತಿಯಲ್ಲಿ ಅಭ್ಯಸಿಸಿದರೆ ಭಾರತೀಯ ದೃಶ್ಯಕಲೆಯ ಸಂಕೇತಗಳೇ ಭಾಷೆಯಂತೆ ವರ್ತಿಸುತ್ತವೆ. ಭಾಷೆಯ ಅಗತ್ಯ ಕಂಡುಬರುವುದಿಲ್ಲವಾದರೂ ಜನ ಸಾಮಾನ್ಯರಿಗೆ ಅರ್ಥವಾಗಬೇಕಾದರೆ ಶಬ್ದಗಳ ಮೂಲಕ ಕಟ್ಟಿಕೊಟ್ಟಾಗ ಮಾತ್ರ ದೃಶ್ಯಕಲೆಯ ಕುರಿತು ತಿಳಿದುಕೊಳ್ಳುವುದು ಸುಲಭವಾಗುತ್ತದೆ.

ಸಾಹಿತ್ಯದ ಉಲ್ಲೇಖ ಅಥವಾ ಆರಂಭವನ್ನು ನಾವು ವೇದಗಳಿಂದಲೇ ಪರಿಗಣಿಸುತ್ತೇವೆ. ಹಾಗೆ ಚಿತ್ರಕಲಾ ಸಾಹಿತ್ಯವೂ ಇದಕ್ಕೆ ಪೂರಕವಾಗಿಯೇ ವೇದಗಳ ಕಾಲದಿಂದಲೇ ಆರಂಭಗೊಳ್ಳುತ್ತದೆ. 'ವೇದಗಳೇ ಸರ್ವಕಲೆಗಳಿಗೂ ಮೂಲ'ಎಂದು ಭಾರತೀಯರ ನಂಬುಗೆ, ವಾಸ್ತುಶಿಲ್ಪಕಲೆ, ಸಂಗೀತ, ಸಾಹಿತ್ಯ, ಚಿತ್ರಕಲೆ, ನಾಟ್ಯ, ನಾಟಕ ಇವು ಲಲಿತ ಕಲೆಗಳೆಂದು ಹೆಸರು ಪಡೆದಿವೆ. ಋಗ್ವೇದದಲ್ಲಿ ಕಲೆ, ಕಲಾವಿದರು, ಬಣ್ಣ, ರೇಖೆ, ಅಲಂಕಾರದಂತಹ ಸಂಗತಿಗಳು ವ್ಯಕ್ತಗೊಂಡಿವೆ. ಉಪನಿಷತ್ತುಗಳು, ಅರಣ್ಯಕಗಳು, ಪುರಾಣಗಳಲ್ಲಿನ ಅನೇಕ ಪ್ರಸಂಗಗಳಲ್ಲಿ ಚಿತ್ರಕಲೆಯ ಪ್ರಸ್ತಾಪ ಬರುತ್ತದೆ. ರಾಮಾಯಣ, ಮಹಾಭಾರತ, ಕಾಳಿದಾಸನ ನಾಟಕಗಳಲ್ಲಿ ಭರತನ ನಾಟ್ಯಶಾಸ್ತ್ರದಲ್ಲಿ, ಭಾಷಭವಭೂತಿಗಳ ಮೇಘದೂತ, ರಘುವಂಶ, ಶಕುಂತಲ, ವಾತ್ಸಾಯನನ ಕಾಮಸೂತ್ರದಲ್ಲಿ, ಬಾಣಭಟ್ಟನ ಕಾದಂಬರಿ ಕೃತಿಗಳಲ್ಲಿ ಚಿತ್ರಕಲೆಯ ಬಗ್ಗೆ ಪ್ರಸ್ತಾಪ ಬರುತ್ತದೆ. ಭಯಜೀತನ ಕಲೆ, ಅನಿರುದ್ಧರ ಪ್ರಸಂಗ, ಚಿತ್ರಲೇಖೆಯ ಕತೆ ಹೀಗೆ ಹೆಚ್ಚೂ ಕಡಿಮೆ ಎಲ್ಲ ಕೃತಿಗಳಲ್ಲಿಯೂ ಪ್ರಾಸಂಗಿಕವಾಗಿ ಚಿತ್ರಕಲೆಯ ಉಲ್ಲೇಖವಿದೆ.

ಕ್ರಿ.ಪೂ.೧ನೇ ಶತಮಾನದಲ್ಲಿ ರಚನೆಯಾಗಿದೆ ಎಂದು ನಂಬಲಾಗಿರುವ ನಗ್ನಜಿತನ 'ಚಿತ್ರಲಕ್ಷಣ' ಚಿತ್ರಕಲೆಯ ಬಗೆಗಿರುವ ಸಾಹಿತ್ಯ ಕೃತಿಯಾಗಿದೆ. ನಂತರ ವಿಷ್ಣುಧರ್ಮೋತ್ತರ ಪುರಾಣ, ಸಮರಾಂಗಣ ಸೂತ್ರಧಾರ, ಕಾಶ್ಯಪ ಶಿಲ್ಪಶಾಸ್ತ್ರ, ಶಿಲ್ಪರತ್ನ, ಶಿವತತ್ವ ರತ್ನಾಕರ, ಮಾನಸೋಲ್ಲಾಸ, ಮುಂತಾದವುಗಳು ವಿಶ್ವಕೋಶ ಮಾದರಿಯ ಗ್ರಂಥಗಳಾಗಿದ್ದು ಚಿತ್ರಕಲೆ ಮತ್ತು ಶಿಲ್ಪಕಲೆಯ ಬಹುಮುಖ್ಯ ಸಂಗತಿಗಳನ್ನು ತಿಳಿಸಿಕೊಡುತ್ತವೆ.

ಬ್ರಿಟೀಷರ ಆಗಮನದೊಂದಿಗೆ ಭಾರತೀಯ ಚಿತ್ರಕಲಾ ಇತಿಹಾಸದ ರೂಪುರೇಷೆಗಳು ಬದಲಾದವು. ಕಲಾಶಿಕ್ಷಣಕ್ಕಾಗಿ ಪ್ರತ್ಯೇಕ ಕಲಾಶಾಲೆಗಳೇ ಆರಂಭಗೊಂಡಂತೆ ಪ್ರತ್ಯೇಕವಾದ ಕಲಾಸಾಹಿತ್ಯದ ಬರವಣಿಗೆಯೂ ಆರಂಭಮಾಡಿದರು. ಅವರಲ್ಲಿ ಪ್ರಮುಖರಾದವರು ಸ್ಟೆಲ್ಲಾ

ಕ್ರಾಮಿಸ್ಟ್, ಇ.ಬಿ.ಹ್ಯಾವೆಲ್, ಪರ್ಶಿಬ್ರೌನ್, ಆನಂದಕುಮಾರಸ್ವಾಮಿಯವರು ಇವರನ್ನು ಭಾರತೀಯ ದೃಶ್ಯಕಲೆಯ ಪುನರುಜ್ಜೀವನ ಕಾಲದ ಮೂಲಪುರುಷರೆಂದರೆ ತಪ್ಪಾಗಲಾರದು.

ಭಾರತೀಯ ಹಾಗೂ ಏಷಿಯಾದ ಕಲೆಗಳ ಹಿರಿಮೆಯನ್ನು ಜಗತ್ತಿಗೆ ತಿಳಿಯಪಡಿಸಲು ನಮ್ಮ ಕಲೆಗಳ ಬಗ್ಗೆ ವಿಪುಲ ಸಂಖ್ಯೆಯಲ್ಲಿ ಗ್ರಂಥಗಳನ್ನು ಲೇಖನಗಳನ್ನು ಬರೆದರು. ಭಾರತೀಯ ಕಲಾವಿದರಲ್ಲಿ ಇದರ ಮಹತ್ವಗಳನ್ನು ಮನಗಾಣಿಸಲು ಅನೇಕ ಕಲಾ ಚಟುವಟಿಕೆಗಳನ್ನು, ಶಿಬಿರಗಳನ್ನು, ಉಪನ್ಯಾಸಗಳನ್ನು ಮಾಡಿದರು. ಇದರಿಂದ ಎಚ್ಚರಗೊಂಡ ನಮ್ಮ ಕಲಾವಿದರು ದೇಶೀಯ ಶೈಲಿಯಲ್ಲಿ ಚಿತ್ರರಚನೆಗೆ ಮುಂದಾದರು. ಹಾಗೆ ಸಾಹಿತಿಗಳು ತಮ್ಮ ಬರವಣಿಗೆಯ ಮೂಲಕ ಅನೇಕ ಪುಸ್ತಕ, ಲೇಖನಗಳನ್ನು ಬರೆದು ಪ್ರಪಂಚದಾದ್ಯಂತ ಪರಿಚಯ ಮಾಡ ತೊಡಗಿದರು. ಹೀಗೆ ಕಲಾವಿದರು ಕೃತಿಗಳನ್ನು ರಚಿಸಿ ಪರಿಚಯಿಸಿದರೆ ಸಾಹಿತ್ಯ, ಲೇಖಕರು, ವಿಮರ್ಶಕರು ತಮ್ಮ ಲೇಖನ ಆಯುಧದ ಮೂಲಕ ಬರವಣಿಗೆಯಲ್ಲಿ ತೋರ್ಪಡಿಸಲು ಮುಂದಾದರು. ಹೀಗೆ ಭಾರತೀಯ ಕಲೆಯು, ಪುನರಜ್ಜೀವನ ಕಾಲದಲ್ಲಿ ಕಲೆಯ ಪುನರ್ ಮನನದ ಜೊತೆಗೆ ಪ್ರತ್ಯೇಕ ದೃಶ್ಯಕಲಾ ಸಾಹಿತ್ಯ ಕೃತಿಗಳ ರಚನೆಗೆ ನಾಂದಿಯಾಯಿತು ಎನ್ನಬಹುದು.

೧೯ನೇ ಶತಮಾನ ಬ್ರಿಟೀಷರ ಆಗಮನ ಪೂರ್ವ ಮತ್ತು ನಂತರದಿಂದ ಕ್ರಿ.ಶ.೧೯ನೇ ಶತಮಾನದ ೪ನೇ ದಶಕದವರೆಗೂ ಪ್ರತ್ಯೇಕ ಕಲಾಸಾಹಿತ್ಯ ಕೃತಿಗಳು ರಚನೆಗೊಂಡಿದ್ದರೂ ಅವುಗಳ ಸಂಖ್ಯೆ ಅತ್ಯಂತ ವಿರಳ ಎನ್ನಬಹುದು. ಮುಮ್ಮಡಿ ಕೃಷ್ಣರಾಜ ಒಡೆಯರು ಬರೆದ ಶ್ರೀತತ್ವನಿಧಿಯಲ್ಲಿ ಹಾಗೆ ಅವರ ಸಂಸ್ಥಾನದಿಂದ ಬಂದಿರುವ ಸೌಗಂಧಿಕ ಪರಿಣಯ, ವಜ್ರರಾಜನ ಕಥೆ, ಸ್ವರಚೂಡಾಮಣಿ, ನಿಘಂಟುಗಳಲ್ಲಿ ಕಲೆಯ ಉಲ್ಲೇಖನಗಳು ಕಾಣುತ್ತೇವೆ. ನಂತರ ಮೊಘಲರ ಕಾಲದಲ್ಲಿ ಹಂಸನಾಮ, ಬಾಬರ್ ನಾಮ, ರಸುಂ ನಾಮ, ಹಸ್ತಪ್ರತಿಯಾದ 'ನಜಂ ಉಲಂ' ಗ್ರಂಥದಲ್ಲಿ ಕಲೆ ಮತ್ತು ಸಂಸ್ಕೃತಿಯ ಉಲ್ಲೇಖಗಳು ಕಾಣುತ್ತೇವೆ.

ನಂತರ ಬಂದ ಶಿವರಾಮ ಕಾರಂತರು ಬರೆದ, 'ಭಾರತೀಯ ಚಿತ್ರಕಲೆ', ಎಂ.ವಿ. ಸೀತಾರಾಮಯ್ಯ ಅವರ ಸಾಹಿತ್ಯ ಮತ್ತು ಚಿತ್ರಕಲೆ, ಅ.ನ.ಕೃಷ್ಣರಾಯರು 'ಭಾರತೀಯ ಚಿತ್ರಕಲೆಯಲ್ಲಿ ರಾಜರವಿವರ್ಮನ ಸ್ಥಾನ', ಎಂ.ಎಚ್.ಕೃಷ್ಣ ಅವರ ಇಂಗ್ಲೀಷ್‌ನಲ್ಲಿ 'Ajantha and Ellora' ಬಗ್ಗೆ ಮತ್ತು ರುಮಾಲೆ ಚೆನ್ನಬಸವಯ್ಯ ಅವರು 'ನಮ್ಮ ಲಲಿತ ಕಲಾವಿದರು' ಎಂಬ ಬೆರಳಣಿಕೆಯಷ್ಟೇ ಲೇಖಕರಿಂದ ಕೆಲವೇ ಕೆಲವು ಪ್ರತ್ಯೇಕ ಕಲಾ ಸಾಹಿತ್ಯಕೃತಿಗಳು ಬಂದಿವೆ.

ಸ್ವಾತಂತ್ರ್ಯೋತ್ತರ ಕಾಲದಿಂದ ೨೦ನೇ ಶತಮಾನದವರೆಗೂ ಚಿತ್ರಕಲಾ ಸಾಹಿತ್ಯದ ಕೃತಿಗಳು ಹೆಚ್ಚಿನ ಪ್ರಮಾಣದಲ್ಲಿ ದೊರಕುತ್ತವೆ. ೧೯೪೭ರ ನಂತರ ಕರ್ನಾಟಕದ ಚಿತ್ರಕಲಾ ಸಾಹಿತ್ಯದ ಪರ್ವಕಾಲವೆಂದು ಪರಿಗಣಿಸಬಹುದು. ಈ ಹಂತದಲ್ಲಿ ಕೃತಿ ರಚನೆಗೊಳ್ಳತೊಡಗಿದ್ದು ಮಾತ್ರವಲ್ಲದೆ ಸ್ವತಃ ಕಲಾವಿದರೇ ತಮ್ಮ ಕ್ಷೇತ್ರದ ಬಗ್ಗೆ ಬರವಣಿಗೆಯಲ್ಲಿ ಹಿಡಿದಿಡಲು ಸಮರ್ಥರಾಗುತ್ತಿದ್ದಾರೆ. ಇದು ಒಂದು ಸಂತೋಷದಾಯಕವಾದ ಸಂಗತಿಯಾಗಿದೆ.

ಸಮಕಾಲೀನ ಕಲಾಕೃತಿಗಳನ್ನು ನಾವು ನೋಡಿದಾಗ, ಕಲೆಯಲ್ಲಿನ ಬೆಳವಣಿಗೆ ಜೊತೆಗೆ ವೈವಿಧ್ಯತೆ ಅವುಗಳಲ್ಲಿನ ರೂಪ, ವಿಷಯ, ಮೈವಳಿಕೆಗಳು, ಮುಖ್ಯವಾಗಿ ಕಲಾಕೃತಿಯಲ್ಲಿ ಅವ್ಯಕ್ತಪಡಿಸಿದ ಭಾವನೆಗಳು ಸಾಮಾನ್ಯ ಮನುಷ್ಯನಿಗೆ ಅರ್ಥವಾಗದ ಹಾದಿಯಲ್ಲಿ ಸಹೃದಯ ದೂರ ಸಾಗುತ್ತಿದ್ದಾನೆ. ಈ ದಿಶೆಯಲ್ಲಿ ಕಲಾವಿದನೆ ಸ್ವತಃ ತನ್ನ ಭಾವನೆಗಳನ್ನು ಹಿಡಿದಿಡಲು ಸಹೃದಯನಿಗೆ ಅರ್ಥವಾಗಿಸಲು ಬರವಣಿಗೆಯ ಮಾಧ್ಯಮವು ತುಂಬಾ ಅವಶ್ಯಕ ಎನ್ನಿಸಿದೆ.

ಕಲಾವಿದನು ಮೌನಿ ಅವನು ತನ್ನೆಲ್ಲ ಭಾವನೆಗಳನ್ನು ಬರವಣಿಗೆಯಲ್ಲಿ ಹಿಡಿದಿಡುವುದು ಕಷ್ಟ. ಕಲಾವಿದನಿಗೆ ಬರವಣಿಗೆಯ ಭಾಷೆ ಮುಖ್ಯವಲ್ಲ ಎಂಬುದು ಅನೇಕ ಕಲಾವಿದರ ಅಭಿಪ್ರಾಯವಾಗಿತ್ತು. ಆದರೆ ಇತ್ತೀಚಿನ ದಿನಗಳಲ್ಲಿ ದೃಶ್ಯಕಲಾ ಕ್ಷೇತ್ರಕ್ಕೆ ಬರವಣಿಗೆಯು ತುಂಬಾ ಮುಖ್ಯವಾಗಿದೆ. ಇತಿಹಾಸಪೂರ್ವದ ಮತ್ತು ಸಮಕಾಲೀನ ಕಲೆಯ ಆಗುಹೋಗುಗಳನ್ನು ಹಿಡಿದಿಡಲು ಇದೊಂದು ಪ್ರಮುಖ ಸಾಧನವಾಗಿದೆ. ಈ ನಿಟ್ಟಿನಲ್ಲಿ ಕೆಲವು ಕಲಾವಿದರು ಲೇಖನ, ಪುಸ್ತಕಗಳನ್ನು ಬರೆದಿರುವುದನ್ನು ಕಾಣಬಹುದಾಗಿದೆ.

ಪಿ.ಆರ್.ತಿಪ್ಪೇಸ್ವಾಮಿ 'ಬೆಳೆದು ಬಂದ ಭಾರತದ ಚಿತ್ರಕಲೆ', ಎಂ.ವೀರಪ್ಪ 'ಕರ್ನಾಟಕದ ಕಲೆಗಳು, 'ಪ್ರಶಸ್ತಿ ಪಡೆದ ಕಲಾವಿದರು', 'ಕಲಾವಿದ ಕಂಡ ಫ್ರಾನ್ಸ್'ಎಂಬ ಪುಸ್ತಕಗಳನ್ನು ಬರೆದಿದ್ದಾರೆ. ಎನ್.ಮರಿಶಾಮಾಚಾರ್ 'ಸಮಕಾಲೀನ ಕಲೆ', 'ಕಲಾಕೋಶ', ಟಿ.ಪಿ.ಅಕ್ಕಿ ಅವರ 'ಕಲಾನಿವೇದನೆ', ಬಿ.ಪಿ.ಬಾಯಿರಿ ಅವರ 'ಚಿಕ್ಕಮಕ್ಕಳ ಚಿತ್ರಕಲೆ', 'ಕಲೆಗಾರರ ಕಥೆಗಳು', 'ಬಾರತೀಯ ಚಿತ್ರಕಲೆ', 'ನವ್ಯಕಲೆ ಹಾಗೂ ಕಲೆಗಾರರು' ಹೀಗೆ ಬೆರಳೆಣಿ ಕಲಾವಿದರು ಕೃತಿ ರಚನೆಗೆ ತೊಡಗಿದ್ದು ಸ್ಪಷ್ಟಪಡಿಸಬಹುದು.

ಇತ್ತೀಚೆಗೆ ದೃಶ್ಯಕಲಾ ಕ್ಷೇತ್ರದಲ್ಲಿಯೇ ಇದ್ದುಕೊಂಡು ದೃಶ್ಯಕಲಾ ಸಾಹಿತ್ಯದ ಬೆಳವಣಿಗೆಗೆ ವಿಶೇಷ ಕೊಡುಗೆ ನೀಡಿದವರಲ್ಲಿ ಅತ್ಯಂತ ಪ್ರಮುಖರಾದವರಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಒಬ್ಬರು. ಇವರ ನಂತರ ಉಲ್ಲೇಖಿಸಬಹುದಾದ ಹೆಸರುಗಳೆಂದರೆ ಶಂಕರ್ ಪಾಟೀಲ, ಚಿ.ಸು.ಕೃಷ್ಣಶೆಟ್ಟಿ, ಡಿ.ಎಸ್.ಚೌಗಲೇ, ಚಂದ್ರಕಾಂತ ಕುಸುನೂರು, ಎಂ.ಎಚ್.ಕೃಷ್ಣಯ್ಯ, ಬಿ.ಕೆ.ಹಿರೇಮಠ, ಅ.ಲ.ನರಸಿಂಹನ್, ಗವೀಶ್ ಹಿರೇಮಠ, ಡಾ.ಎಸ್.ಸಿ.ಪಾಟೀಲ, ಎಚ್.ಎ.ಅನಿಲಕುಮಾರ್, ಬಿ.ವಿ.ಕೆ.ಶಾಸ್ತ್ರಿ, ರವಿಕುಮಾರ ಕಾಶಿ, ಡಾ.ಶಿವಾನಂದ ಎಚ್.ಬಂಟನೂರು, ಡಾ.ಮಲ್ಲಿಕಾರ್ಜುನ ಬಾಗೋಡಿ ಮೊದಲಾದವರು ಹೀಎ ಯುವ ಕಲಾ ಬರಹಗಾರರ ಪಟ್ಟಿ ಬೆಳೆಯುತ್ತಲೇ ಹೋಗುತ್ತದೆ.

## ಅಧ್ಯಯನದ ಉದ್ದೇಶ

ಸಾಮಾನ್ಯವಾಗಿ ಶಾಬ್ದಿಕ ಭಾಷೆಯಲ್ಲಿನ ಗ್ರಂಥಗಳ ಸಮೂಹವನ್ನು ಸಾಹಿತ್ಯವೆಂದು ಕರೆಯುತ್ತೇವೆ. ಇದು ಭಾಷಾ ಮಾಧ್ಯಮದ ಮೂಲಕ ಸೃಷ್ಟಿಯಾದ ಕಲಾಕೃತಿ. ಸಾಮಾನ್ಯವಾಗಿ

ಯಾವುದೇ ಭಾಷೆಯ ಉಗಮದೊಡನೆ ಒಂದು ಬಗೆಯ ಸಾಹಿತ್ಯದ ಉದಯವೂ ಆಗುತ್ತದೆ. ಇಷ್ಟೆ ಏಕೆ? ಭಾಷೆಯ ಉಗಮವೆಂದರೆ, ಸಾಹಿತ್ಯದ ಉಗಮವೇ ಸರಿ. ಸ್ಥೂಲವಾಗಿ ಹೇಳುವುದಾದರೆ, ರಸಾನುಭವದ ಸುಂದರವಾದ ಅಭಿವ್ಯಕ್ತಿಯೇ ಸಾಹಿತ್ಯ. ಸಾಹಿತ್ಯದ ಈ ಮೂಲ ತತ್ವ ಅಭಿವ್ಯಕ್ತಿಯ ಸಾಧನವಾದ ಭಾಷೆಯಲ್ಲಿಯೂ ಇರುತ್ತದೆ. ಇದಕ್ಕೆ ಮೂಲವಾದ ಸೌಂದರ್ಯದ ಪ್ರಜ್ಞೆ ಮನುಷ್ಯನಷ್ಟು ಪ್ರಾಚೀನವಾದುದು.

ಮಾನವನ ಪ್ರತಿಯೊಂದು ಅನುಭವಕ್ಕೂ ಒಂದು ಇತಿಹಾಸವಿರುವಂತೆ ಮಾನವ ನಿರ್ಮಿತ ಸಾಹಿತ್ಯಕ್ಕೂ ಒಂದು ಇತಿಹಾಸವಿದೆ. ಈ ಸಾಹಿತ್ಯ ಚರಿತ್ರೆಯನ್ನು ಅರಿಯಬೇಕು. ಇದನ್ನು ಅರಿಯಲು ಆಧಾರಗಳು ಅವಶ್ಯಕ. ಕೆಲವೊಮ್ಮೆ ಆಧಾರಗಳೂ ಸಿಗದೇ ಹೋಗಬಹುದು. ಇದರಿಂದ ಆ ಭಾಷೆಯ ಸಾಹಿತ್ಯ ಚರಿತ್ರೆಯನ್ನು ಕ್ರಮವಾಗಿ ನಿರೂಪಿಸಲು ಅಸಾಧ್ಯವಾಗುತ್ತದೆ. ಆದುದರಿಂದ ಸಾಹಿತ್ಯ ಚರಿತ್ರೆಗೆ ಮುಖ್ಯ ಆಧಾರವೆಂದರೆ, ಆ ಭಾಷೆಯಲ್ಲಿರುವ ಗ್ರಂಥ ಸಮುದಾಯ. ಇಂಥ ಒಂದು ಗ್ರಂಥ ಸಮುದಾಯದ ವ್ಯವಸ್ಥಿತ ಅಧ್ಯಯನವೇ ಸಾಹಿತ್ಯ ಚರಿತ್ರೆ.

ಯಾವುದೇ ಭಾಷೆಯ ಸಾಹಿತ್ಯ ಚರಿತ್ರೆಗೆ ತನ್ನದೇ ಆದ ವಿಶೇಷವಾದ ಸ್ವರೂಪವೂ ಇರುತ್ತದೆ. ಪ್ರವೃತ್ತಿ, ಪ್ರಭಾವ ಮತ್ತು ವಿಕಾಸ ಇದರ ಸಾಮಾನ್ಯ ಸ್ವರೂಪವವನ್ನು ತಿಳಿಸಿದರೆ, ಕಾಲ, ದೇಶ, ಪರಿಸ್ಥಿತಿ, ರಾಜಕೀಯ ಚರಿತ್ರೆ, ಸಾಮಾಜಿಕ, ಧಾರ್ಮಿಕ ಜೀವನ ಮತ್ತು ಸಾಹಿತ್ಯ ಪರಿಸರ ಅದರ ವಿಶಿಷ್ಟ ಸ್ವರೂಪವನ್ನು ತಿಳಿಸುತ್ತದೆ.

ಸಾಹಿತ್ಯದಲ್ಲಿ ಎರಡು ವಿಭಾಗಗಳಾಗಿ ವಿಂಗಡಿಸಬಹುದು. ಶುದ್ದಸಾಹಿತ್ಯ ಮತ್ತು ಶಾಸ್ತ್ರ ಸಾಹಿತ್ಯ ಅಥವಾ ಸೃಜನಶೀಲ ಸಾಹಿತ್ಯ ಮತ್ತು ಸೃಜನೇತರ ಸಾಹಿತ್ಯ ಎಂದೂ ಕರೆಯಬಹುದು. ಶುದ್ಧ ಸಾಹಿತ್ಯ ಹೃದಯ ಸೇರಿದ್ದಾದರೆ, ಶಾಸ್ತ್ರ ಸಾಹಿತ್ಯ ಬುದ್ಧಿ, ಗುರಿ, ಜ್ಞಾನ ಪ್ರಸಾರವೇ ಶಾಸ್ತ್ರ ಸಾಹಿತ್ಯದ ಉದ್ದೇಶ. ಇವೆರಡಕ್ಕೂ ಅವಿಭಾಜ್ಯ ಸಂಬಂಧವಿದೆ. ಇವೆರಡರ ಸಂಗಮದಿಂದ ಆಯಾ ಭಾಷೆಯ ಹಿರಿಮೆ ಹೆಚ್ಚುತ್ತದೆ. ಇವೆರಡು ಸಮಾನವಾಗಿ ಬೆಳದಾಗಲೇ ಆ ಭಾಷೆಯ ಮಹತ್ವ ಹೆಚ್ಚುತ್ತದೆ.

ಸಾಹಿತ್ಯವು ಗ್ರಂಥರೂಪದಲ್ಲಿ ನಿಲ್ಲಲು ಆಯಾ ಭಾಷೆಗೆ ಲಿಪಿಯೊಂದು ಉಂಟಾಗಿರಬೇಕು. ಗ್ರಂಥ ಬರೆಯಲು ಪ್ರವೃತ್ತನಾದ ವ್ಯಕ್ತಿಯಲ್ಲಿ ಗ್ರಂಥಸ್ಥನದ ಅಂದರೆ ಕಲಾಯುತವಾದ ರಚನೆಯ ಉದ್ದೇಶ ಮತ್ತು ನೈಪುಣ್ಯ ತೋರಿರಬೇಕು. ಸೌಂದರ್ಯದೃಷ್ಟಿ ಹಾಗೂ ಪ್ರತಿಭೆ ಇವಿಷ್ಟೇ ಇದ್ದರೆ ಸಾಲದು ಸಾಮಾನ್ಯವಾಗಿ ಎಲ್ಲ ಸಾಹಿತ್ಯದ ಉದಯಕ್ಕೆ ಕಾರಣವಾಗಿ ಮೇಲಿನ ಎರಡು ಸಂಗತಿಗಳು ಇದ್ದೇ ಇರುತ್ತವೆ. ಇದಕ್ಕೆ ಅಪವಾದವಿಲ್ಲವೆಂಬಂತೆ ದೃಶ್ಯಕಲಾ ಸಾಹಿತ್ಯವು ಬೆಳೆದು ಬಂದಿದೆ.

ದೃಶ್ಯಕಲಾ ಸಾಹಿತ್ಯ ಸಾಹಿತ್ಯದಷ್ಟೇ ಸಹಜ ಸ್ಫೂರ್ತವಾದರೂ ಅದಕ್ಕಿಂತ ಹೆಚ್ಚು ಸಂಸ್ಕಾರ ಹೊಂದಿದೆ. ಬರಹದ ಹಿಡಿತಕ್ಕೆ ಸಿಕ್ಕದ ಸಾಹಿತ್ಯವು ಹಿಂದಿನಿಂದಲೂ ನಿರ್ಮಾಣವಾಗಿದೆ. ಜಗತ್ತಿನಲ್ಲಿ ಅತೀ ಪ್ರಾಚೀನ ವಾಙ್ಞೆಯದಲ್ಲಿ ಅಳವಡುವ ವೇದ-ವೇದಾಂತಗಳು ಸಂಸ್ಕೃತದಲ್ಲಿವೆ. ವಚನ-ಕೀರ್ತನೆಗಳು ಕನ್ನಡದಲ್ಲಿವೆ. ಋಷಿಗಳ ಹಾಗೂ ಭಕ್ತರ ಕಿವಿಗಳಲ್ಲಿ ಇವು ಕೇಳಿದಾಗ ಹೃದಯ ಪಟಲದಲ್ಲಿ ನೆಲೆನಿಂತ ಕಾರಣ ಇವಕ್ಕೆ ಶ್ರುತಿಯೆಂಬ ಸಾರ್ಥಕವಾದ ಹೆಸರು ಬಂದಿತು. ಕೃತಿಯೆಂಬ ಸ್ವರೂಪದ ಸಾಹಿತ್ಯಕ್ಕಿಂತ ಇವು ಬೇರೆಯಾದವು. ಆಮೇಲೆ ಇದನ್ನು ಲಿಪಿಬದ್ದಗೊಳಿಸಿದರು. ಕೃತಿಯ ದೃಷ್ಟಿಯಿಂದ ನೋಡತೊಡಿದರು.

ದೃಶ್ಯಕಲಾ ಸಾಹಿತ್ಯೋದಯಕ್ಕೆ ಇರಬಹುದಾದ ಕಾರಣಗಳು ಆಂತರಿಕ, ಬಾಹ್ಯ ಎಂದು ಇಬ್ಬಗೆಯಾಗಿ ಇರುತ್ತದೆ. ಎಲ್ಲವು ಎಲ್ಲ ಸಾಹಿತ್ಯಕ್ಕೆ ಸರಿಹೋಗುತ್ತದೆ ಎಂದಲ್ಲ. ಅವುಗಳಲ್ಲಿ ಕೆಲವು ಏಕಕಾಲಕ್ಕೆ ಕೂಡಿಬಂದಾಗ ಸಾಹಿತ್ಯವೂ ಉದಯವಾಗುತ್ತದೆ.

ಮನುಷ್ಯನ ಮನಸ್ಸು ಬೆಳೆದಂತೆ ಅವನು ಹೊಸ ಹಂಬಲಗಳನ್ನು ಪಡೆಯುತ್ತಾನೆ. ಹೊಸ ಸಂಸ್ಥಾನಗಳನ್ನು ಹೊಂದುತ್ತಾನೆ. ಅಂದಂದಿನ ಮಟ್ಟಿಗೆ ಯೋಚಿಸುವ ಅವನು ಹಿಂದು ಮುಂದನ್ನು ಬಗೆಯುತ್ತಾನೆ. ತಾನು ಕಂಡ ಚೆಲುವು, ಉಂಡ ನಲಿವು ತನ್ನಂತೆ ಇತರರಿಗೆ ದೊರೆಯಲಿ, ಇಂದಿನಂತೆ ಮುಂದೆಯೂ ದೊರೆಯಲಿ ಎಂಬ ಸಾಮಾಜಿಕ ಪ್ರೇರಣೆ ರೀತಿಯ ಹಂಬಲ ಅವನಲ್ಲಿ ಹುಟ್ಟುತ್ತದೆ. ನಾಗರಿಕತೆ ಈ ನೆಲೆಗೆ ಬಂದಾಗ ಗ್ರಂಥಸ್ಥವಾದವು ಸಾಹಿತ್ಯಕ್ಕೆ ಭೂಮಿಕೆ ಸಿದ್ಧವಾಗುತ್ತದೆ. ಇದರಲ್ಲಿ ವ್ಯಕ್ತಿಯ ಆಂತರಿಕ ಆಕಾಂಕ್ಷೆಯಂತೆ ಸಮಾಜದ ಸಾಮೂಹಿಕ ಅಪೇಕ್ಷೆ ಅಷ್ಟೇ ಮಹತ್ವದ್ದಾಗಿದೆ. ಸಮಾಜದಲ್ಲಿ ಪರಂಪರೆಯ ಪ್ರೀತಿ, ಪ್ರಗತಿಯ ಒಲವುಗಳು ಉದಯವಾದರೆ ಸಾಹಿತ್ಯೋದಯಕ್ಕೆ ಕಾರಣವುಂಟಾಗುತ್ತದೆ.

ದೃಶ್ಯಕಲಾ ಸಾಹಿತ್ಯದಲ್ಲಿ ವೇದಗಳ ಕಾಲದಿಂದಲೂ ಬಂದಿರುವ ಸಾಹಿತ್ಯ ರಚನೆಗಳು ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ಕೆಲವು ಮಟ್ಟದಲ್ಲಿ ಪೂರಕವಾಗಿ ಹೇಳಿಕೊಂಡು ಬರುತ್ತಿದ್ದಾರೆ. ಆದರೆ ದೃಶ್ಯಕಲಾ ಸಾಹಿತ್ಯದ ಪ್ರತ್ಯೇಕ ಸಾಹಿತ್ಯ ಎಂದು ಇದುವರೆಗೆ ಅಂದರೆ, ೧೮ನೇ ಶತಮಾನದವರೆಗೆ ನಮಗೆ ಕಂಡುಬರುವುದಿಲ್ಲ. ಉಳಿದ ಎಲ್ಲಾ ಕ್ಷೇತ್ರಗಳಲ್ಲಿಯೂ ಶತಮಾನದ ಆರಂಭ ಮತ್ತು ಪೂರ್ವದಿಂದಲೇ ಸಾಹಿತ್ಯಕ್ಕೆ ಆಧಾರಗಳು ದೊರೆತಿದೆ. ಆದರೆ ದೃಶ್ಯಕಲೆಗಳಿಗೆ ಸಂಬಂಧಿಸಿದಂತೆ ಇತ್ತೀಚಿನ ದಿನಗಳಲ್ಲಿ ಅದರ ಮೌಲ್ಯವು ನಮಗೆ ಗೋತ್ತಾಗಿರುವುದರಿಂದ ಸಾಹಿತಿಗಳು ಪ್ರತ್ಯೇಕ ಕಲಾ ಬರವಣಿಗೆಯನ್ನು ಮಾಡುತ್ತಿದ್ದಾರೆ. ಆದರೆ ಸಾಹಿತ್ಯ ಕ್ಷೇತ್ರದಲ್ಲಿ ಬೇರೆ ಯಾವುದೇ ಕ್ಷೇತ್ರದ ವ್ಯಕ್ತಿ ಬಂದು ಕೃಷಿ ಮಾಡಬಹುದು. ಆದರೆ ದೃಶ್ಯಕಲೆ, ದೃಶ್ಯಕಲಾ ಸಾಹಿತ್ಯ'ದಲ್ಲಿ ಸ್ವತಃ ಕಲಾವಿದರಾಗಿ ಕಂಡುಕೊಂಡವರು ಮಾತ್ರ ಈ ಕ್ಷೇತ್ರದಲ್ಲಿ ಕೃಷಿ ಮಾಡಲು ಹೆಚ್ಚು ಸೂಕ್ತ ಮತ್ತು ಉಪಯುಕ್ತ ಎಂದು ಹೇಳಬಹುದು.

ಪ್ರಸ್ತುತ ಸಂದರ್ಭದಲ್ಲಿ ಸಮಕಾಲೀನ ಕಲೆಯ ಸ್ವಕೇಂದ್ರಿಯ ಸಮುದಾಯ ಕೇಂದ್ರಿತವಾಗಿ ಬೆರಗಿನಿಂದ ತಲ್ಲಣವಾಗಿ ಹೃದಯದಿಂದ ಮತ್ತೆ ಬೌದ್ಧಿಕತೆ, ವೈಚಾರಿಕತೆಯೆಡೆಗೆ ಮುಖಮಾಡುವ ಒಲವು ತೋರುತ್ತಿದೆ. ಸಮಕಾಲೀನ ಕಲೆಯ ಪರಿಭಾಷೆ ಪಲ್ಲಟಗೊಂಡು ಹಲವು ವಿಭಿನ್ನ ಮಾದರಿಯನ್ನು ತಳೆದಿದೆ. ಶಿಕ್ಷಣ ಕ್ಷೇತ್ರಕ್ಕೆ ಬಂದಾಗ ಜಾಗತೀಕರಣ ಪ್ರಭಾವ ಬೀರುತ್ತಿರುವ ಇಂದಿನ ದಿನಗಳಲ್ಲಿ ದೃಶ್ಯಕಲೆಯಂತೆಯೇ ದೃಶ್ಯಕಲಾ ಸಾಹಿತ್ಯದ ಅಗತ್ಯ ಹೆಚ್ಚು ಮಹತ್ವ ಪಡೆದುಕೊಂಡಿದೆ.

ಸಾಹಿತ್ಯ ಮತ್ತು ಕಲೆಗಳು ಬೇರೆ ಬೇರೆ ಮಾಧ್ಯಮಗಳಾದರೂ ಸಾಹಿತ್ಯದಿಂದ ಕಲಾವಿದ ಸ್ಫೂರ್ತಿಗೊಂಡಿದ್ದಾನೆ. ಹಾಗೆಯೇ ಚಿತ್ರದಿಂದ ಸಾಹಿತಿಯೂ ಸ್ಫೂರ್ತಿಯನ್ನು ಹೊಂದಿದ್ದಾನೆ. ಒಂದು ಕಲೆ ಇನ್ನೊಂದು ಕಲೆಗೆ ಪ್ರತಿಸ್ಪರ್ಧಿಯಾಗುವುದು ವಿರಳ. ಅವು ಪರಸ್ಪರ ಪ್ರೇರಕ ಹಾಗೂ ಪೂರಕವಾಗಿರುವುದೇ ಹೆಚ್ಚು. ಎಲ್ಲ ಕಲೆಗಳ ಮೂಲ ಉದ್ದೇಶ ಸಂತೋಷದ ಸಂವಹನವೇ ಆಗಿದೆ. ಆದರೆ ಇತ್ತೀಚೆಗೆ ದೃಶ್ಯಕಲಾ ಕ್ಷೇತ್ರದಲ್ಲಿ ನಡೆಯುತ್ತಿರುವ ಹೊಸ, ಹೊಸ ಪ್ರಯೋಗಗಳು ಹೆಚ್ಚು ಜನರಿಗೆ ತಲುಪಿಲ್ಲ. ಸಾಹಿತ್ಯ ಹೇಗೆ ಜನಸಮೂಹಕ್ಕೆ ಹತ್ತಿರವಾಗಿದೆಯೋ ಅದೇ ಪ್ರಮಾಣದಲ್ಲಿ ದೃಶ್ಯಕಲೆಗಳೆನಿಸಿದ ಚಿತ್ರ, ಶಿಲ್ಪ, ವಾಸ್ತು ಇವುಗಳಲ್ಲಿ ಚಿತ್ರವೂ ಜನಸಾಮಾನ್ಯರಿಗೆ ಹತ್ತಿರವಾಗುತ್ತಿಲ್ಲ ಎನ್ನುವ ಹಲವು ವಿದ್ವಾಂಸರ ಮತ್ತು ಕಲಾವಿದರ ಅಭಿಪ್ರಾಯ ಕೂಡ ಎನ್ನಬಹುದಾಗಿದೆ. ದೃಶ್ಯಕಲೆ ಜನರಿಂದ ಸಾಕಷ್ಟು ದೂರ ಇರುವುದಕ್ಕೆ ಅದರ ಅಭಿವ್ಯಕ್ತಿ ಮಾಧ್ಯಮದ ನೆಲೆಯಲ್ಲಿ ಇರುವ ಮಿತಿಗಳು ಕಾರಣವಿರಬಹುದು.

ಸಾಹಿತ್ಯ ಮತ್ತು ದೃಶ್ಯಕಲಾ ಸಾಹಿತ್ಯ ಭಾಷೆಯ ಮೂಲಕ ತೋಡಿಕೊಳ್ಳುವ ಮಾಧ್ಯಮ ಸಾಹಿತ್ಯದ ಉದ್ದೇಶ ಹಾಗೂ ಅದರ ಅಭಿವ್ಯಕ್ತಿ ಮಾಧ್ಯಮವಾದ ಭಾಷೆಯ ಉದ್ದೇಶ ಒಂದೇ. ಎರಡರ ಉದ್ದೇಶ ಸಂವಹನವೇ. ಸಾಹಿತ್ಯದ ಮಾಧ್ಯಮವಾದ ಭಾಷೆಯು ಸಾಮಾಜಿಕ ಮಾಧ್ಯಮವೂ ಹೌದು. ನಮ್ಮ ದೈನಂದಿನ ವ್ಯವಹಾರಗಳಲ್ಲಿ ನಮ್ಮ ಎಲ್ಲ ಬಗೆಯ ಸಂವಹನ, ಸಂವಾದಗಳಿಗೂ ಬಳಕೆಯಾಗುವ ಭಾಷೆಯ ಪ್ರಯೋಜನೆ, ಸ್ವರೂಪ, ನಮಗೆಲ್ಲ ತಿಳಿದೇ ಇದೆ. ನಮ್ಮ ಶಿಕ್ಷಣವು ಬಹುಪಾಲು ಭಾಷೆಯ ಮೂಲಕವೇ ನಡೆಯುವುದರಿಂದ ಅನಿವಾರ್ಯವಾಗಿ ಎಲ್ಲರಿಗೂ ಹತ್ತಿರವಾಗುತ್ತದೆ. ಹೀಗೆ ಸಾಹಿತ್ಯ ಮತ್ತು ದೃಶ್ಯಕಲಾ ಸಾಹಿತ್ಯ ಸಹೃದಯರ ಜೊತೆ ಸಮಾನ ನೆಲೆ ಕಲ್ಪಿಸಿಕೊಳ್ಳುತ್ತದೆ. ಹೀಗಾಗಿ ಸಾಹಿತ್ಯದಲ್ಲಿ ಒಂದು ವಾಕ್ಯದಲ್ಲಿ ವಾಸ್ತವತೆ ತಾಗಿಸುವ ಒಂದೆರಡು ಪದಗಳೋ, ರಚನಾ ವೈಶಿಷ್ಟ್ಯವೂ, ಲಯವೋ ಇದ್ದರೆ ಸಾಕು. ಇದು ಸಂಪೂರ್ಣ ವಾಸ್ತವತೆಯನ್ನು ಭಾಷೆ ಕೊಟ್ಟು ಬಿಡುತ್ತದೆ. ಹೀಗಾಗಿ ಸಾಹಿತ್ಯಕ್ಕಿರುವ ಸ್ಪಷ್ಟತೆ, ದೃಶ್ಯಕಲೆಗಿಲ್ಲ ಎಂಬ ನಿಟ್ಟಿನಲ್ಲಿ ದೃಶ್ಯಕಲಾ ಸಾಹಿತ್ಯದ ಮೂಲಕ ಕಲೆಯ ನಿರೂಪಣೆ ಮಾಡುವ ಒಂದು ಸಾಹಸವನ್ನು ಇತ್ತೀಚಿನ ದಿನಮಾನಗಳಲ್ಲಿ ನಮ್ಮ ಕ್ಷೇತ್ರದಲ್ಲಿಯೇ ಇದ್ದುಕೊಂಡು ಕಲಾವಿದರು ಸಾಹಿತ್ಯ ರಚನೆ ಮಾಡುತ್ತ ಬಂದಿದ್ದಾರೆ. ಅವರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಕೂಡ ಒಬ್ಬರಾಗಿರುವರು.

ದೃಶ್ಯಕಲಾ ಸಾಹಿತ್ಯ ಕ್ಷೇತ್ರದಲ್ಲಿ ಮುಂಚೂಣಿಯ ಸ್ಥಾನದಲ್ಲಿರುವ ಇವರು ಒಬ್ಬ ಕಲಾವಿದರು, ಒಳ್ಳೆ ವಿಮರ್ಶಕರು, ಲೇಖಕರು, ಮುಖ್ಯವಾಗಿ ಸಂಶೋಧನೆಯನ್ನು ಮಾಡಿ ಹೊಸ ಆದಿಮ ನೆಲೆಗಳನ್ನು ದೃಶ್ಯಕಲಾ ಕ್ಷೇತ್ರಕ್ಕೆ ಪರಿಚಯಿಸಿದ್ದಾರೆ. ಇವರ ಅನೇಕ ಕೃತಿಗಳು, ಲಲಿತಕಲಾ ಅಕಾಡೆಮಿ, ಶಿಲ್ಪಕಲಾ ಅಕಾಡೆಮಿಯಿಂದ ಹೊರಬಂದಿವೆ. ಹಾಗೆ ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ವಿಜಯವಾಣಿ, ಉದಯವಾಣಿ, ಲೋಕವಾಣಿ ದೈನಂದಿನ ಪತ್ರಿಕೆಗಳಲ್ಲದೆ ಅಂಕಣಗಳಲ್ಲಿ, ಸಂಚಿಕೆಗಳಲ್ಲಿ ಬರೆದಿರುವ ಅನೇಕ ಬರಹಗಳು ಲಭ್ಯವಾಗಿದ್ದು ಈ ನಿಟ್ಟಿನಲ್ಲಿ ದೃಶ್ಯಕಲಾ ಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ ಇವರು ಈಗಲೂ ತಮ್ಮನ್ನು ಬರವಣಿಗೆಯಲ್ಲಿಯೇ ತೊಡಗಿಸಿಕೊಂಡಿದ್ದಾರೆ. ಅದರ ಒಂದು ಅಗತ್ಯತೆಯು ನಮ್ಮ ಯುವ ಕಲಾಸಾಹಿತಿಗಳಿಗೆ, ವಿದ್ಯಾರ್ಥಿಗಳಿಗೆ ಪ್ರಯೋಜನವಾಗುವಂತೆ ಮಾಡಲು ಮತ್ತು ಈ ಕಲಾವಿಮರ್ಶಕರನ್ನು ಅನ್ಯರಿಗೂ ಪರಿಚಯಿಸುವ ಉದ್ದೇಶದಿಂದ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

## ಅಧ್ಯಯನದ ಸ್ವರೂಪ

'ಕೆ.ವಿ.ಸುಬ್ರಹ್ಮಣ್ಯಂರವರ ದೃಶ್ಯಕಲಾ ಸಾಹಿತ್ಯ' ಎಂಬ ಶೀರ್ಷಿಕೆಯಡಿಯಲ್ಲಿ ಪ್ರಸ್ತುತ ಅಧ್ಯಯನ ಮಾಡಲಾಗುತ್ತಿದ್ದು, ಇದರ ಅನುಕೂಲಕ್ಕೆ ತಕ್ಕಂತೆ ಒಟ್ಟು ೧೦ ಅಧ್ಯಾಯಗಳಾಗಿ ವಿಷಯವಾರು ವಿಂಡಿಸಿಕೊಳ್ಳಲಾಗಿದೆ. ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸಬೇಕಾದ ವಿಷಯವನ್ನು ಕುರಿತು ಸಂಕ್ಷಿಪ್ತ ಸ್ವರೂಪದ ಮಾಹಿತಿಯನ್ನು ಇಲ್ಲಿ ನೀಡಲಾಗಿದೆ.

ಒಂದನೆಯ ಅಧ್ಯಾಯದಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರ ದೃಶ್ಯಕಲೆಯ ಸಾಹಿತ್ಯವನ್ನು ಅಧ್ಯಯನಕ್ಕೆ ಕೈಗೊಂಡಿರುವ ಉದ್ದೇಶ, ಅದರ ಸ್ವರೂಪ ಮತ್ತು ವಿಧಾನವನ್ನು ಇಲ್ಲಿ ತಿಳಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರ ಜನನ, ಬಾಲ್ಯ, ಪರಿಸರ, ಪ್ರಾಥಮಿಕ, ಮಾಧ್ಯಮಿಕ, ಕಲಾಶಿಕ್ಷಣ ಮತ್ತು ಅವರ ವೃತ್ತಿ ಜೀವನ ಕುರಿತಾಗಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

ಮೂರನೆಯ ಅಧ್ಯಾಯವು ಸಂಪಾದನಾ ದೃಶ್ಯಕಲಾ ಸಾಹಿತ್ಯ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಕೆ.ವಿ.ಸುಬ್ರಹ್ಮಣ್ಯಂರವರು ಸಂಪಾದಿಸಿದ ಕೃತಿ ಪರಿಚಯದೊಂದಿಗೆ ಸಂಚಿಕೆಯಲ್ಲಿನ ಒಟ್ಟು ವಿಷಯಗಳ ಸಂಕ್ಷಿಪ್ತ ವಿವರಣೆಯನ್ನು ನೀಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ವ್ಯಕ್ತಿ ಕೇಂದ್ರಿತ ದೃಶ್ಯಕಲಾ ಸಾಹಿತ್ಯ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಶಿಲ್ಪ ಮತ್ತು ಚಿತ್ರಕಲೆಯಲ್ಲಿ ಸಾಧನೆ ಮಾಡಿರುವ ಹಿರಿಯ ಮತ್ತು ಪ್ರತಿಭಾವಂತ ಕಲಾವಿದರ ಕುರಿತಾಗಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವ ಕೃತಿಗಳನ್ನು ಪರಿಚಯ ಮಾಡುವುದರೊಂದಿಗೆ ಅವುಗಳಲ್ಲಿನ ಮಹತ್ವಪೂರ್ಣ ಅಂಶಗಳನ್ನು ನೇರವಾಗಿ ತೆಗೆದುಕೊಂಡು ವಿವರಣೆಯನ್ನು ನೀಡಲಾಗಿದೆ.

ಐದನೆಯ ಅಧ್ಯಾಯವು ತಾತ್ವಿಕ ದೃಶ್ಯಕಲಾ ಸಾಹಿತ್ಯ ಎಂಬ ಶೀರ್ಷಿಕೆಯನ್ನು ಹೊಂದಿದ್ದು ಇದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ ಕೃತಿಗಳ ಪರಿಚಯದೊಂದಿಗೆ, ಅವುಗಳಲ್ಲಿನ ವಸ್ತು ವಿಷಯವನ್ನು ಕುರಿತಾಗಿ ಸಂಕ್ಷಿಪ್ತ ವಿವರಣೆಯನ್ನು ಪ್ರಸ್ತಾಪನೆ ಮಾಡಲಾಗಿದೆ.

ಆರನೆಯ ಅಧ್ಯಾಯವು ಕ್ಯಾಟಲಾಗ್ ದೃಶ್ಯಕಲಾ ಸಾಹಿತ್ಯ ಎಂಬ ಶೀರ್ಷಿಕೆಯಾಗಿದ್ದು, ಅದರಲ್ಲಿ ಏಕವ್ಯಕ್ತಿ ಕಲಾಪ್ರದರ್ಶನ ಮತ್ತು ಸಮೂಹ ಕಲಾ ಪ್ರದರ್ಶನಗಳೆಂದು ವಿಂಗಡಿಸಿಕೊಂಡು ಈ ಕುರಿತಾಗಿ ಕಲಾವಿದರ ಪರಿಚಯದೊಂದಿಗೆ ಕಲಾಕೃತಿಗಳ ಮೌಲ್ಯವನ್ನು ತಿಳಿಸಿರುವ ಕೆ.ವಿ.ಸುಬ್ರಹ್ಮಣ್ಯಂರವರ ಹೇಳಿಕೆಗಳನ್ನು ಇಂಗ್ಲೀಷ್ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿರುವುದನ್ನು ನೇರವಾಗಿ ತೆಗೆದುಕೊಂಡು ಇಲ್ಲಿ ವಿವರಿಸಲಾಗಿದೆ.

ಏಳನೆಯ ಅಧ್ಯಾಯವು ಸಂಶೋಧನಾತ್ಮಕ ದೃಶ್ಯಕಲಾ ಸಾಹಿತ್ಯ ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಕೆ.ವಿ.ಸುಬ್ರಹ್ಮಣ್ಯಂರವರು ಶೋಧಿಸಿದ ನೆಲೆಗಳ ಕುರಿತಾಗಿ ಮತ್ತು ಸ್ವತಃ ಅನ್ವೇಷಣೆ ಮಾಡಿರುವ ನೆಲೆಗಳ ಕುರಿತಾಗಿ ಬರೆದಿರುವ ಕೃತಿಗಳನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಎಂಟನೆಯ ಅಧ್ಯಾಯವು 'ಪತ್ರಿಕಾ ದೃಶ್ಯಕಲಾ ಸಾಹಿತ್ಯ'ಎಂಬ ಶೀರ್ಷಿಕೆಯಾಗಿದೆ. ಇದರಲ್ಲಿ ದಿನಪತ್ರಿಕೆ, ಮಾಸಪತ್ರಿಕೆ, ತ್ರೈಮಾಸಿಕ, ವಾರ್ಷಿಕ, ದ್ವೈಮಾಸಿಕ ಪತ್ರಿಕೆಗಳಿಗೆ ಮತ್ತು ನಿಯತಕಾಲಿಕೆಗಳಿಗೆ ಬರೆದಿರುವ ಲೇಖನಗಳನ್ನು ವಿಷಯವಾರು ವಿಂಗಡಿಸಿಕೊಂಡು ಅವುಗಳಲ್ಲಿನ ಒಳಾರ್ಥವನ್ನು ವಿಸ್ತಾರವಾಗಿ ವಿವರಿಸಲಾಗಿದೆ.

ಒಂಬತ್ತನೆಯ ಅಧ್ಯಾಯವು 'ಸಂಕೀರ್ಣ ದೃಶ್ಯಕಲಾ ಸಾಹಿತ್ಯ' ಎಂಬ ಶೀರ್ಷಿಕೆಯಾಗಿದೆ. ಇದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬೇರೆ ಬೇರೆ ಗ್ರಂಥಗಳಿಗೆ ಬರೆದುಕೊಟ್ಟಿರುವಂತಹ ಲೇಖನಗಳನ್ನು ಮತ್ತು ವಿಚಾರ ಸಂಕಿರಣಗಳಲ್ಲಿ ಮಂಡಿಸಿದ ಪ್ರಬಂಧಗಳನ್ನು ಮತ್ತು ಅಪ್ರಕಟಿತ ಲೇಖನಗಳನ್ನು ವಿಷಯವಾರು ಬೇರ್ಪಡಿಸಿಕೊಂಡು ಲೇಖನದ ಒಳವಿವರಣೆಯನ್ನು ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ.

ಹತ್ತನೆಯ ಅಧ್ಯಾಯ ಸಮಾರೋಪವಾಗಿದ್ದು, ಇದರಲ್ಲಿ ಒಟ್ಟು ಅಧ್ಯಯನಕ್ಕೆ ಸಂಬಂಧಿಸಿದಂತೆ ಅಧ್ಯಯನದ ಸಂದರ್ಭದಲ್ಲಿ ಎದುರಾದ ದ್ವಂದ್ವಗಳನ್ನು ಕಂಡುಕೊಂಡ ಫಲಿತಗಳನ್ನು ಪರಿಣಾಮಗಳನ್ನು, ಪ್ರಯೋಜನಗಳನ್ನು ಮತ್ತು ಕೆಲವು ಸಲಹೆಗಳನ್ನು ನೀಡುವ ಪ್ರಯತ್ನ ಮಾಡಲಾಗಿದೆ.

## ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಪ್ರಮುಖವಾಗಿ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗಿದೆ.

೧. ಮೂಲ ಆಕರ

೨. ಆನುಷಂಗಿಕ ಆಕರ

ಈ ಎರಡು ಮೂಲಗಳಿಂದ ವಿಷಯಗಳನ್ನು ಸಂಗ್ರಹಿಸಲಾಗಿದ್ದು ಈ ಕೆಳಗಿನಂತೆ ನೋಡಬಹುದಾಗಿದೆ.

**೧. ಮೂಲ ಆಕರ**

ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದುದ್ದು ಕ್ಷೇತ್ರಕಾರ್ಯ. ಇದರಲ್ಲಿ ಸಂದರ್ಶನ ಮಾಡುವುದು, ಗ್ರಂಥಾಲಯಗಳಿಗೆ ಭೇಟಿಕೊಟ್ಟಿರುವುದು, ಛಾಯಾಚಿತ್ರ ಮತ್ತು ನೆರಳಚ್ಚು ಮಾಡಿಕೊಂಡಿರುವುದು ಹೀಗೆ ನೇರವಾಗಿ ಅಧ್ಯಯನಕ್ಕೆ ಸಂಬಂಧಿಸಿದ ಆಕರಗಳನ್ನು ಸಂಗ್ರಹಿಸು ವುದಾಗಿರುತ್ತದೆ.

**ಸಂದರ್ಶನ :** ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆ.ವಿ.ಸುಬ್ರಹ್ಮಣ್ಯಂರವರನ್ನು ಭೇಟಿ ಮಾಡಲಾಯಿತು. ಇದೇ ಸಂದರ್ಭದಲ್ಲಿ ಅವರ ಕಲಾ ಸಾಹಿತ್ಯಕ್ಕೆ ಸಂಬಂಧಿಸಿದ ಕೃತಿಗಳನ್ನು ಪಡೆದುಕೊಳ್ಳಲಾಯಿತು. ಅಧ್ಯಾಯಗಳಿಗೆ ಸಂಬಂಧಿಸಿದಂತೆ ಚರ್ಚೆಯನ್ನು ನಡೆಸಿ ವಿಷಯ ಸಂಗ್ರಹಣೆಗೆ ಧ್ವನಿಮುದ್ರಿಸಿಕೊಂಡು ಈ ಅಧ್ಯಯನಕ್ಕೆ ಬಳಸಿಕೊಳ್ಳಾಗಿದೆ.

**ಗ್ರಂಥಾಲಯಗಳಿಗೆ ಭೇಟಿಕೊಟ್ಟಿರುವುದು :** ವಿಶ್ವವಿದ್ಯಾಲಯದ ಮತ್ತು ಶಾಲಾ ಕಾಲೇಜುಗಳಲ್ಲಿನ ಗ್ರಂಥಾಲಯಕ್ಕೆ, ಅಕಾಡೆಮಿಗಳಿಗೆ ಭೇಟಿ ನೀಡಿ ಅಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ ಕೃತಿಗಳನ್ನು ಸಂಗ್ರಹಿಸಿ ಮತ್ತು ಅವುಗಳನ್ನು ದಾಖಲಸಿರುವ ಪತ್ರಿಕೆಗಳಲ್ಲಿನ ಲೇಖನಗಳನ್ನು ಛಾಯಾಚಿತ್ರಣ ಮತ್ತು ನೆರಳಚ್ಚು ಮಾಡಿಕೊಂಡು ವಿಷಯ ಸಂಗ್ರಹಿಸಲಾಗಿದೆ.

**೨. ಆನುಷಂಗಿಕ ಆಕರ**

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ಪ್ರಕಟಿತ, ಅಪ್ರಕಟಿತ ಕೃತಿಗಳ ಮಹಾಪ್ರಬಂಧಗಳು, ಗೆಜೆಟಿಯರ್‌ಗಳು, ಪೂರಕ ಸಾಹಿತ್ಯ ಕೃತಿಗಳು ಮತ್ತು ಗಣಕಯಂತ್ರದಲ್ಲಿ ಅಂತರ್ಜಾಲ ಉಪಯೋಗಿಸಿ ದಿನಪತ್ರಿಕೆಗಳಲ್ಲಿ ಅವರು ಬರೆದಂತ ಲೇಖನಗಳನ್ನು ಸಂಗ್ರಹಿಸಿಕೊಂಡು ಈ ಸಂಶೋಧನಾ ಅಧ್ಯಯನ ಕೈಗೊಳ್ಳಲಾಗಿದೆ.

**ಟಿಪ್ಪಣಿಗಳು**

೧. ಸಂಗಮೇಶ ಸವದತ್ತಿಮಠ, **ಮಾತು ಮತ್ತು ಬರಹ, ಕಸ್ತೂರಿ ಮಾಸಪತ್ರಿಕೆ,** ಏಪ್ರಿಲ್ ೨೦೧೩

೨. ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ೨೦೦೯

೩. ನಾರಾಯಣ ಕೆ.ವಿ., **ಭಾಷೆ: ವಿಷಯ ವಿಶ್ವಕೋಶ**

೪. ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ೨೦೦೯

೫. ನಾರಾಯಣ ಕೆ.ವಿ., **ಭಾಷೆ: ವಿಷಯ ವಿಶ್ವಕೋಶ**

೬. ಕೃಷ್ಣಯ್ಯ ಎಂ.ಎಚ್., **ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ,** ೨೦೦೬

೭. ವೀರೇಶ ಬಡಿಗೇರ, **ಕನ್ನಡ ಮೋಡಿ ಲಿಪಿ, ಸಂರಚನೆ ಮತ್ತು ಸಂವರ್ದನೆ,** ೨೦೧೩

೮. ಕೃಷ್ಣಯ್ಯ ಎಂ.ಎಚ್., **ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ,** ೨೦೦೬

೯. ದೇವರಕೊಂಡಾರೆಡ್ಡಿ, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ೨೦೦೯

ಅಧ್ಯಾಯ ಎರಡು

# ಜನನ, ಬಾಲ್ಯ, ಪರಿಸರ, ಶಿಕ್ಷಣ ಮತ್ತು ವೃತ್ತಿ

ಶ್ರೀ ವೇಣುಗೋಪಾಲ ಮೊದಲಿಯಾರ್, ಶ್ರೀಮತಿ ಮುನಿಯಮ್ಮ ದಂಪತಿಗಳಿಗೆ ನಾಲ್ಕು ಜನ ಮಕ್ಕಳು, ಅದರಲ್ಲಿ ಮೂರನೆಯವರೆ ಕೆ.ವಿ.ಸುಬ್ರಹ್ಮಣ್ಯಂರವರು. ಅಮೂರ್ತ ರೂಪದಲ್ಲಿರುವ ಬದುಕಿನ ನಿಗೂಢ ಸತ್ಯವನ್ನು ಮೂರ್ತ ರೂಪದಲ್ಲಿ ಹುಡುಕುವ ತವಕದ ಇವರ ಬದುಕೇ ಪಕ್ಕಾ ಅಮೂರ್ತ ಕಲೆಯಿದ್ದಂತೆ. ಆದಿ ಅಂತ್ಯವಿರದ ಹುಡುಕಾಟದಲ್ಲಿ ತೊಡಗಿರುವ ಅಪ್ಪಟ ಅಲೆಮಾರಿ ಸ್ವಭಾವದವರು. ಬೆಟ್ಟ-ಗುಡ್ಡಗಳ ಬಳಿ ಸುಳಿದಾಡುತ್ತಲೇ ವೈಯಕ್ತಿಕ ಸಾಧನೆಯನ್ನು ಉನ್ನತೀಕರಿಸಿಕೊಂಡವರು. 'ಎಲ್ಲಿಯೂ ನಿಲ್ಲದಿರು ಮನೆಯನೆಂದೂ ಕಟ್ಟದಿರು' ಎಂಬ ಕವಿವಾಣಿ ಯಂತೆ ನಿಂತಲ್ಲಿ ನಿಲ್ಲದೇ ಕಾಲಿಗೆ ಚಕ್ರ ಸಿಲುಕಿಸಿಕೊಂಡವರಂತೆ ಅಲೆಯುತ್ತಲೇ ಕಲಾಲೋಕದಲ್ಲಿ ಹೊಸ ಹೊಸ ಶೋಧನೆ ನಡೆಸುತ್ತಿರುವ ಈ ಅಪರೂಪದ ವ್ಯಕ್ತಿ ಕೆ.ವಿ.ಸುಬ್ರಹ್ಮಣ್ಯಂ.

ಕೆ.ವಿ.ಎಸ್.ಎಂದೇ ಗುರುತಿಸಲ್ಪಡುವ ಸುಬ್ರಹ್ಮಣ್ಯಂರವರು ಕುಂಚ, ಲೇಖನಿ ಎರಡರಲ್ಲಿಯೂ ಕಲಾವಲಯದಲ್ಲಿ ಹೆಸರು ಮಾಡಿರುವ ಕೃಷಿಕ. ನಿರಂತರ ಶೋಧಕರು ಪರಿಪೂರ್ಣ ಕಲಾವ್ಯಕ್ತಿತ್ವದ ಕೆ.ವಿ.ಸುಬ್ರಹ್ಮಣ್ಯಂರವರ ಬದುಕೇ ವಿಶಿಷ್ಟ ಅನುಭವಗಳ ಆಗರ.

ಕೆ.ವಿ.ಸುಬ್ರಹ್ಮಣ್ಯಂರವರು ೧೯೪೯ ಡಿಸೆಂಬರ್ ೧೮ರಂದು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಹೊಸಕೋಟೆ ತಾಲೂಕಿನ ವಾಗಟ ಅಗ್ರಹಾರ ಹಳ್ಳಿಯ ಒಂದು ಮಧ್ಯಮವರ್ಗದ ಮನೆತನದಲ್ಲಿ ಜನಿಸಿದರು. ತಂದೆಯು ಸಂಗೀತವನ್ನು ಆಯ್ಕೆ ಮಾಡಿಕೊಂಡದ್ದರಿಂದ ಬಡತನದ ಬೇಗೆಯ ಬಾಲ್ಯ, ಅಪ್ಪ ಮಾತ್ರವಲ್ಲ ಇಡೀ ಕುಟುಂಬಕ್ಕೆ ಸಂಗೀತದನಂಟು. ದ್ರಾವಿಡ ವಿಶ್ವವಿದ್ಯಾಲಯವಿರುವ ಕುಪ್ಪಂನಲ್ಲಿ ಅಜ್ಜಿ ಮನೆ ಹಾಗಾಗಿ ಸಾಹಿತ್ಯ, ಕಲೆಯ ಬೇರು ವ್ಯಕ್ತಿತ್ವದಲ್ಲಿ ಗೋಚರಿಸಿದೆ.

ವಾಗಟ ಅಗ್ರಹಾರ ಐತಿಹಾಸಿಕ ಪರಂಪರೆಯ ಊರು. ಅದು ಹೊಸಕೋಟೆ ನಾಯಕರಿಗೂ ಮೊದಲು ಇತಿಹಾಸಪೂರ್ವ ಸಂಸ್ಕೃತಿಯ ನೆರೆಯ ಜಡಿಗೇನಹಳ್ಳಿ ಸುಂದರ ಗುಡ್ಡ, ಅರಣ್ಯಗಳ

ಪರಿಸರ, ವಿಶಿಷ್ಟ ಐತಿಹಾಸಿಕ ವರದರಾಜ ದೇಗುಲ, ಗಮನಾರ್ಹ ಶಿಲ್ಪ, ಉಬ್ಬುಶಿಲ್ಪ, ರಥ ಶಿಲ್ಪಗಳ ಆಕರ್ಷಣೆಯಿಂದ ಕೂಡಿದ್ದವು. ಉತ್ತಮ ಆದರ್ಶ ಶಿಕ್ಷಕರು ನಾಟಕ, ಯಕ್ಷಗಾನಗಳು ಇಲ್ಲಿನ ಸಾಂಸ್ಕೃತಿಕ ಕಲೆಗಳಿಗೆ ಪ್ರತೀಕಗಳಾಗಿವೆ. ಹಾಗೇ ಸಂಗೀತವನ್ನು ಹೆಚ್ಚಾಗಿ ಹಾಡಬಲ್ಲವರಿದ್ದರು, ಹತ್ತಿರದ ಹೊಸಕೋಟೆಯ ಟೆಂಟ್ ಸಿನಿಮಾಗಳಿಗೂ ಹೆಸರುವಾಸಿಯಾಗಿದ್ದವು.

**ಬಾಲ್ಯ**

ಕೆ.ವಿಸುಬ್ರಹ್ಮಣ್ಯಂರವರು ಬಾಲ್ಯದಲ್ಲಿ ದೇವರಿಗೆ ಅಲಂಕಾರ ಮಾಡುವುದುನ್ನು ಕಂಡಾಗಲೆಲ್ಲ ವಿಚಿತ್ರ ಕುತೂಹಲ, ಮಣ್ಣಿನಿಂದ ದೇವರ ಮೂರ್ತಿಮಾಡಿ, ಬಟ್ಟೆ ತೊಡಿಸಿ ಅಲಂಕಾರ ಮಾಡುವಷ್ಟು ಕ್ರಿಯಾಶೀಲತೆ, ಗೆಳೆಯನೊಬ್ಬ ರವಿವರ್ಮನ ಚಿತ್ರಗಳನ್ನು ತೋರಿಸಿದ ಮೇಲಂತೂ ಚಿತ್ರಕಲೆಯ ಹುಚ್ಚು ತಲೆಗೇರಿಸಿಕೊಂಡು 'ಚಂದಮಾಮ' ಪತ್ರಿಕೆಯಲ್ಲಿನ ಮಹಾಭಾರತ, ರಾಮಾಯಣಗಳ ಚಿತ್ರಗಳನ್ನು ತಲ್ಲೀನತೆಯಿಂದ ನೋಡುತ್ತಿದ್ದರು. ಮೈಸೂರು ಶೈಲಿಯ ಒಂದು ಚಿತ್ರವು ಇವರನ್ನು ಆಕರ್ಷಿಸಿ ಚಿತ್ರಕಲೆಯ ಕಡೆಗೆ ಒಲವು ಮೂಡಲು ಕಾರಣವಾಯಿತು.

**ಪ್ರಾಥಮಿಕ ಶಿಕ್ಷಣ**

ಮೊದಲಿಗೆ ಅಕ್ಷರ ಅಭ್ಯಾಸ ಮಾಡಿದ್ದು ವಾಗಟ ಅಗ್ರಹಾರದಲ್ಲಿ. ಮಾಧ್ಯಮಿಕ ಶಾಲೆಯ ವೇಳೆಗಾಗಲೇ ಓದಿನ ಕಡೆಗೆ ಹೆಚ್ಚು ಗಮನಹರಿಸಲಾಗಿತ್ತು. ಸಂಸ, ಶಿವರಾಮ ಕಾರಂತ, ಅನಕೃ, ಕುವೆಂಪು, ಎನ್.ನರಸಿಂಹಯ್ಯ(ಪತ್ತೆದಾರಿ ಕಾದಂಬರಿಗಳು) ಹಾಗೂ ಎಂ.ರಾಮಮೂರ್ತಿಯವರ ಕಾದಂಬರಿಗಳು, ಗಳಗನಾಥರ ಕಾದಂಬರಿಗಳು ಮೊದಲಾದವರ ಕೃತಿಗಳನ್ನು ಓದಿ ಅರಗಿಸಿಕೊಂಡ ಹಿರಿಮೆ ಕೆ.ವಿ.ಸುಬ್ರಹ್ಮಣ್ಯಂ ಅವರದಾಗಿದೆ. ಆಗಲೇ ಅವರದು ಒಂದು ಹಂತದ 'ಓದುವಿಕೆ' ಆಗಿತ್ತು.

ಎಂ.ಟಿ.ವಿ.ಆಚಾರ್ಯರ ಚಿತ್ರಗಳನ್ನು ಪತ್ರಿಕೆಗಳಲ್ಲಿ ನೋಡಿ, ಆಕರ್ಷಿತಗೊಂಡು ಚಿತ್ರ ರಚನೆಗೆ ಮುಂದಾಗಿದ್ದರು. ಆಟ ಕಡಿಮೆ, ಹೆಚ್ಚು ಸಂಕೋಚ ಸ್ವಭಾವವುಳ್ಳವರಾಗಿದ್ದರಿಂದ ಬೆಟ್ಟ ಗುಡ್ಡಗಳ ಬಗ್ಗೆ ತಣಿಯದ ಆಸಕ್ತಿ ಬೆಳಸಿಕೊಂಡು ಕಡಿದ್ದನ್ನೆಲ್ಲಾ 'ಚಿತ್ರ'ವಾಗಿಸುತ್ತಾ ಹೊರಟರು. ಗುಡ್ಡದ ಮೇಲೊಂದು ಒಂಟಿ ಮರ ಅವರ ಕುಂಚದಲ್ಲಿ ಅರಳಿದ ಚೊಚ್ಚಲ ಕೃತಿ. ಆಗಲೇ ಆಕಾಶವಾಣಿಯ ಸಂಗೀತ ಕೇಳುವುದು, ಚಲನಚಿತ್ರಗೀತೆಗಳು, ವಿವಿಧ್ ಭಾರತೀಯ ಹಿಂದಿ ಚಿತ್ರಗೀತೆ ಕೇಳುವುದು ಇವರ ಹವ್ಯಾಸವಾಗಿದ್ದವು. ಈ ಹಂತದಲ್ಲಿ ಜೇಡಿಮಣ್ಣಿನಲ್ಲಿ ಶಿಲ್ಪ, ಕಂಚಿನ ಶಿಲ್ಪಗಳನ್ನು ನಕಲು ಮಾಡುತ್ತಿದ್ದು ಶಿಲ್ಪ ಕೃತಿರಚನೆಯಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದರು.

**ಪ್ರೌಢಶಿಕ್ಷಣ**

ಪ್ರೌಢಶಿಕ್ಷಣಕ್ಕೆ ದೇವಾಲಾಪುರದಲ್ಲಿ ಸೇರಿಕೊಂಡರು. ದಿನಾಲು ಆರು ಮೈಲು ನಡೆದುಕೊಂಡು ಹೋಗಿ ಕಲಿಯುವ ಸಂದರ್ಭವಾಗಿತ್ತು. ಇಲ್ಲಿ ಉತ್ತಮ ಶಿಕ್ಷಕರು, ಪಾಂಡಿತ್ಯವೇ ಅಲ್ಲದೆ ಸಂಸ್ಕೃತ

ಬಲ್ಲವರೂ ಆಗಿದ್ದರು. ಇವರ ಮೊದಲ ಬರವಣಿಗೆಗೆ ಇಲ್ಲಿಯೇ 'ಭೂಮಿಕೆ'ಯನ್ನು ಹಾಕಲಾಯಿತು. ಶಾಲೆಯಲ್ಲಿ ಬರುವ ಹಸ್ತಪ್ರತಿಯ ಮ್ಯಾಗಝಿನ್‌ವೊಂದನ್ನು ಇವರು ಸಂಪಾದಿಸಬೇಕಾಗಿತ್ತು. ಬಹುಶಃ ಕನ್ನಡ ಭಾಷೆಯ ಉತ್ತಮಿಕೆ ಮತ್ತು ದುಂಡಾದ ಅಕ್ಷರಗಳು ಇದಕ್ಕೆ ಕಾರಣವಾಗಿದೆ. ಅಲ್ಲದೆ ಸುಬ್ರಹ್ಮಣ್ಯಂರವರು ಬೆಳೆಸಿಕೊಂಡ ಸಾಹಿತ್ಯದ ಓದಿನ ಆಸಕ್ತಿಯಿಂದ ಉತ್ತಮ ಕಲ್ಪನಾ ಲೋಕವೂ ಇದಕ್ಕೆ ಸಹಾಯಕವಾಗಿದೆ. ಶಾಲೆಯಲ್ಲಿ ಉಳಿದ ವಿದ್ಯಾರ್ಥಿಗಳಿಗಿಂತ ಓದಿನಲ್ಲಿ ಮುಂದಾಗಿದ್ದು, ಉತ್ತಮ ಪ್ರಬಂಧ ರಚನೆಯಲ್ಲಿಯೂ ಹೆಚ್ಚು ಆಸಕ್ತಿ ಉಳ್ಳವರಾಗಿದ್ದರು.

ಓದಿನ ಜೊತೆಗೆ ಪಠ್ಯಕ್ಕೆ ಸಂಬಂಧಿಸಿದ ಚಿತ್ರಗಳನ್ನು ಎಲ್ಲರಂತೆ 'ನಕಲು' ಮಾಡುತ್ತಾ ಚಿತ್ರಿಸುತ್ತಿದ್ದರು. ಈ ಹಂತದಲ್ಲಿ ಪ್ರಕೃತಿ ದೃಶ್ಯಗಳು, ಗಾಂಧಿ ಇತ್ಯಾದಿ ಚಿತ್ರಗಳು ಇವರ ಕೌಶಲ್ಯತೆಯಲ್ಲಿ ಮೂಡಿಬಂದಿದ್ದು ಪೋಸ್ಟರ್ ಬಣ್ಣಗಳು, ಪೆನ್ಸಿಲ್ ಇಂಕ್ ಮಾಧ್ಯಮಗಳಲ್ಲಿ ರಚಿಸಿದ್ದಾಗಿವೆ. ಚಿತ್ರಕಲೆಯಲ್ಲಿ ತಾಂತ್ರಿಕ ಜ್ಞಾನದ ಲವಲೇಷ ಇಲ್ಲದಿದ್ದರೂ ಭಾವಾಭಿವ್ಯಕ್ತಿಗೆ ಮಾತ್ರ ಎಳ್ಳಷ್ಟೂ ಕೊರತೆಯಿರಲಿಲ್ಲ.

**ಕಲಾಶಿಕ್ಷಣ**

ಪ್ರಾರಂಭದಲ್ಲಿಯೇ ವ್ಯವಸ್ಥಿತ ಕಲಾಶಿಕ್ಷಣ ದೊರೆಯದೆ ಎಂ.ಟಿ.ವಿ.ಆಚಾರ್ಯರ ಬೆಂಗಳೂರಿನ ಚಿತ್ರಕಲಾ ಭವನದಲ್ಲಿ ಸಂಜೆಯ ಅವಧಿಯಲ್ಲಿ ಅನಿಯಮಿತ ಕಲಿಕೆ ಇವರದಾಗಿತ್ತು. ನಂತರ ಹಲವರಿಂದ ಹಲವು ರೀತಿಗಳಲ್ಲಿ ಚಿತ್ರಿಸುವುದನ್ನು ಉತ್ತಮಪಡಿಸಿಕೊಂಡು ಕಲಾಶಿಕ್ಷಣ ಪೂರೈಸಿದರು. ಈ ಹಂತದಲ್ಲಿ ಹೆಚ್ಚಾಗಿ ಭೂದೃಶ್ಯಗಳು, ಕೆಲವೊಮ್ಮೆ ಕಲ್ಪನೆಯ ರಮ್ಯಲೋಕದ ದೃಶ್ಯಗಳನ್ನು ಚಿತ್ರಿಸಿದ್ದು ಕಂಡುಬರುತ್ತವೆ. ಅವರ ವಿಭಿನ್ನ ಶೈಲಿಯನ್ನು ಕಲಾಕೃತಿಗಳಲ್ಲಿ ತೈಲವರ್ಣ, ಪೇಷ್ಟಲ್ ಜಲವರ್ಣ ಇತ್ಯಾದಿ ಮಾಧ್ಯಮಗಳಲ್ಲಿ ರಚಿಸಿದ್ದಾಗಿವೆ. ೧೯೬೦ರಲ್ಲಿ ತವರಿನಲ್ಲಿ ಚಿತ್ರಕಲಾ ಪ್ರದರ್ಶನದ ಮೂಲಕ ಕಲಾವಂತಿಕೆಗೆ ಸಾರ್ವಜನಿಕ ಮುಖವಾಯಿತು. ಕನ್ನಡಪ್ರಭ ಪತ್ರಿಕೆಯಲ್ಲಿನ ವರದಿ ಓದಿ ಹೆಚ್ಚು ಸಂಭ್ರಮಗೊಂಡ ವಿಷಯ ಎನ್ನುತ್ತಾರೆ. ಅಲ್ಲದೆ ರಾಜ್ಯ ಲಲಿತಕಲಾ ಅಕಾಡೆಮಿಯ ಹಲವಾರು ವಾರ್ಷಿಕ ಕಲಾಪ್ರದರ್ಶನಗಳಲ್ಲಿ, ಅಕಾಡೆಮಿಯ ಬೆಳ್ಳಿಹಬ್ಬದ ಮಿನಿಯೇಚರ್ ಕಲಾಕೃತಿಗಳನ್ನು ಮುಂಬೈ ಮತ್ತು ಬೆಂಗಳೂರಿನ ಪ್ರದರ್ಶನದಲ್ಲಿ, ನವದೆಹಲಿಯ ರಾಷ್ಟ್ರೀಯ ಕಲಾಮೇಳ, ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ, ಅಖಿಲ ಭಾರತ ಕಲಾಪ್ರದರ್ಶನಗಳಲ್ಲಿ ಹಲವು ಸಲ, ಹಲವೆಡೆಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶಿಸಲ್ಪಟ್ಟಿವೆ. ಈ ಕುರಿತಾಗಿಯೂ ಜಿ.ಪಿ.ಕೆ.ಶಾಸ್ತ್ರಿ, ಮಾರ್ಥ್ ಮೊದಲಾದವರು ಇವರ ಕಲಾಕೃತಿಗಳನ್ನು ನೋಡಿ ಹಲವು ಕಡೆ ಪ್ರಶಂಸಿಸಿ ಬರೆದಿದ್ದಾರೆ. ನಂತರ ಬರಹದ ಹುಚ್ಚು ಹೆಚ್ಚಾದಂತೆಲ್ಲಾ ಚಿತ್ರ ರಚನೆಯ ಮೇಲಿನ ವ್ಯಾಮೋಹ ಕಡಿಮೆಯಾಗಿದ್ದು ವಿಶೇಷ.

## ವೃತ್ತಿ

೧೯೬೯ರಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರಾಗಿ ಪಾವಗಡದ ಬಳಿಯ ರಂಗಸಮುದ್ರದಲ್ಲಿ ವೃತ್ತಿ ಜೀವನಕ್ಕೆ ಅಡಿಯಿರಿಸಿದರು. ವೃತ್ತಿಯ ಜೊತೆಗೆ ಹೆಚ್ಚಾಗಿ ನಿತ್ಯ ಪ್ರಕೃತಿ ದತ್ತ ನಿಡಗಲ್ ಬೆಟ್ಟದ ನಿಗೂಢತೆ ಭೇದಿಸಲು ನಡೆಸಿದ ಸಂಶೋಧನಾ ಭೇಟಿಯನ್ನು ಚಿತ್ರದುರ್ಗ, ಚಳ್ಳಕೆರೆ, ಲೇಪಾಕ್ಷಿ ಹೀಗೆ ಬೆಟ್ಟದೆಡೆಗೆ ತಿರುಗಾಡುವುದೇ ವಾರಂತ್ಯದ ಕೆಲಸವಾಗಿಸಿಕೊಂಡಿದ್ದರು. ೧೯೭೯–೮೦ರಲ್ಲಿ ಯುವ ಬರಹಗಾರರು ಮತ್ತು ಕಲಾವಿದರ ಕೂಟದ ಕಾರ್ಯದರ್ಶಿಯಾಗಿದ್ದು ಬದುಕಿಗೊಂದು ಹೊಸ ರೀತಿಯ ತಿರುವು ಕಂಡುಕೊಂಡರು.

ಕಲಾಗುರುಗಳಾದ ಎಂ.ಟಿ.ವಿ.ಆಚಾರ್ಯರು ಉತ್ತಮ ಬರಹಗಾರರಾಗಿದ್ದು, ಇವರ ಪ್ರಭಾವದಿಂದ ಕೆ.ವಿ.ಸುಬ್ರಹ್ಮಣ್ಯಂರವರಿಗೆ ಸಾಹಿತ್ಯ ರಚನೆಗೆ ಹೆಚ್ಚಿನ ಒಲವು ಮೂಡಿತು. ಆ ಹೊತ್ತಿಗಾಗಲೇ ಕುವೆಂಪು, ರವೀಂದ್ರನಾಥ ಠ್ಯಾಗೋರ್ ಕಥೆ, ಕಾದಂಬರಿಗಳನ್ನು ಓದಿ ಮುಗಿಸಿದ್ದರು. ಜಿ.ಎಸ್.ಶಿವರುದ್ರಪ್ಪ, ಲಂಕೇಶರಂತವರ ಸಹವಾಸ, ಸಂಪರ್ಕ ಪಡೆದು ಕಲಾಬರಹಗಾರರಾಗಿ ಗುರುತಿಸಿಕೊಂಡರು. ಇವರ ಪಾಲು ಇದ್ದ, ಯುವ ಬರಹಗಾರರ ಮತ್ತು ಕಲಾವಿದರ ಗಿಲ್ಡ್‌ನ ಕಾರ್ಯದರ್ಶಿಯೂ ಆಗಿದ್ದು ಇತರ ಕೆಲವರೊಂದಿಗೆ ವ್ಯವಸ್ಥೆ ಮಾಡಿದ ಹಲವು ಕಲಾಪ್ರದರ್ಶನಗಳ ಬಗ್ಗೆ ಬರೆಯಲೇಬೇಕಾಗಿ ಬಂದ ಸಂದರ್ಭ. ಈ ಹಂತದಲ್ಲಿಯೇ ಲೋಕವಾಣಿ, ಜನವಾಣಿ, ಮುಂಜಾನೆ, ಕನ್ನಡಪ್ರಭ, ಸಂಯುಕ್ತ ಕರ್ನಾಟಕ, ಪ್ರಜಾವಾಣಿ, ಮಣಿಪಾಲದ ಉದಯವಾಣಿಗಳಿಗೆ ಹಲವು ಸಂದರ್ಭಗಳಲ್ಲಿ ಬರೆಯುವ ಅನಿವಾರ್ಯ ಸ್ಥಿತಿಯನ್ನು ಇವರಾಗಿಯೇ ಸೃಷ್ಟಿಸಿಕೊಂಡರು. ವಿಮರ್ಶೆಗಳಿಗೆ ಮಾದರಿಗಳೇ ಇಲ್ಲದ ಹೊತ್ತಿನಲ್ಲಿ ಕಲಾವಿಮರ್ಶೆಗಿರುವ ಹೊಸ ಭಾಷೆಯ ತಡಕಾಟ ನಡೆಸುತ್ತಲೇ ಆ ಭಾಷೆಯ ಮೇಲೆ ಹಿಡಿತ ಸಾಧಿಸಿಕೊಂಡರು.

೧೯೮೫ರಲ್ಲಿ ಎನ್.ಹನುಮಯ್ಯ ಎಂಬ ವ್ಯಕ್ತಿ ಕೇಂದ್ರಿತವಾದ ಮೊದಲ ಪುಸ್ತಕವನ್ನು ಲಲಿತಕಲಾ ಅಕಾಡೆಮಿಯಗಾಗಿ ವಿಮರ್ಶಕ ಎಸ್.ಎನ್.ಚಂದ್ರಶೇಖರ್‌ರವರು ಇವರಿಂದ ಬರೆಸಿದರು. ನಂತರದಲ್ಲಿ ಕಲಾವಾರ್ತೆಗೆ ಕಲಾಪ್ರದರ್ಶನಗಳ ವರದಿ, ಕೆನ್ ಕಲಾಶಾಲೆಯ 'ಕಲಾವಿಕಾಸ'ದಲ್ಲಿ ಕಲಾಪ್ರದರ್ಶನಗಳ ಕುರಿತ 'ಅವಸರದ ಬರಹಗಳು ಹುಟ್ಟಿಕೊಂಡವು. ಹೀಗೆ ಇವರಿಂದ ಅನೇಕ ಕಲಾವಿದರ ಜೀವನ ಮತ್ತು ಕಲಾಸಾಧನೆ ಮತ್ತು ವಿಷಯ ಕೇಂದ್ರಿತ ಬರಹಗಳ ಕೃತಿಗಳು ಬಂದಿದ್ದು ಕಲಾ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಯಾಗಿವೆ.

೧೯೯೦ರಲ್ಲಿ ಡಾ.ವಿಷ್ಣು ಎಸ್.ವಾಕನ್ಕರ್ ಅವರ ಭೇಟಿಯಿಂದ ಹುಟ್ಟಿದ ಶಿಲಾಶ್ರಯಗಳ ಬಗೆಗಿನ ವಿಶಿಷ್ಟ ಜ್ಞಾನದ ಹಸಿವು ತಣಿಸಲು ನಡೆಸಿದ ಶೋಧದಲ್ಲಿ ಅದೆಷ್ಟೋ ಸತ್ಯಗಳನ್ನು ಕಂಡುಕೊಂಡರು. ಕಾಲದೇಶ, ವೈಯಕ್ತಿಕ ಬದುಕಿನ ಎಲ್ಲೆಗಳನ್ನು ಮೀರಿ ಶಿಲಾಶ್ರಯ ಚಿತ್ರ ಶೋಧನೆಯನ್ನು 'ವ್ರತ'ದಂತೆ ಪಾಲಿಸಿಕೊಂಡು ಅಹರ್ನಿಸಿ ದುಡಿಯುತ್ತಿರುವ ಕೆ.ವಿ.ಸುಬ್ರಹ್ಮಣ್ಯಂ

ಅವರ ಪಾಲಿಗೆ ಅವರ ಅಲೆಮಾರಿತನವೇ 'ವರ'. ಆ ಅವ್ಯಾಹತ ಹುಡುಕಾಟದಲ್ಲಿ ಕಲಾಲೋಕಕ್ಕೆ ಹಲವು ಹೊಸತನ್ನು ಸಂಶೋಧಿಸಿರುವುದು ಅಚ್ಚರಿಯ ಸಾಧನೆ. ಈ ಕುರಿತಾಗಿ ಪತ್ರಿಕೆಗಳಲ್ಲಿ ಅನೇಕ ಲೇಖನ ಬರಹಗಳನ್ನು ಬರೆದಿದ್ದಾರೆ. ಹಾಗೆ, 'ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ' ಎಂಬ ಕೃತಿಯಲ್ಲಿ 'ಆದಿಮ ಚಿತ್ರಗಳನ್ನು' ಕುರಿತಾಗಿ ಬರೆದಿರುವುದು ಗಮನರ್ಹ ಕೃತಿಗಳಲ್ಲಿ ಒಂದು. ಈಗಷ್ಟೆ ಕೋಲಾರ ಜಿಲ್ಲೆಯ ಘಟ್ಟಮಾದಮಂಗಲ, ಟೇಕಲ್ ಮತ್ತು ಆಂಧ್ರಪ್ರದೇಶದ ಕಂಗುಂದಿಯಲ್ಲಿರುವ ಹೊಸ ಶಿಲಾಯುಗದ ಚಿತ್ರಗಳನ್ನು ಕ್ಯಾಮೆರಾ ಕಣ್ಣಲ್ಲಿ ಸೆರೆ ಹಿಡಿದು ಅಕ್ಷರದ ಹಸಿರು ತೋರಣ ತೊಡಿಸಿ 'ಆದಿಮ ದೃಶ್ಯ ಸೌಂದರ್ಯದ ಆದಿಪತ್ಯ'ವೆಂಬ ಪುಸ್ತಕವನ್ನು ಹೊರತಂದಿದ್ದು 'ದೃಶ್ಯಕಲೆಯ ಬೇರುಗಳ ಈ ಹುಡುಕಾಟದಲ್ಲಿ ತಾವು ಶೋಧಿಸಿದ್ದು ಏನೇನೂ ಅಲ್ಲ. ಅದು ಯಾರು ಬೇಕಾದರೂ ಮಾಡಬಹುದಾದಂತಹ ಕೆಲಸ. ಆದರೆ ನನ್ನಿಂದಲೇ ಆಗಬೇಕಾದ ಕೆಲಸವನ್ನು ಮಾಡಬೇಕಿದೆ. ಆ ದಿಕ್ಕಿನಲ್ಲಿ ಪ್ರಯತ್ನವೂ ನಡೆದಿದೆ' ಎನ್ನುವ ಕೆ.ವಿ.ಸುಬ್ರಹ್ಮಣ್ಯಂರವರ ಮಾತುಗಳಲ್ಲಿ ಸರಳ ವ್ಯಕ್ತಿತ್ವ, ದಕ್ಷ ಕಾರ್ಯವನ್ನು ತೋರಿಸುತ್ತದೆ. ಇವರ ಕಲಾಸಾಧನೆಗೆ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿಗಳ ಜೊತೆಗೆ ರಾಜ್ಯ, ರಾಷ್ಟ್ರ ಪ್ರಶಸ್ತಿ ಗೌರವಗಳು ಲಭಿಸಿವೆ. ಇನ್ನೂ ಉನ್ನತ ಮಟ್ಟದ ಪ್ರಶಸ್ತಿಗಳು ಇವರಿಗೆ ಸಲ್ಲಬೇಕಾಗಿದೆ.

ಆದರೆ ಸುಬ್ರಹ್ಮಣ್ಯಂ ಅವರಿಗೆ ಇದೀಗ ಪ್ರಶಸ್ತಿಯ ಮೋಹವೂ ಕಳಚಿದೆ. 'ನಾಚಿಕೆ ತರಿಸುವ ಪ್ರಶಸ್ತಿಗಳು ನನಗೆ ಬೇಕಿಲ್ಲ' ಎಂಬುದು ಕೆ.ವಿ.ಸುಬ್ರಹ್ಮಣ್ಯಂರವರ ಅಭಿಪ್ರಾಯ. ಮನಸ್ಸು ಹಾತೊರೆದಾಗಲೆಲ್ಲಾ ಬೆಟ್ಟಗುಡ್ಡದ ಬಳಿ ಹಾರಿ ಹೋಗಿ ಕುಳಿತು ಬಿಡುವ ಸಂಶೋಧನಾ ಹಕ್ಕಿ, ನಿಸ್ಪೃಹ ನಡವಳಿಕೆ, ಕ್ರಿಯಾಶೀಲತೆಯ ನಡೆಯ ಜತೆಗೆ ಸರಳತೆ, ಸಜ್ಜನಿಕೆಯಿಂದಲೂ ಭೂಷಿತರಾಗಿರುವ ಕೆ.ವಿ.ಸುಬ್ರಹ್ಮಣ್ಯಂ ಅವರಿಂದ ಕಲಾಲೋಕಕ್ಕೆ ದಕ್ಕಬೇಕಾದದ್ದು ಇನ್ನೂ ಬಹಳಷ್ಟಿದೆ. ಅವೆಲ್ಲವೂ ಸಾಕಾರವಾದರೆ ದೃಶ್ಯಕಲೆಯ ಮೂಲದ ಗಟ್ಟಿತನ ಜತೆಗೆ ಇವರ ಅಲೆಮಾರಿ ಸ್ವಭಾವದ ಶ್ರಮಕ್ಕೂ ಜಾಹ್ಹೀರಾಗುವುದರ ಸಾರ್ಥಕ ರೂಪ ಬರುವುದು.

ಅಧ್ಯಾಯ ಮೂರು

# ಸಂಪಾದನಾ ದೃಶ್ಯಕಲಾ ಸಾಹಿತ್ಯ

ಬೇರೆಯವರು ಬರೆದ ಲೇಖನ ಬರಹಗಳನ್ನು ಪಡೆದುಕೊಂಡು ಅವುಗಳನ್ನು ಒಂದು ವ್ಯವಸ್ಥಿತವಾದ ಕೃತಿ ರೂಪದಲ್ಲಿ, ಒಬ್ಬ ವ್ಯಕ್ತಿ ಅಥವಾ ಹಲವು ವ್ಯಕ್ತಿಗಳು ಸೇರಿಕೊಂಡು ಸಂಪಾದನೆ ಮಾಡಿದ್ದರೆ, ಅಂತಹ ಕೃತಿಯನ್ನು ಸಂಪಾದನಾ ಸಾಹಿತ್ಯ ಕೃತಿ ಎನ್ನುವರು. ದೃಶ್ಯಕಲೆಯಲ್ಲಿ ಸಂಪಾದನಾ ಸಾಹಿತ್ಯವು ವೈವಿಧ್ಯಮಯವಾಗಿ ಬೆಳೆದು ಬಂದಿದೆ. ಸುಮಾರು ಶತಮಾನಗಳ ಇತಿಹಾಸವನ್ನು ಹೊಂದಿರುವ ಈ ಸಾಹಿತ್ಯವು ಅನೇಕ ಲೇಖನ ಸಂಪಾದನೆ, ಗ್ರಂಥ ಸಂಪಾದನೆಗಳು ಹೊರಬಂದಿವೆ. ಈ ರೀತಿಯ ಸಂಪಾದನಾ ಕೃತಿಯಲ್ಲಿ ಹಲವು ವಿಷಯಗಳ ಕುರಿತು ಲೇಖನಗಳು ಇರಬಹುದು ಮತ್ತು ಒಂದೇ ವಿಷಯಕ್ಕೆ ಸಂಬಂಧಿಸಿದ್ದು ಇರಬಹುದು.

ಸಂಪಾದನಾ ಸಾಹಿತ್ಯವನ್ನು ನಾವು ಮೂರು ರೀತಿಯಲ್ಲಿ ಮುಖ್ಯವಾಗಿ ಕಾಣಬಹುದು.

೧. ಅಭಿನಂದನಾ ಸಂಪಾದನಾ ಸಾಹಿತ್ಯ ಕೃತಿಗಳು

೨. ಸ್ಮರಣಸಂಚಿಕೆಯ ಸಂಪಾದನಾ ಸಾಹಿತ್ಯ ಕೃತಿಗಳು

೩. ಸಂಕೀರ್ಣ ಸಂಪಾದನಾ ಸಾಹಿತ್ಯ ಕೃತಿಗಳು

ಆಯಾ ಕ್ಷೇತ್ರದಲ್ಲಿ ಸಾಧನೆ ಮಾಡಿದ ವ್ಯಕ್ತಿಗಳ ಅಭಿನಂದನೆ ಹಿನ್ನೆಲೆಯಲ್ಲಿ ಹೊರತಂದ ಕೃತಿಗಳು ಒಂದು ರೀತಿಯ ಸಂಪಾದನೆ ಗ್ರಂಥಗಳಾದರೆ, ಶಾಲೆ-ಕಾಲೇಜುಗಳಲ್ಲಿ, ಸಂಘ, ಸಂಸ್ಥೆಗಳು ತಮ್ಮ ವಾರ್ಷಿಕ ಸಮಾರಂಭದಲ್ಲಿ ಪ್ರಕಟಿಸುವ ಸ್ಮರಣ ಸಂಚಿಕೆಗಳು ಮತ್ತೊಂದು ಬಗೆಯ ಸಂಪಾದನಾ ಸಾಹಿತ್ಯ ಕೃತಿಗಳಾಗಿವೆ. ಇವುಗಳಲ್ಲದೆ ಯಾವುದೇ ವಿಶೇಷ ಸಂದರ್ಭಗಳಲ್ಲದ ಸಂದರ್ಭದಲ್ಲಿಯೂ ಕೆಲವು ವಿದ್ವಾಂಸರು ಲೇಖನಗಳನ್ನು ಒಂದೆಡೆಗೆ ತಂದು ಸಂಪಾದನೆ ಮಾಡಿದ್ದಾರೆ. ಈ ರೀತಿಯ ವೈವಿಧ್ಯತೆ ಸಂಪಾದನಾ ಗ್ರಂಥಗಳಲ್ಲಿ ಕೆಲವು ಗ್ರಂಥಗಳನ್ನು ಒಬ್ಬರೆ ವಿದ್ವಾಂಸರು ಸಂಪಾದನೆ ಮಾಡಿದ್ದರೆ, ಇನ್ನು ಕೆಲವು ಗ್ರಂಥಗಳನ್ನು ಇಬ್ಬರು ಮೂವರೂ ಹೀಗೆ

ಒಬ್ಬರಿಗಿಂತ ಹೆಚ್ಚಿನ ವ್ಯಕ್ತಿಗಳು ಸಂಪಾದನೆ ಮಾಡಿರುವುದು ನಾವು ಕಾಣಬಹುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನದ ಲೇಖಕರಾದ ಕೆ.ವಿ.ಸುಬ್ರಹ್ಮಣ್ಯಂ ಅವರು ಅನೇಕ ಲೇಖನ ಬರಹಗಳು ಬರೆದಿದ್ದಾರೆ. ತಾತ್ವಿಕ ಕೃತಿಗಳೂ ಹೊರಬಂದಿದ್ದು ನಾವು ಕಾಣುತ್ತೇವೆ. ಜೊತೆಗೆ ಸಂಪಾದಕತ್ವದ ಕಾರ್ಯವನ್ನು ಮಾಡಿದ್ದು, ಅವುಗಳಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾಗುವ ಕರ್ನಾಟಕ ಕಲಾ ವಾರ್ತೆ ತ್ರೈಮಾಸಿಕ ಪತ್ರಿಕೆ. ಇದು ಪ್ರತಿ ಮೂರು ವರ್ಷಗಳಿಗೊಮ್ಮೆ ನೇಮಕಗೊಳ್ಳುವ ಸಂಪಾದಕರು, ಅಧ್ಯಕ್ಷರ ಸಹಯೋಗದಲ್ಲಿ ಮೂಡಿ ಬರುತ್ತಿದ್ದು ಈ ಸಂಚಿಕೆಯಲ್ಲಿ ಕರ್ನಾಟಕದ ಆಯಾ ಪ್ರಸಕ್ತ ಸಂದರ್ಭದಲ್ಲಿ ನಡೆದಿರುವ ಕಲಾ ಚಟುವಟಿಕೆಗಳು, ವಿಚಾರ ಸಂಕಿರಣಗಳು, ಶಿಬಿರಗಳು, ಪ್ರದರ್ಶನ, ಪ್ರಶಸ್ತಿ ವಿಜೇತರು ಇತ್ಯಾದಿ ವಿವರಗಳೊಂದಿಗೆ, ಮುಖ್ಯವಾಗಿ ಕಲಾ ಲೇಖನಗಳನ್ನು ಯುವ ಕಲಾ ವಿದ್ಯಾರ್ಥಿಗಳಿಗೆ ಪರಿಚಯಿಸುವ ಈ ಎಲ್ಲ ಅಂಶಗಳನ್ನು ಒಳಗೊಂಡಿರುವ ಈ ಸಂಚಿಕೆಯು ಪ್ರತಿ ಮೂರು ತಿಂಗಳಿಗೊಮ್ಮೆ ಪ್ರಕಟವಾಗುವಂತಹದ್ದಾಗಿದೆ. ಹಾಗೆ ಆದುನಿಕ ಕನ್ನಡ ಸಾಹಿತ್ಯ ಚರಿತ್ರೆ– ಸಾಹಿತ್ಯ ಪರಿಷತ್ತಿನಿಂದ ಪ್ರಕಟಣೆಗೊಂಡ ಲಲಿತಕಲೆಯ ಸಂಪುಟದ ಸಂಪಾದಕ ಲೇಖಕರಾಗಿಯೂ ಕಾರ್ಯನಿರ್ವಹಿಸಿದ್ದು ಈ ಎರಡೂ ಸಂಪಾದನಾ ಸಾಹಿತ್ಯ ಕೃತಿಗಳನ್ನು ಕುರಿತಾಗಿ ಈ ಅಧ್ಯಾಯದಲ್ಲಿ ಅನುಲಕ್ಷಿಸಲಾಗಿದೆ. ಆದರೆ ಪ್ರಸ್ತುತ ಕಲಾವಾರ್ತೆಯ ಸಂಚಿಕೆಗಳಲ್ಲಿ ದೊರೆತಿರುವ ವಿಷಯಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

## ಕರ್ನಾಟಕ ಕಲಾವಾರ್ತೆ ಸಂಚಿಕೆಗಳು

ಕಲಾ ಬರಹಗಾರರು ತುಂಬಾ ವಿರಳ, ಹಾಗಿದ್ದರೂ ಈ ವಿರಳ ಬರಹಗಾರರಿಗೆ ಅವಕಾಶಗಳು ಸಿಗುವುದು ಇನ್ನೂ ವಿರಳವೇ ಸರಿ. ಅಂತಹ ಬರಹಗಳಿಗೆ ಒಂದು ವ್ಯವಸ್ಥಿತ ರೀತಿಯಲ್ಲಿ ಪ್ರಕಟಿಸುವ ಉದ್ದೇಶವು ಈ ಮೊದಲು ಕಡಿಮೆಯಾಗಿತ್ತು. ಅದನ್ನು ಗಮನಿಸಿದ ಕರ್ನಾಟಕ ಲಲಿತಕಲಾ ಅಕಾಡೆಮಿಯು ರಾಜ್ಯಾದ್ಯಂತ ಅನೇಕ ಕಲಾ ಶಿಬಿರಗಳು, ಕಮ್ಮಟಗಳು, ವಿಚಾರ ಸಂಕಿರಣಗಳನ್ನು ಯುವ ಕಲಾವಿದರಿಗೆ, ಸಾಹಿತಿಗಳಿಗೆ ಪರಿಚಯಿಸುವ ನಿಟ್ಟಿನಲ್ಲಿ ಕರ್ನಾಟಕ ಕಲಾವಾರ್ತೆ ಎಂಬ ನಿಯತಕಾಲಿಕೆಯನ್ನು ಹೊರತಂದರು. ಈ ಪತ್ರಿಕೆಯಲ್ಲಿ ಆಯಾ ಕಾಲಮಾನಕ್ಕೆ ತಕ್ಕಂತೆ, ಕಲಾಚಟುವಟಿಕೆ, ಪ್ರದರ್ಶನಗಳನ್ನು ಮತ್ತು ಮುಖ್ಯವಾಗಿ ಕಲಾ ಬರಹಗಾರರಿಗೆ ಹೆಚ್ಚಿನ ಅವಕಾಶ ಮಾಡಿಕೊಡಲಾಗಿದ್ದು, ಪ್ರತೀ ಪತ್ರಿಕೆಯಲ್ಲಿಯೂ ಇದು ಕಂಡುಬರುತ್ತದೆ.

ಕೆ.ವಿ.ಸುಬ್ರಹ್ಮಣ್ಯಂರವರು ೧೯೯೯ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಲ್ಲಿ, ಕರ್ನಾಟಕ ಕಲಾವಾರ್ತೆಯ ಸಂಪಾದಕರಾಗಿ ಕೆಲಸ ಮಾಡಿದ್ದು, ಅವರ ಸಂಪಾದಕತ್ವದಲ್ಲಿ ಅನೇಕ ರಾಜ್ಯದ ಕಲಾವಿದರ ಬರಹಗಳನ್ನು ಕಲಾಲೋಕಕ್ಕೆ ಪರಿಚಯಿಸುವ ಕೆಲಸವನ್ನು ಮಾಡಿದ್ದಾರೆ. ಅವುಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಲು ಯತ್ನಿಸಲಾಗಿದೆ. ಇಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಅವರ ಸಂಪಾದಕತ್ವದಲ್ಲಿ ಹೊರಬಂದಿರುವ ಕೃತಿಗಳನ್ನು ವಿವರವಾಗಿ ಪರಿಚಯಿಸಲಾಗಿದೆ.

## ೧. ಕರ್ನಾಟಕ ಕಲಾವಾರ್ತೆ, ಸಂಚಿಕೆ ೫೫

ಜುಲೈ–ಸೆಪ್ಟೆಂಬರ್ ೧೯೯೯ರಲ್ಲಿ ಪ್ರಕಟಗೊಂಡ ಕರ್ನಾಟಕ ಕಲಾವಾರ್ತೆಯ ೫೫ನೇ ಸಂಚಿಕೆಯು ಒಟ್ಟು ೨೨ ಪುಟಗಳನ್ನು ಒಳಗೊಂಡಿದೆ. ಈ ಸಂಚಿಕೆಯ ಪ್ರಧಾನ ಸಂಪಾದಕರು ಮತ್ತು ಅಧ್ಯಕ್ಷರು ಆದ ಪ್ರೊ.ವಿ.ಜಿ.ಅಂದಾನಿಯವರ ಸಹಯೋಗದಲ್ಲಿ ಹೊರತಲಾಗಿದೆ.

ಕೆ.ವಿ.ಸುಬ್ರಹ್ಮಣ್ಯಂರ ಮೊದಲ ಸಂಪಾದಕತ್ವದ ಕೃತಿಯ ನುಡಿಗಳು ಇಲ್ಲಿ ಹಂಚಿಕೊಳ್ಳಲಾಗಿದ್ದು, ಸಾಹಿತ್ಯ ಬೆಳೆಸುವ–ಉಳಿಸುವ ದೃಷ್ಟಿಯಿಂದ ಹಲವು ವಿಶಿಷ್ಟ ಪ್ರಯತ್ನಗಳು ಈ ಹಿಂದೆ ಆಗಿವೆ. ಇತ್ತೀಚೆಗೆ ಅಂಥ ಪ್ರಯತ್ನಗಳಲ್ಲಿ ಕಲಾ ಸಾಹಿತಿಗಳು, ವಿಮರ್ಶಕರು ಉಡುಪಿಯಲ್ಲಿ ಸಮ್ಮೇಳನ ನಡೆಸಿದ್ದು, 'ಚಿತ್ರಾಕ್ಷರ' ಪತ್ರಿಕೆಯ ಸಂಚಿಕೆಯನ್ನು ಬಿಡುಗಡೆ ಮಾಡಿದ್ದು ಗಮನಿಸುವಂಥದ್ದು. ಹಾಗೆಯೇ ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯ ಲಲಿತಕಲಾ ಮಹಾವಿದ್ಯಾಲಯದ ಆಶ್ರಯದಲ್ಲಿ ಬಿಡುಗಡೆಯಾಗಿರುವ ಪ್ರೊ.ವ್ಹಿ.ಜಿ.ಅಂದಾನಿಯವರ ಸಂಪಾದಕತ್ವದ 'ಆರ್ಟ್‌ಗುಲ್' ಪತ್ರಿಕೆಯೂ ಸಾಕಷ್ಟು ನಿರೀಕ್ಷೆಗಳನ್ನು ಹುಟ್ಟಿಸಿದ್ದು ಈ ಎಲ್ಲದರ ನಡುವೆ ಈವರೆಗೆ ಪ್ರಕಟವಾಗಿರುವ ಕಲಾ ಸಾಹಿತ್ಯವೂ ಎಲ್ಲ ಕಲಾಸಕ್ತರನ್ನು ಕಲಾವಿದರನ್ನು, ತಲುಪಿಲ್ಲವೆಂಬುದು ಅಥವಾ ಈ ವರ್ಗ ಆಸಕ್ತಿಯಿಂದ ಕಲಾ ಸಾಹಿತ್ಯವನ್ನು ಗಮನಿಸುತ್ತಿಲ್ಲವೆಂದು ವಿಷಾದವನ್ನು ವ್ಯಕ್ತಪಡಿಸುತ್ತಾರೆ. ಹಾಗೆ ತಮ್ಮ ಬಗ್ಗೆ ಪ್ರಕಟವಾದ ಬರಹ, ವಿಮರ್ಶೆಗಳನ್ನು ಮಾತ್ರ ಗಮನಿಸುವ ಪ್ರವೃತ್ತಿ ಕಲಾವಿದ ಮಿತ್ರರ ವಲಯದಲ್ಲಿ ಬದಲಾಗಿ, ಎಲ್ಲವನ್ನೂ ಗಮನಿಸುವ ತುರ್ತು ಇಂದು ಉಂಟಾಗಿದೆ. ಕೇವಲ ದಿನ ಪತ್ರಿಕೆಗಳ ವಿಮರ್ಶೆ, ಬರಹಗಳಿಂದ ಹೊರಬಂದು ಕಲಾಬರಹಗಾರರು ಇನ್ನಿತರ ಪ್ರಕಟಿತ ಬರಹ, ಪುಸ್ತಕ ಇತ್ಯಾದಿ ಮೂಲಗಳನ್ನು ಕಲೆಯ ಅಭಿಮಾನಿಗಳು ತೀವ್ರತೆಯಿಂದ ಗ್ರಹಿಸುವ ಅಗತ್ಯವಿದೆ. ಸಾಕಷ್ಟು ಗಮನಾರ್ಹ ಕೊಡುಗೆಯನ್ನು ನೀಡಿರುವ ಹಿರಿಯ ಕಲಾಸಾಹಿತ್ಯ ಲೇಖಕರನ್ನು ಕಲಾವಾರ್ತೆಯಲ್ಲಿ ಹೊಸ ಹೊಸ ಕಲಾ ಲೇಖನಗಳನ್ನು ಪರಿಚಯಿಸುತ್ತಿದೆ. ಅವರೊಳಗಿನ ಸಂದರ್ಭವನ್ನು ಅವಕಾಶಗಳನ್ನು ಸೃಷ್ಟಿಸಬೇಕಾಗಿದೆ. ಹೀಗಾಗಿ ಈ ಸಂಚಿಕೆ ಹಾಗೂ ಮುಂದಿನ ಎಲ್ಲಾ ಸಂಚಿಕೆಗಳಲ್ಲಿ ಹೊಸ ಲೇಖಕರ ಬರಹಗಳನ್ನು ನಿರೀಕ್ಷಿಸಬಹುದೆನ್ನುತ್ತಾ ಲೇಖಕರ ಮಾತುಗಳಲ್ಲಿ ಕಲಾ ಸಾಹಿತ್ಯ ಬರಹದ ಭಾಷೆ, ಚಿತ್ರ ಭಾಷೆಗೆ ಪೂರಕವಾಗುವಂತೆ ಬೆಳೆಸಿ ಉಳಿಸಬೇಕೆಂಬುದಾಗಿದೆ.

ಈ ಕೃತಿಯಲ್ಲಿನ ಮುಖ್ಯ ಅಂಶಗಳೆಂದರೆ ಅಖಿಲ ಭಾರತ ಚಿತ್ರಕಲಾ ಶಿಬಿರವನ್ನು ಲಲಿತಕಲಾ ಅಕಾಡೆಮಿಯಿಂದ ಆಯೋಜಿಸಿದ್ದು, ಹಾಗೇ ಇಲಕಲ್ಲಿನಲ್ಲಿ ನಡೆದ ಕಲಾಬರಹಗಾರರ ಕಮ್ಮಟ ಉದ್ಘಾಟನಾ ಸಮಾರಂಭದ ವರದಿಯನ್ನು ಎಂ.ಸಂಜೀವರವರು ಇಲ್ಲಿ ಪರಿಚಯಿಸಿದ್ದು, ಕಲಾವಿಮರ್ಶಕರಾದ ಎಚ್.ಎ.ಅನಿಲ್‌ಕುಮಾರ್, ಚಿ.ಸು.ಕೃಷ್ಣಶೆಟ್ಟಿ, ಡಾ.ಬಿ.ಕೆ.ಹಿರೇಮಠ ಅವರ ವಿಶೇಷ ಉಪನ್ಯಾಸಗಳಲ್ಲಿ ಕಲಾ ವಿಮರ್ಶೆಯ ಪ್ರಾಮುಖ್ಯತೆಯ ಬಗ್ಗೆ ಚಿಂತನೆ ನಡೆಸಲಾಯಿತು.

ಹಾಗೆ ಬೆಂಗಳೂರು ಹೊರ ಮತ್ತು ಒಳಗಿನ ಕಲಾಪ್ರದರ್ಶನ ಕಲಾ ಚಟುವಟಿಕೆ ಇತ್ಯಾದಿಗಳನ್ನು ಆ ಸಂದರ್ಭದಲ್ಲಿ ನಡೆದಿರುವುದನ್ನು ಪರಿಚಯಿಸಿದ್ದಾರೆ. ಈ ಸಂಚಿಕೆಯ ಮುಖ್ಯಭಾಗವಾದ ಯುವ ಕಲಾವಿದರು ಬರೆದ ವಿವಿಧ ಕಲಾಸಾಹಿತ್ಯ ಬರಹಗಳನ್ನು ಇಲ್ಲಿ ಕಾಣಬಹುದಾಗಿದೆ.

'ಪರಿಣಾಮದಲ್ಲಿ ಭಾವಚಿತ್ರ' ಎಂಬ ಲೇಖನದಲ್ಲಿ ಭಾವಚಿತ್ರದ ಸ್ವರೂಪ 'ಪರಿಣಾಮವಾದದ ಕಲ್ಪನೆ', 'ಭಾವಚಿತ್ರ ರಚನಾ ವಿಧಾನ', ಗ್ರಹಿಕೆ(ಸೂಕ್ಷ್ಮತೆ) ಪ್ರಭಾವ ಮತ್ತು ಸಹಕಾರ, ಕಲಾಕೃತಿಗಳು ಎಂಬ ವಿಷಯವನ್ನಿಟ್ಟುಕೊಂಡು ಅನೇಕ ಕಲಾವಿದರು ಈ ನಿಟ್ಟಿನಲ್ಲಿ ರಚನೆಗೈದ ರೂಪಗಳನ್ನು ಸುಭಾಷ ಎಂ.ಕಮ್ಮಾರರು ಪ್ರಸ್ತಾಪಿಸಿದ್ದಾರೆ.

"ನನ್ನ ಅಭಿವ್ಯಕ್ತಿಯ ಒಳ ಹೊರಗು" ಎಂಬ ಲೇಖನದಲ್ಲಿ ಅಭಿವ್ಯಕ್ತಿಗೆ ದೊರಕುವ ವಸ್ತು ಅದು ಹೇಗೆ ಏನು? ಅದಕ್ಕೆ ಮನುಷ್ಯ ತೋರುವ ಪರ್ಯಾಯ ರೂಪಗಳನ್ನು ತಿಳಿಸುತ್ತಾ ಪ್ರತಿಯೊಂದು ಕಲೆಗೆ ತನ್ನದೇ ಆದ ಒಂದು ಅಭಿವ್ಯಕ್ತಿಯ ರೂಪವನ್ನು ಮನುಷ್ಯನು ಕಂಡುಕೊಂಡಿರುತ್ತಾನೆ. ಈ ವಿಶಿಷ್ಟ ಮಾರ್ಗವನ್ನು ಕಂಡುಕೊಂಡ ಈ ದೃಶ್ಯ ಮಾಧ್ಯಮವನ್ನು ಈಗ ಹಿಂದಿನ ಎಲ್ಲ ನೀತಿ ನಿಯಮಗಳನ್ನು ಮೀರಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿದ್ದು, ಅದಕ್ಕೆ ಉಳಿದಿರುವ ಏಕೈಕ ವಿಷಯವೆಂದರೆ ತನ್ನ ಸ್ವಂತ ಜೀವನದ ಸಹಿ–ಕಹಿ ಅನುಭವಗಳು ಅಭಿವ್ಯಕ್ತಿಸುವ ಮಾರ್ಗವೆಂಬುದನ್ನು ಸ್ಪಷ್ಟಪಡಿಸುತ್ತ ಕಲಾವಿದ ದಿಲೀಪಕುಮಾರ ಕಾಳೆಯವರು ಈ ಅಭಿವ್ಯಕ್ತಿಯಲ್ಲಿ ಮುಳುಗಿ ತಮ್ಮದೇ ಆದ ರಚನಾತಂತ್ರ ಕೌಶಲ್ಯವನ್ನು ಇಲ್ಲಿ ತೋರ್ಪಡಿಸಿಕೊಂಡಿದ್ದಾರೆ. ಪ್ರಸ್ತುತ ಲೇಖನವು ಅವರದೇ ಆಗಿರುವುದು ವಿಶೇಷ.

'ದಿ ಮ್ಯೂಸ್' ಇಂಗ್ಲೀಷ್ ಕಾದಂಬರಿಯ ಕನ್ನಡ ರೂಪಾಂತರ ಭಾಗ ೨ರ ಬಗ್ಗೆ ಇಲ್ಲಿ ಶಶಿಧರ್‌ರವರ ಅಭಿಪ್ರಾಯಗಳನ್ನು ಪ್ರಸ್ತುತಪಡಿಸಲಾಗಿದೆ. ಹಾಗೆ ಆರ್.ಎ.ಶಾಂತರಾಜ್ ರವರು ಬರೆದ 'ಕಲಾಸಾಹಿತ್ಯ, ವಿಮರ್ಶೆ ಇತ್ತೀಚಿನ ಒಳವುಗಳು' ಎನ್ನುವ ವಿಷಯವಾಗಿ ಪ್ರಸ್ತುತ ಕಲಾಸಾಹಿತ್ಯವನ್ನು ಕುರಿತಂತೆ ದೃಶ್ಯಗಳನ್ನು ಎತ್ತಿಕೊಂಡು ಹಾಗೆ ವಿಮರ್ಶೆಯಲ್ಲಿ ನಾವು ತೋರುತ್ತಿರುವ ಒಲವಾದರೂ ಏನು? ಎನ್ನುವ ವಿವಿಧ ಆಯಾಮಗಳಿಂದ ಪ್ರಶ್ನೆಗಳನ್ನು ಮುಖ್ಯವಾಗಿ ವಹಿಸಿಕೊಂಡು ವಿಮರ್ಶೆಯನ್ನು ಮಾಡುವ ಅಂಶಗಳನ್ನು ಇಲ್ಲಿ ತಿಳಿಸಲಾಗಿದೆ. 'ಕಲಾ ಶಿಕ್ಷಣ ಮತ್ತು ಕಲೆ' ಎಂಬ ಇನ್ನೊಂದು ಲೇಖನವಿದ್ದು, ಅದರಲ್ಲಿ ಕಲೆ ಎಂದರೇನು, ಕಲಾಭಾಷೆ ವೇದ ಉಪನಿಷತ್ತುಗಳಲ್ಲಿ ಕಲಿಕೆಯ ವಿಷಯ ಸಂದರ್ಭ ಅದರ ಸ್ಥಾನಮಾನ, ಕಲಾಶಿಕ್ಷಣ, ಕಲೆ ಮತ್ತು ಶಿಕ್ಷಣ, ಇಂದಿನ ಕಲಾಶಿಕ್ಷಣದ ಸ್ಥಿತಿಗತಿ, ಸಮಾಜ, ಸರಕಾರ, ಶಿಕ್ಷಕರ ಜವಬ್ದಾರಿಯೆಡೆ ಚಿಂತಿಸಬೇಕಾಗಿದ್ದು ಮತ್ತು ಪ್ರಸ್ತುತ ಸಂದರ್ಭದಲ್ಲಿನ ಕೆಲವು ದೃಷ್ಟಿ ಕೋನಗಳನ್ನು ಪರಿಚಯಿಸಿಕೊಂಡು ಈ ಮೂಲಕ ದೃಶ್ಯಕಲಾ ಶಿಕ್ಷಣ ಅಭಿವ್ಯಕ್ತಿಯ ಹೊಸ ಆಯಾಮಗಳನ್ನು ತೆರೆಯಬಹುದಾಗಿದೆ ಎಂಬ ಮಾತುಗಳನ್ನು ವಿವರಿಸುತ್ತ ಅದರ ಮುಂದುವರೆದ ರೂಪವಾಗಿ

ಮುಂದಿನ ಸಂಚಿಕೆಯಲ್ಲಿ ನೀಡಲಾಗಿದೆ. ಹಾಗೆ C.F.John From The Nether The ceaseless Dance ಎಂಬ ಲೇಖನವೂ ಇಲ್ಲಿದೆ.

ಈ ಪತ್ರಿಕೆಯಲ್ಲಿ ಕಲಾ ಬರಹಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿದ್ದು, ಕಲಾ ವಿದ್ಯಾರ್ಥಿಗಳಿಗೆ ಉಪಯೋಗವಾಗುವಂತಹ ವಿಷಯಗಳನ್ನು ಇಲ್ಲಿ ವಿವರಣೆ ನೀಡಿರುವುದು ಗಮನಾರ್ಹ ಸಂಗತಿ. ಹಾಗೆ ಕೃತಿಯ ಒಳಗಡೆ ಅಲ್ಲಲ್ಲಿ ಕಾಣಿಸಿಕೊಳ್ಳುವ ಕಪ್ಪು ಬಿಳುಪು ಕಲಾ ಕೃತಿಗಳ ಛಾಯಾಚಿತ್ರಗಳು ಸಮಕಾಲೀನವೆಂಬಂತೆ ತೋರಿಬರುತ್ತವೆ. ಮುಖಪುಟದಲ್ಲಿ ಕಾಣಿಸಿಕೊಳ್ಳುವ ಕಲಾಕೃತಿಗಳು ವಿಭಿನ್ನ ದೃಷ್ಟಿ ಧೋರಣೆಯನ್ನು ಹೊಂದಿದ್ದು, ಒಳಗಿನ ವಿವರಣೆಗೆ ಸ್ವಲ್ಪಮಟ್ಟಿಗೆ ಹೊಂದಿಕೊಳ್ಳುವಂತಿದೆ. ಒಟ್ಟಾರೆ ಸಂಚಿಕೆಯು ಸುಂದರವಾಗಿ ಮುದ್ರಣಗೊಂಡಿದ್ದು, ಕಲಾಸಕ್ತರಿಗೆ ಅಧ್ಯಯನ ಯೋಗ್ಯ ವಿಷಯಗಳನ್ನೊಳಗೊಂಡಿದೆ. ಸಂಪಾದಕರೂ ತುಂಬಾ ಎಚ್ಚರವಹಿಸಿ ಕಲಾಬರಹಗಳನ್ನು ಸಂಕ್ಷೇಪಿಸಿ ಇಲ್ಲಿ ಪ್ರಸ್ತುತಪಡಿಸಲಾಗಿದೆ.

**೨. ಕಲಾವಾರ್ತೆ, ಸಂಚಿಕೆ ೩೬**

೧೯೯೯ರಲ್ಲಿ ಪ್ರಕಟವಾದ ಕರ್ನಾಟಕ ಕಲಾವಾರ್ತೆಯ ೩೬ನೇ ಸಂಚಿಕೆಯು ಕೆ.ವಿ.ಸುಬ್ರಹ್ಮಣ್ಯಂ ಅವರ ಸಂಪಾದಕತ್ವದಲ್ಲಿ ಹೊರಬಂದಿದೆ. ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ನಡೆದಿರುವ ತ್ರೈಮಾಸಿಕ ಕಲಾ ಚಟುವಟಿಕೆಗಳ ಸಾರಂಶವನ್ನು ಈ ಸಂಚಿಕೆಯಲ್ಲಿ ಕಾಣಬಹುದು.

ಕೆ.ವಿ.ಸುಬ್ರಹ್ಮಣ್ಯಂರವರು ತಮ್ಮ ಸಂಪಾದಕತ್ವದ ನುಡಿಗಳಲ್ಲಿ ೧೯೯೯ರ ಅಭಿವ್ಯಕ್ತಿ ಮಾಧ್ಯಮ ದೃಷ್ಟಿ ಇತ್ಯಾದಿ ಕಲಾ ಪ್ರಕಾರಗಳ ಕುರಿತಾಗಿ ಈ ಕೆಳಗಿನ ವಿಚಾರಗಳನ್ನು ವ್ಯಕ್ತಪಡಿಸಿದ್ದಾರೆ.

ಕಲಾವಿದನ ಅಭಿವ್ಯಕ್ತಿಯ ಅಧಿಕೃತ ಮಾಧ್ಯಮವೆಂದು ಸುದೀರ್ಘಕಾಲ ಪರಿಗಣಿಸಲ್ಪಟ್ಟಿದ್ದ ವರ್ಣಚಿತ್ರ ಪರಂಪರೆಯನ್ನು ಸದೃಢ ಧ್ವನಿಯಿಂದ ಪ್ರಶ್ನಿಸಿದ ಧೋರಣೆಯನ್ನು ಇಪ್ಪತ್ತನೆಯ ಶತಮಾನದ ಗ್ರಹಿಕೆಗಳ ಬಹುಮುಖ್ಯ ಲಕ್ಷಣಗಳಲ್ಲಿ ಒಂದೆಂದು ಪರಿಗಣಿಸಬಹುದು. ಪ್ರತಿನಿತ್ಯ ನಾವು ನೋಡುವ ನ್ಯೂಸ್ ಪೇಪರ್ ಬಟ್ಟೆ, ಕ್ಯಾಮರಾ, ಹಗ್ಗ, ಸಗಣಿ, ಬೂದಿ, ಇದ್ದಿಲು, ಪ್ಯಾಕೇಜ್ ವಸ್ತುಗಳು, ಹುಲ್ಲು, ಇಟ್ಟಿಗೆ, ನೆಲೆ ಇತ್ಯಾದಿಗಳು ಅಭಿವ್ಯಕ್ತಿಯ ಮಾಧ್ಯಮಗಳಾಗಿ ಕ್ಯಾನವಾಸಿನ ವಿಷಯವನ್ನು ಬಣ್ಣದಿಂದಾಚೆಗೆ ವಿಸ್ತರಿಸುವ ಹೋರಾಟ ನಡೆಸಿದವು. ಈ ಕ್ಯಾನವಾಸಿನೊಂದಿಗೆ ಹೋರಾಟದ ಕಾರಣಕ್ಕಾಗಿಯೇ ಆ ಶತಮಾನದಲ್ಲಿ ಒಂದರ ಹಿಂದೆ ಒಂದರಂತೆ ಹುಟ್ಟಿಕೊಂಡ ಕಲಾಚಳುವಳಿಗಳು ವರ್ಣಚಿತ್ರ ಸಂಪ್ರದಾಯವನ್ನು ಪ್ರಶ್ನಿಸುವ ಪ್ರಕ್ರಿಯೆ ಯಲ್ಲಿ ಪಾಲ್ಗೊಂಡವು.

ಚಿತ್ರ, ಶಿಲ್ಪ, ಸೃಷ್ಟಿ ಪ್ರಕ್ರಿಯೆಯ ಸಂಪ್ರದಾಯ, ನಿರ್ವಹಣೆಗಳನ್ನು ಮೀರಿ ಅಗ್ನಿಪರ್ವತ ದಿಂದ ಹೊರ ಚಿಮ್ಮಿದ ಲಾವಾದಂತೆ ಕಲಾವಿದರು ವೈವಿಧ್ಯಮಯ ಹಾದಿಗಳನ್ನು ಕಂಡುಕೊಂಡರು. ನಂತರ ವೈಯಕ್ತಿಕ ಹಾಗೂ ಲಿಂಗ, ಲೈಂಗಿಕ ರಾಜಕಾರಣಗಳ ಕಾರಣವಾಗಿ ಅಭಿವ್ಯಕ್ತಿಗೆ ಹಲವು

ಅಸಾಮಾನ್ಯ ಮೂಲ ನೋಟಗಳು ದಕ್ಕುವಂತಾಯಿತು. ಕಲೆಯ ಅಭಿವ್ಯಕ್ತಿ ವೈಯಕ್ತಿಕ ಅಭಿವ್ಯಕ್ತಿಯಾಗಿ ಹೊಸ ತಂತ್ರಜ್ಞಾನವನ್ನು ಕಾಲ ಮತ್ತು ಅವಕಾಶಕ್ಕೆ ಹೊಸ ಅರ್ಥ ಮತ್ತು ದೃಷ್ಟಿಕೋನವನ್ನು ತಂದುಕೊಡಲು ದುಡಿಸಿಕೊಳ್ಳಲಾಯಿತು. ಮನಶಾಃಸ್ತ್ರೀಯ ಕೊಡುಗೆಯೂ ಕಡಿಮೆಯೇನಲ್ಲ.

ಕಳೆದ ೨೦ನೇ ಶತಮಾನದ ಅಂತ್ಯದಲ್ಲಿ ಅಭಿವ್ಯಕ್ತಿ ಮಾಧ್ಯಮವಾಗಿ ಕಲಾವಿದರು ದೇಹವನ್ನು ದುಡಿಸಿಕೊಂಡು ಇನ್ನಿತರ ಮಾಧ್ಯಮಗಳೊಂದಿಗೆ ನಡೆಸಿದ ಪ್ರಯೋಗಗಳು, ಲಿಂಗ, ಮಿನಿಮಲಿಸ್ಟ, ಕಾನ್‌ಸೆಪ್ಚುಯಲ್ ದೃಷ್ಟಿಕೋನಗಳು ಸುಪ್ತ ಹಾಗೂ ಬುದ್ಧಿವಂತಿಕೆಯ ಪ್ರಜ್ಞೆಗ್ಗಳು, ರಾಜಕೀಯ, ಪೋಸ್ಟ ಮಾಡ್ರನಿಸಂ, ಕಲೋನಿಯಲಿಸಂನಂಥ ಅನುಭವಗಳೂ ಕಾಣಿಸಿಕೊಂಡವು. ಪ್ರತಿಷ್ಠಾಪನಾ ಕಲೆಯಲ್ಲಿ ರಾಜಕೀಯ ವ್ಯಕ್ತಿಗಳ ಅಸ್ತಿತ್ವವನ್ನು ಹುಡುಕಿಕೊಳ್ಳುವ ದೃಷ್ಟಿಯಿಂದ ವೈಯಕ್ತಿಕ ಕಥಾನಕಗಳ ದಾಖಲೆ ಅಭಿವ್ಯಕ್ತಿಗಳಿಗೆ ವೀಡಿಯೋ ಮಾಧ್ಯಮವನ್ನು ದುಡಿಸಿಕೊಳ್ಳಲಾಯಿತು. ಡಿಜಿಟಲ್ ಕಲೆಯ ಕಂಪ್ಯೂಟರ್ ಹಾಗೂ ಲೇಸರ್ ಬೆಳಕು, ಬಾಹ್ಯಕಾಶ, ಟೆಲಿಕಮ್ಯುನಿಕೇಷನ್‌ಗಳನ್ನು ದುಡಿಸಿಕೊಳ್ಳಲಾಯಿತು. ಅಂದಿನ ದಿನಗಳ ಹಾಗೂ ಇಂದಿನ ದ್ವಂದ್ವಗಳಲ್ಲಿ ಒಂದೆಂಬಂತೆ ಮನುಷ್ಯನಿಗೆ ಒಂದು ರೀತಿಯಲ್ಲಿ ಪರಕೀಯ ಪ್ರಜ್ಞೆಯನ್ನು ಉಂಟು ಮಾಡುವ technological Art or Electronic ಈ ageನ ಕಲೆಯ ಸಾಮಾಜಿಕ ಮತ್ತು ಸೌಂದರ್ಯಾತ್ಮಕ ಉಪಯುಕ್ತತೆ ಅಥವಾ ಒಳನೋಟದ ಪುಟಗಳು ಇನ್ನೂ ಹೊರಗಿನ ಪ್ರಭಾವವನ್ನು ಧಿಕ್ಕರಿಸಿ ಸ್ಥಳೀಯ ದೇಶೀ ಸೊಗಡಿಗೆ ಪ್ರಾಮುಖ್ಯತೆ ಹೆಚ್ಚಾಗುತ್ತಿದೆ. ಈ ಹೊಸ ಆಯಾಮದ ಕಲೆ, ಖಾದಿ, ಸೂಜಿ, ದಾರಗಳಂಥ ಮಾಧ್ಯಮಗಳೇ ಅಲ್ಲದೆ ಮಣ್ಣಿನ ವಾಸನೆಯ ಸ್ಥಳೀಯ ರೂಪಗಳನ್ನು ದುಡಿಸಿಕೊಳ್ಳುತ್ತಿರುವ ಕನ್ನಡದ ಸಂದರ್ಭದ ಬೆಳವಣಿಗೆಯೂ ಕುತೂಹಲ ಮೂಡಿಸಿದೆ. ಆದರೂ ಈ ಹೊಸ ಹೊಸ ಮಾಧ್ಯಮಗಳತ್ತ ಕೈಚಾಚುವ ಹಂಬಲ ಕಲಾವಿದರಿಗೆ ಇದೆ ಎಂಬುದೇ ಮನುಕುಲದ ಸಂಸ್ಕೃತಿಯ ಮುನ್ನಡೆಯ ಸಹಜ ಸೂಚನೆಯಂತಿದೆ.

ಇನ್ನೂ ಈ ಸಂಚಿಕೆಯಲ್ಲಿ ಹಿಂದಿನಂತೆ ಮೊದಲ ಬಾರಿಗೆ ಬರೆದಿರುವ ಕೆಲವು ಬರಹಗಾರರು ಅವರ ಬರಹದ ಭಾಷೆ, ಪದ, ವಾಕ್ಯ, ಪ್ರಯೋಗಗಳನ್ನು ಸಾಧ್ಯವಾದೆಡೆ ತಿದ್ದಿ ಉಳಿದೆಡೆ ಹಾಗೆಯೇ ಉಳಿಸಿಕೊಳ್ಳುವ ಪ್ರಯತ್ನ ಮಾಡಿದ್ದು ಸಂಪಾದಕರ ಅಭಿಪ್ರಾಯವಾಗಿದೆ. ಮೂಲತಃ ಇವರುಗಳು ಕಲಾವಿದರಾಗಿರುವುದರಿಂದ ಕಲೆಯ ಅಭಿವ್ಯಕ್ತಿಯಲ್ಲಿ ಕಲಾವ್ಯಾಕರಣ ಮೀರಿ ಸೃಷ್ಟಿಸುವಂತೆ ಇಲ್ಲಿ ಸಾಹಿತ್ಯದ ವ್ಯಾಕರಣ ಮೀರಿದ್ದು ಕಾಣಬಹುದೆನ್ನುತ್ತಾರೆ. ಆದರೆ ಈ ಮೀರುವಿಕೆಯ ಅಭಿವ್ಯಕ್ತಿಯಲ್ಲಿ ಹೊಸ ಅನುಭವಗಳ ತೀವ್ರತೆಯ ಒತ್ತಡವಿದ್ದರೆ ಹೊಸ ಭಾಷೆಯನ್ನೇ ಹುಟ್ಟು ಹಾಕುವ ಅಗತ್ಯವನ್ನು ಇವರು ಕಂಡುಕೊಳ್ಳಬಹುದು. ಈ ಸಂಚಿಕೆಯಲ್ಲಿ ಮೊದಲಲ್ಲಿ ಬೆಂಗಳೂರಿನಲ್ಲಿ ನಡೆದ ಅಂತರಾಜ್ಯ ವಿನಿಮಯ ಕಲಾಪ್ರದರ್ಶನ ಕಾರ್ಯಕ್ರಮದ ಉದ್ಘಾಟನೆಯನ್ನು ಆಗಿನ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಸಚಿವೆ ಶ್ರೀಮತಿ ರಾಣಿ ಸತೀಶ್ ನೆರವೇರಿಸಿದ್ದರು. ಅದರ ಸಂಕ್ಷಿಪ್ತ ವಿಚಾರಗಳನ್ನು ಇಲ್ಲಿ ನೀಡಲಾಗಿದೆ. ಹಾಗೇ ಬೆಂಗಳೂರಿನ

ಗ್ಯಾಲರಿಗಳಲ್ಲಿ ನಡೆದ ಚಿತ್ರ, ಶಿಲ್ಪ ಇತರ ಮಾಧ್ಯಮಗಳ ಕಲಾಪ್ರದರ್ಶನಗಳು ಮತ್ತು ಕರ್ನಾಟಕದ ಇತರ ಭಾಗಗಳ ಕಲಾಪ್ರದರ್ಶನದ ಪಟ್ಟಿಯನ್ನು ಕಲಾವಿದರು, ಸ್ಥಳ, ಊರು, ವಿವರಣೆಯನ್ನು ಸ್ಪಷ್ಟವಾಗಿ ಕಟ್ಟಿಕೊಟ್ಟಿದ್ದಾರೆ. ಹಾಗೇ ಈ ಸಂಚಿಕೆಯ ಮುಖ್ಯಭಾಗವಾದ ಯುವ ಕಲಾವಿದರ ಬರಹಗಳನ್ನು ಇಲ್ಲಿ ಕಾಣಬಹುದಾಗಿದೆ.

ಶಿವಾನಂದ ಬಂಟನೂರ ಅವರ "ಜನಪದ ದೃಶ್ಯಕಲೆಗಳ ಅಧ್ಯಯನದ ಅಗತ್ಯ ಮತ್ತು ಪ್ರಸ್ತುತತೆ"ಎಂಬ ಲೇಖನದಲ್ಲಿ ಸಾಹಿತ್ಯ, ಸಂಗೀತ, ನೃತ್ಯ, ಚಿತ್ರ, ಶಿಲ್ಪ ಮೊದಲಾದ ಲಲಿತ ಕಲೆಗಳು ಆಯಾಕಾಲದ ಜನಾಂಗದ ಪ್ರತಿಬಿಂಬಗಳಾಗಿ ಬೆಳೆದು ಬಂದಿರುವುದರ ಜೊತೆಗೆ ಜನಪದ ದೃಶ್ಯಕಲೆಗಳಾದ ಚಿತ್ರ ಮತ್ತು ಶಿಲ್ಪಕಲೆಗಳೂ ಒಂದು ವಿಶಿಷ್ಟ ಸ್ಥಾನ ಪಡೆದುಕೊಂಡಿದ್ದು ಗ್ರಾಮೀಣ ಬದುಕನ್ನು ಪ್ರತಿಬಿಂಬಿಸುವುದಾಗಿದೆ. ಈ ಜನಪದ ಕಲೆ ಎಂದರೇನು? ಅದರ ಪ್ರಾಮುಖ್ಯತೆ, ವೈವಿಧ್ಯತೆಗೆ ಅದರ ಉಳಿವಿಕೆಗೆ ಅಧ್ಯಯನದ ಅಗತ್ಯತೆಯ ಕುರಿತು ಚರ್ಚಿಸಲಾಗಿದೆ. ಮುಖ್ಯವಾಗಿ ನಮ್ಮ ಸಂಸ್ಕೃತಿಯೊಂದರ ಅಧ್ಯಯನಕ್ಕೆ ಇರುವ ಆಕರಗಳಲ್ಲಿ ಜನಪದ ದೃಶ್ಯಕಲೆಗಳ ಪಾತ್ರ ಬಹುಮುಖ್ಯ ಎನ್ನುವುದನ್ನು ತಿಳಿಸಲಾಗಿದೆ.

ಶೀಲಾ ಗೌಡರನ್ನು 'ಸಂಯೋಜಿತ ಸಂಸ್ಥೆಯ' ಆಶ್ರಯದಲ್ಲಿ ಸನ್ಮಾನಿಸಿದ್ದು, ನಯನ ಸಭಾಂಗಣದಲ್ಲಿ ಜುಲೈ ೧೫, ೧೯೯೯ರ ಸಂದರ್ಭದಲ್ಲಿ ಶ್ರೀ ಕೆ.ಎಸ್.ಶ್ರೀನಿವಾಸಮೂರ್ತಿಯವರು ಮಾಡಿದ ಅಭಿನಂದನಾ ಭಾಷಣದ ಸಂಕ್ಷಿಪ್ತ ಪರಿಚಯವನ್ನು ಸಂಪಾದಕರು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಹಾಗೇ ಸಿ.ಎಫ್.ಜಾನ್‌ರವರ 'ಪ್ರಾಂತ್ಯೀಕರಣ: ಒಂದು ಕಲಾ ಸಂದರ್ಭ' ಲೇಖನವಿದ್ದು, ಬೆಂಗಳೂರಿನ ಹೊರವಲಯದ ಕನಕಪುರ ರಸ್ತೆಯ ದೊಡ್ಡ ಕಲ್ಲಸಂದ್ರದ ಬಳಿ ನಡೆದ "ಪ್ರಾಂತ್ಯೀಕರಣ ಒಂದು ಕಲಾಸಂದರ್ಭ' ಪ್ರತಿಷ್ಠಾಪನಾ ಅಭಿವ್ಯಕ್ತಿಗಳ ಪ್ರದರ್ಶನ ಸಂದರ್ಭದಲ್ಲಿ ವೀಕ್ಷಕರಿಗಾಗಿ ಬಿಡುಗಡೆ ಮಾಡಿದ್ದ ಸಿ.ಎಫ್.ಜಾನ್ ಹಾಗೂ ಅನಿಲ್‌ಕುಮಾರ್‌ರ ಬರಹಗಳಿದ್ದು, ಸಿ.ಎಫ್.ಜಾನ್ ಕ್ಯುರೇಟ್ ಮಾಡಿದ್ದ ಪ್ರದರ್ಶನದಲ್ಲಿ ಅವರೊಂದಿಗೆ ರಮೇಶ್ ಕಲ್ಕೂರ್, ರಾಘವೇಂದ್ರರಾವ್, ಸಿ.ಎಂ.ರಮೇಶ್, ಸುರೇಖ, ಟಿ.ಎಂ.ಅಝಿಜ್‌ರವರುಗಳ ಪ್ರತಿಷ್ಠಾಪನಾ ಅಭಿವ್ಯಕ್ತಿಗಳಿದ್ದವು.

ಈ ಅಭಿವ್ಯಕ್ತಿಯ ಕಲಾ ಪ್ರದರ್ಶನದ ಕುರಿತಾಗಿ ಅನಿಲ್‌ಕುಮಾರ್‌ರವರು ಬರೆದ "ಪ್ರಾಂತ್ಯೀಕರಣ ನೈತಿಕತೆ: ಒಂದು ಸಮಕಾಲೀನ ಸ್ವಗತ" ಎಂಬ ಲೇಖನದಲ್ಲಿ ಪರಿಚಯದೊಂದಿಗೆ ವಿವರಣೆಯನ್ನು ನೀಡಲಾಗಿದೆ. ೭೦ ಮತ್ತು ೮೦ರ ದಶಕದಲ್ಲಿ ಇವರೆಲ್ಲರ ಸಾಂಸ್ಕೃತಿಕ ಪ್ರಜ್ಞೆ ರೂಪುಗೊಂಡಿದ್ದು, ಅವರುಗಳು ಜೀವಿಸಿದ್ದ ನಗರದ ಇತಿಹಾಸವು ಒಂದು ಬಗೆಯ ವೈವಿಧ್ಯತೆಯ ಪ್ರಜ್ಞೆಯನ್ನು ಇದರಲ್ಲಿ ಒಡಮೂಡಿಸಿದೆ. ಈ ಪ್ರದರ್ಶನದಲ್ಲಿ ವಿಷಯಾತ್ಮಕವಾಗಿ ಸಂಕೀರ್ಣವೆನಿಸುವ ಪ್ರಾಂತ್ಯೀಕರಣ ಹಾಗೂ ಅಭಿವ್ಯಕ್ತಿಯ ಹೊಸ ಕಲಾರೂಪಗಳ ನಡುವೆ ಅವಿನಾಭಾವ ಸಂಬಂಧ

ಏರ್ಪಟ್ಟಿದೆ. ಏಕೆಂದರೆ ಈ ಪ್ರದರ್ಶನವು ಇಡೀ ೬೦ರ ದಶಕದ ಕಲಾ ಸಂದರ್ಭದ ಸಮಗ್ರ ಸಂಕೇತವಾಗಿ ನಿಲ್ಲಬಹುದು ಎಂದು ಅಭಿಪ್ರಾಯಿಸಿದ್ದಾರೆ. ಮುಂದೆ ಕಲಾವಿದರ ವಸ್ತು, ವಿಷಯ, ಅಭಿವ್ಯಕ್ತಿಯ ರೂಪ ವೈವಿಧ್ಯತೆಯನ್ನು ಪ್ರಸ್ತುತಪಡಿಸಲಾಗಿದೆ. ಹಾಗೆ ಅಲ್ಲಲ್ಲಿ ಆ ಕಲಾವಿದರ ಕೆಲವು ಕಲಾಕೃತಿಗಳು ಕಪ್ಪು, ಬಿಳುಪು ಛಾಯಾಚಿತ್ರಗಳನ್ನು ನೀಡಿದ್ದು, ಓದುಗರಿಗೆ ಕಲಾಕೃತಿಗಳನ್ನು ನೋಡಿ ಮತ್ತಷ್ಟು ಮನದಟ್ಟಾಗುವಂತಿದೆ.

ಮತ್ತೊಂದು ಲೇಖನ ದಿಲೀಪ್‌ಕುಮಾರ್ ಕಾಳೆಯವರ "ನವ್ಯತೆಯಲ್ಲಿ ಕಲಾವಿದನ ಅಸ್ತಿತ್ವ"ಎಂಬ ವಿಷಯವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ಈ ನವ್ಯ ಕಲೆಯ ಕುರಿತಾಗಿ ಚರ್ಚೆಗಳು, ವಿಮರ್ಶೆಗಳು, ಬರಹಗಳು, ಪ್ರಯೋಗಗಳು ನಡೆಯುತ್ತಲೇ ಇದ್ದು, ಈ ನವ್ಯ ಕಲೆಯ ಕಳೆದ ನೂರೈವತ್ತಕ್ಕೂ ಹೆಚ್ಚು ವರ್ಷಗಳ ಇತಿಹಾಸವಿದೆ ಎನ್ನಲಾಗಿದೆ. ಪ್ರಯೋಗಶೀಲತೆಯಿಂದ ಕಲಾವಿದನು ಪ್ರಾಚೀನ ಕಾಲದ ಸಂಸ್ಕೃತಿಯನ್ನು ಅತ್ಯಾದರ ಪೂರ್ವಕವಾಗಿ ತಮ್ಮ ಕಲೆಯಲ್ಲಿ ಬಳಸಿಕೊಂಡಿದ್ದಾರೆ. ಸೌಂದರ್ಯವೇ ಕಲೆಯ ಗುರಿಯೆಂದು ಬಹಳ ಕಾಲದಿಂದ ಬಂದಿರುವ ವಿಚಾರವನ್ನು ತೊಡೆದು ಹಾಕಿ, ಎಷ್ಟೇ ಭಯಂಕರವಾಗಿದ್ದರೂ ಸತ್ಯವೇ ಕಲೆಯ ಉದ್ದೇಶವೆಂದು ನವ್ಯತೆ ಪ್ರತಿಪಾದಿಸಿದ್ದನ್ನು ಆಧಾರಮುಕ್ತವಾಗಿ ಇಲ್ಲಿ ಲೇಖಕರು ಪರಿಚಯಿಸುತ್ತಾ ನವ್ಯತೆಯ ಪರಂಪರೆ ಯಾವ ದಿಕ್ಕಿನಲ್ಲಿ ನಡೆದಿದೆ ಎನ್ನುವುದನ್ನು ಸೂಚಿಸಲಾಗಿದೆ.

೨೦ನೇ ಶತಮಾನದಲ್ಲಿ ಅನೇಕ ವಾದಗಳು ಸೃಷ್ಟಿಗೊಂಡು, ಒಂದು ವಿಶಿಷ್ಟ ರುಚಿಯನ್ನೂ, ವಿಶಿಷ್ಟ ಬಣ್ಣವನ್ನೂ ನವ್ಯತೆಗೆ ಕೊಡುತ್ತವೆ. ನವ್ಯತೆಯ ಕುರಿತಾಗಿ ಅನೇಕ ವಿಮರ್ಶಕರ ಅಭಿಪ್ರಾಯಗಳನ್ನು ಇಲ್ಲಿ ಸಂಕೇತಿಸಲಾಗಿದೆ.

ಕೆ.ಜಿ.ಗಣೇಶ ಶಾಸ್ತ್ರೀಯವರು 'ಶಾಂತಿನಿಕೇತನ' ದಲ್ಲಿದ್ದಾಗ ತಮ್ಮ ದಿನಚರಿಯ ಪುಟಗಳಿಂದಾಯ್ದ ಕೆಲವು ಮಾತುಗಳನ್ನು ಇಲ್ಲಿ ಬಿಚ್ಚಿಟ್ಟಿದ್ದಾರೆ. ಅವರು ಕಲಿಯುವ ಸಂದರ್ಭದಲ್ಲಿನ ಶಾಂತಿನಿಕೇತನದ ಕಲಾ ಪರಿಸರ, ಅಲ್ಲಿ ನಡೆದ ಚಳುವಳಿಗಳು, ಅನುಭವಗಳ ಕುರಿತಾದ ತಮ್ಮ ದಿನಚರಿಯಲ್ಲಿ ಪ್ರಕಟವಾಗುತ್ತ ಹೋಗುತ್ತವೆ. ಲೇಖಕರು ವ್ಯಾಸಂಗದ ಸಂದರ್ಭದಲ್ಲಿನ ನಂದಲಾಲ್ ಬೋಸ್, ಬಿ.ಎ.ಮುಖರ್ಜಿ, ರವೀಂದ್ರನಾಥ ಟ್ಯಾಗೋರ್ ಕಲಾಕೃತಿಗಳಿಂದ ಪ್ರಭಾವಿತರಾಗಿದ್ದು, ಗತವೈಭವದಲ್ಲಿ ಅನುಭವಿಸಿದ ಕ್ಷಣಗಳನ್ನು ಕಲಾ ಪರಿಸರ ಕಲಾವಿದರಿಗೆ ನೀಡುತ್ತಿರುವ ಪ್ರೇರಣೆಯನ್ನು ಈ ಲೇಖನದ ಲೇಖಕರು ತಮ್ಮ ಅನುಭವಗಳನ್ನು ಇಲ್ಲಿ ಮೆಲುಕು ಹಾಕಿದ್ದಾರೆ. ಹಿಂದಿನ ಸಂಚಿಕೆಯಲ್ಲಿನ 'ಕಲಾಶಿಕ್ಷಣ ಮತ್ತು ಕಲೆ' ಎಂಬ ಲೇಖನದ ಮುಂದುವರೆದ ರೂಪವಾದ 'ಕಲಾಶಿಕ್ಷಣ ಪ್ರಸ್ತುತ ಸ್ಥಿತಿಗತಿ'ಯನ್ನು ಪ್ರಶ್ನಿಸುತತಾ ಅದಕ್ಕೆ ಉತ್ತರಗಳ ಪಟ್ಟಿಯನ್ನು ನೀಡಲಾಗಿದೆ. ಕಲಾಶಿಕ್ಷಣದ ಪದ್ಧತಿಗೆ ಅನುಕೂಲವಾಗುವಂತೆ ೨ ಪ್ರಕಾರಗಳನ್ನು ವಿಂಡಿಸಿಕೊಂಡು ಸಾಮಾನ್ಯ ಶಿಕ್ಷಣದ ಜೊತೆಗೆ ಸಂಬಂಧ ಕಲ್ಪಿಸಿ ಮಕ್ಕಳನ್ನು ಸೃಜನಶೀಲತೆಯಲ್ಲಿ ತೊಡಗಿಸುವುದು. ಈ ದೃಷ್ಟಿಯಿಂದ ಹೊಸ ಶಿಕ್ಷಣ ನೀತಿಯನ್ವಯ ಹೊಸ ಪಠ್ಯಕ್ರಮಗಳನ್ನು ಇಂದು ಪ್ರಾಥಮಿಕ

ಹಂತದಿಂದ ಪ್ರೌಢಶಾಲಾ ಹಂತದವರೆಗೆ ಪಠ್ಯಕ್ರಮವನ್ನು ರೂಪಿಸಿರುತ್ತದೆ. ಇಲ್ಲಿ ಎಲ್ಲ ಹಂತಗಳಲ್ಲೂ ಸೃಜನಶೀಲತೆಗೆ ಅನುಭವಗಳ ಅಭಿವ್ಯಕ್ತಿಯ ಹಲವು ಮುಖಗಳಿಗೆ ಕುಶಲಕಲೆಯೂ ಸೃಜನಶೀಲ ವಾಗಬಹುದು. ಈ ನಿಟ್ಟಿನಲ್ಲಿ ವಿವಿಧ ಚಟುವಟಿಕೆಗಳಲ್ಲಿ ರಂಗೋಲಿ, ಪೇಪರ ಕಟಿಂಗ್, ಶುಭಾಶಯ ಪತ್ರಗಳ ತಯಾರಿಕೆ ಇನ್ನೂ ಅನೇಕ ರೀತಿಯ ಕಲಿಕೆಯ ಅವಕಾಶವನ್ನು ವಯೋಮಾನಕ್ಕನುಗುಣವಾಗಿ ಮಕ್ಕಳಿಗೆ ಸಮನಾದ ಅವಕಾಶ ಮತ್ತು ಮಾರ್ಗದರ್ಶನಗಳಿದ್ದರೆ ಮುಂದೆ ಅವರು ಪ್ರಬುದ್ಧ ಚಿಂತಕರೂ, ಕಲಾವಿದರೂ ಆಗುವ ಸಾಧ್ಯತೆ ಇದೆ ಎಂಬ ಅಭಿಪ್ರಾಯವನ್ನು ನಮ್ಮ ಮುಂದಿಡಲಾಗಿದ್ದು, ಇದೊಂದು ಕಲಾ ಶಿಕ್ಷಣದಲ್ಲಿ ನಡೆಯಬೇಕಾದ ಬಹುಮುಖ್ಯ ಕಾರ್ಯವಾಗಿದೆ. ಈ ನಿಟ್ಟಿನಲ್ಲಾದರೂ ನಮ್ಮ ಕಲಾಶಿಕ್ಷಣಕ್ಕೆ ಕಲಾವಿದರ ಕೊರತೆ ನೀಗಿಸಿ ಸರಕಾರ ಕಲಾವಿದರಿಗೂ ಶಿಕ್ಷಕರ ಒಂದು ನಮೂದೆಯನ್ನು ನೀಡಿದ್ದರೆ ನಮ್ಮ ಸಂಸ್ಕೃತಿಯ ಪರಂಪರೆಯನ್ನು ಈ ಶಿಕ್ಷಣದ ಮೂಲಕ ಬೆಳೆಸಿದಂತಾಗುವಲ್ಲಿ ಸಂಶಯವಿಲ್ಲವೆನ್ನಬಹುದು. ಒಟ್ಟಾರೆ ಈ ಕೃತಿಯಲ್ಲಿ ಶಿಲ್ಪ, ಚಿತ್ರ, ಅಭಿವ್ಯಕ್ತಿಯ ವೈವಿಧ್ಯತೆಗೆ ಕಲಾವಿದರ ಸ್ಪಂದನ, ಪ್ರದರ್ಶನ, ಉದ್ದೇಶ ಮುಖ್ಯವಾಗಿ ಪ್ರಸ್ತುತ ಸಂದರ್ಭದಲ್ಲಿ ನಡೆಯ ಬೇಕಾಗಿರುವ ಕಲಾಶಿಕ್ಷಣದ ವ್ಯವಸ್ಥೆ ಮತ್ತು ಪರ್ಯಾಯ ರೀತಿಯನ್ನು ಒಳಗೊಂಡಂತೆ ಅನೇಕ ವಿಷಯಗಳ ಕುರಿತಾಗಿ ಯುವ ಕಲಾ ಸಾಹಿತಿಗಳು ಬರೆದಿರುವ ಲೇಖನಗಳು ನಿಜಕ್ಕೂ ಪ್ರಸಂಶನೀಯವೆನಿಸುತ್ತದೆ. ಮುಖಪುಟ ವಿನ್ಯಾಸದಲ್ಲಿ ಶ್ರೀ ಅಸದ್ ಆಲಿಯವರ ಕಲಾಕೃತಿಯು ಕಂಡುಬಂದಿದ್ದು ಮತ್ತು ಹಿನ್ನೋಟದಲ್ಲಿ ದಿಲೀಪ್‌ದಾಸ್ ಗುಪ್ತಾ ಮತ್ತು ಯೋಗೇಂದ್ರನಾಥ ಯೋಗಿ ಅವರ ಕಲಾಕೃತಿಗಳಿದ್ದು ಜೊತೆಗೆ ಈ ಕಲಾವಿದರ ಕಲಾಪ್ರದರ್ಶನದ ಉದ್ಘಾಟನಾ ಸಮಾರಂಭದ ಒಂದು ನೋಟವನ್ನು ಇಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಈ ಸಂಚಿಕೆಯು ಸುಂದರವಾಗಿ ಮುದ್ರಣಗೊಂಡಿದಾಗಿದೆ.

### ೩. ಕರ್ನಾಟಕ ಕಲಾವಾರ್ತೆ, ಸಂಚಿಕೆ ೩

ಜುಲೈ–ಸೆಪ್ಟೆಂಬರ್ ೨೦೦೦ದಲ್ಲಿ ಹೊರಬಂದ ಕರ್ನಾಟಕ ಕಲಾವಾರ್ತೆಯ ಸಂಚಿಕೆ ೩ ಕೆ.ವಿ.ಸುಬ್ರಹ್ಮಣ್ಯಂರವರ ಸಂಪಾದಕತ್ವದಲ್ಲಿ ಪ್ರಕಟಗೊಂಡಿದೆ. ಒಟ್ಟು ೩೬ ಪುಟಗಳನ್ನು ಹೊಂದಿದ ಈ ಸಂಚಿಕೆಯು ಕಲಾವಿದರ ಕಲಾಕೃತಿಗಳು ಮತ್ತು ಯುವ ಕಲಾಸಾಹಿತಿಗಳ ಲೇಖನಗಳಿಂದ ತುಂಬಿಕೊಂಡು ಉತ್ತಮ ರೀತಿಯಲ್ಲಿ ಮೂಡಿಬಂದಿದೆ.

ಪ್ರಸ್ತುತ ಕೃತಿಯಲ್ಲಿ ೧೦ ಲೇಖನಗಳಿದ್ದು, ಅವುಗಳಲ್ಲಿ ಕೆಲವು ಕಲಾ ಲೇಖನಗಳು, ಪುಸ್ತಕ ಪರಿಚಯ, ರಾಜ್ಯದ ಒಳಗಿನ, ಹೊರಗಿನ ಕಲಾಚಟುವಟಿಕೆಗಳಿಂದ ಅವೃತಗೊಂಡಿದೆ. ಈ ಸಂಚಿಕೆಯಲ್ಲಿನ ಬರಹಗಳ ಕುರಿತಾಗಿ ಸಂಪಾದಕರಾದ ಕೆ.ವಿ. ಸುಬ್ರಹ್ಮಣ್ಯಂ ಅವರು ಒಟ್ಟಾರೆಯಾಗಿ "ಪ್ರಭಾವಗಳನ್ನು ಅರಗಿಸಿಕೊಳ್ಳಲೇಬೇಕಾಗಿರುವ ಅನಿವಾರ್ಯತೆ..." ಎಂಬ ಅಂಶವನ್ನಿಟ್ಟುಕೊಂಡು ವಿವಿಧ ದೃಷ್ಟಿಕೋನಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಪ್ರಭಾವದ ನೆರಳಿಲ್ಲದ ಇಂದಿನ ಯಾವುದೂ ಜೀವ ಧ್ವನಿಯಿಂದ ಇರುವುದು ಸಾಧ್ಯವಿಲ್ಲದಂಥ ಸಂದರ್ಭ ನಮ್ಮ 'ಸ್ವಯಂ'ನ ಕಂಡುಕೊಳ್ಳುವಿಕೆ, ಕಳೆದುಕೊಳ್ಳುವಿಕೆ ಹಾಗೂ ಪುನರ್ ಪಡೆದು ಕೊಳ್ಳುವಿಕೆಗಳೆಲ್ಲದರ ಹಿಂದೆಯೂ ಹಲವು ನೆಲೆಗಳ ಪ್ರಭಾವಗಳು ಕೆಲಸ ಮಾಡಿವೆ. ಬ್ರಿಟೀಷ್ ವಸಾಹತುಶಾಹಿ ಪ್ರಭಾವ ನಮ್ಮ ಸಾಂಸ್ಕೃತಿಕ ದೇಶೀ ನೆಲೆಗಳ ಮೇಲೆ ಸಾಕಷ್ಟು ಶಕ್ತಿಯುತವಾಗಿ ಆಗಿದೆ. ಹಾಗೆಯೇ ವಸಾಹತುಶಾಹಿ ಸಂದರ್ಭದ ರಾಷ್ಟ್ರೀಯತೆಯ ಬಹುಮುಖತ್ವವನ್ನು ನಾಶಗೊಳಿಸುವಂಥ ಪ್ರಭಾವ ಬೀರಿತಷ್ಟೆ. ಇಂಥ ರಾಷ್ಟ್ರೀಯತೆಯ ವಿರುದ್ಧ ಪ್ರಾದೇಶಿಕ ಸಂಸ್ಕೃತಿಯ ವೈಶಿಷ್ಟತೆಯನ್ನು ಸಮರ್ಥಿಸುವುದೂ ಸಹ ಕನ್ನಡದ ಸಂದರ್ಭದ 'ದೇಶಿ' ಅಥವಾ 'Nativisum'ನ ಉದ್ದೇಶ. ಈ ಉದ್ದೇಶಿತ ಕಲೆ ಅನಿವಾರ್ಯವಾಗಿ ಎರಗುವ ಹೊರಗಿನ ಪ್ರಭಾವವನ್ನು ಆರೋಗ್ಯಪೂರ್ಣವಾಗಿ ಅರಗಿಸಿಕೊಂಡು, ತನ್ನ ಸ್ವಂತಿಕೆಗೆ ಅಪಾಯವಾಗದ ರೀತಿಯಲ್ಲಿ ತನ್ನ ವಿಶಿಷ್ಟ ಜೀವಧ್ವನಿಗೆ ಪೂರಕವಾಗುವಂತೆ ಅಭಿವ್ಯಕ್ತಿಸಬೇಕಾಗಿದೆ. ಹಲವಾರು ಕಲಾವಿದರು ಈ ದೃಷ್ಟಿಯ ಅಭಿವ್ಯಕ್ತಿಗೆ ಕಾರಣರೂ ಆಗಿದ್ದಾರೆ. ಇಲ್ಲಿ ಅನ್ಯ ಸಂಸ್ಕೃತಿಯ ಪ್ರಭಾವಗಳ ಸ್ವೀಕರಣೆಯಲ್ಲಿ ಆರೋಗ್ಯಪೂರ್ಣ ನಿಲುವು ಮುಖ್ಯ. ಆಗ ಪಶ್ಚಿಮದ ಅಥವಾ ಇನ್ಯಾವುದೇ ದಿಕ್ಕಿನ ಪ್ರಭಾವಗಳು ದೇಶೀ ದೃಶ್ಯಕಲೆಯಲ್ಲಿ ಸಮನ್ವಯಗೊಂಡು ದೇಶೀ ಸಂಸ್ಕೃತಿಯ ಸತ್ವಶೀಲ ಜೀವಧ್ವನಿಯನ್ನು ಮರು ಚೇತನಗೊಳಿಸುವಂತೆ ಪ್ರಭಾವಿಸಿ ಕೆಲಸ ಮಾಡುತ್ತವೆ. ಹೀಗಾಗಿ ನಮ್ಮ ಇಂದಿನ ಕಲಾವಿದರ ಅಭಿವ್ಯಕ್ತಿಗಳಲ್ಲಿ ಅನ್ಯ ಪ್ರಭಾವಗಳನ್ನು ೧. ರೂಪ ನಿರ್ವಹಣೆ ಶೈಲಿ, ೨. ಮಾಧ್ಯಮಗಳು ಹಾಗೂ ಅವನ್ನು ದುಡಿಸಿಕೊಳ್ಳುವ ವಿಧಾನಗಳು, ೩. ಚಿಂತನೆ ಅನುಭವಗಳ ಗ್ರಹಿಕೆ ಇತ್ಯಾದಿಗಳ ಮೂಲಕ ಗುರುತಿಸಬಹುದಾಗಿದೆ.

ಈ ನಡುವೆ ಹೊರಗಿನ ಪ್ರಭಾವಗಳ ಬಗ್ಗೆ ವಿಮರ್ಶಕರು ತಮ್ಮ ವಿಮರ್ಶೆ, ಬರಹಗಳಲ್ಲಿ ಪ್ರಸ್ತಾಪಿಸಿದಾಗ ಅಥವಾ ಹೋಲಿಸಿ, ವಿಶ್ಲೇಷಿಸಿದಾಗ ಅತೃಪ್ತಿ ವ್ಯಕ್ತಪಡಿಸುವ ಕೆಲವು ಕಲಾವಿದರು ನಮ್ಮವರ ಕಲೆಯಲ್ಲಿ ಅನಿವಾರ್ಯವಾಗಿ ಅನ್ಯ ಪ್ರಭಾವಗಳು ಕೆಲಸ ಮಾಡಿರುವುದನ್ನು ಆರೋಗ್ಯಪೂರ್ಣ ದೃಷ್ಟಿಯಿಂದ ಗುರುತಿಸುವುದು ಅಚ್ಚರಿಯನ್ನುಂಟು ಮಾಡುತ್ತದೆ. 'ನಮ್ಮ ಕಲಾಕೃತಿಗಳನ್ನು ವಿದೇಶೀ ಕಲೆಯೊಂದಿಗೆ ಹೋಲಿಸಬೇಡಿ' ಎನ್ನುವವರೂ ಇದೇ ಹಾದಿಯವರು.

ಮೂಲತಃ ಕಲಾಶಾಲೆಗಳಲ್ಲಿ ಪಶ್ಚಿಮದ ಹಾಗೂ ಯುರೋಪಿನ ರಾಷ್ಟ್ರಗಳ ಕಲಾ ಇತಿಹಾಸ, ಕಲಾಸೃಷ್ಟಿಗಳ ಬಗ್ಗೆ ಹೆಚ್ಚು ತಿಳಿಯುವ, ಹಲವಾರು ರೀತಿಗಳಲ್ಲಿ ಆ ಮೂಲಗಳಿಂದ ಪ್ರಭಾವಿಸಲ್ಪಟ್ಟಿರುವ, ಇಂದಿಗೂ ಹೊರಗಿನಿಂದ ಆಮದಾಗುವ ಬಣ್ಣ, ಬ್ರಷ್, ಕಾಗದ, ಕ್ಯಾನವಾಸ್‌ಗಳನ್ನು ಅನಿವಾರ್ಯವಾಗಿ ಬಳಸುವ ಹಲವಾರು ಕಲಾವಿದರೂ ಈ ಮಾತುಗಳಿಗೆ ಹೊರತಲ್ಲ ಎಂಬ ಸಂಪಾದಕರ ಮಾತುಗಳಿಗೆ ಪೂರಕವಾದ ಅಂಶಗಳನ್ನು ಹೊಂದಿದ ಪ್ರಸ್ತುತ ಸಂಚಿಕೆಯಲ್ಲಿನ ಮಹೇಂದ್ರರವರ ಬರಹವೊಂದರಲ್ಲಿ ಕಾಣಬಹುದಾಗಿದೆ.

ಇಂದಿನ ಭೌಗೋಳೀಕರಣದ ಸಂದರ್ಭದಲ್ಲಿ ಯಾರ ಪ್ರಭಾವ ಯಾರ ಮೇಲೆ? ಎಂಬ ಪ್ರಶ್ನೆಯನ್ನು ಕೇಳಿಕೊಳ್ಳಬೇಕಾಗಿರುವ ಸಂದರ್ಭದಲ್ಲಿಯೂ ಅನ್ಯ ಪ್ರಭಾವಗಳಿಂದ ತಪ್ಪಿಸಿಕೊಳ್ಳುವುದು ಸಾಧ್ಯವಿಲ್ಲವಾಗಿದೆ. ಹಾಗೆ ನೋಡಿದರೆ ಭಾರತೀಯ ಸಂವಿಧಾನವೂ ಸೇರಿದಂತೆ, ನಮ್ಮ ಸಂಸ್ಕೃತಿ ಜೀವನ ಶೈಲಿಗಳೂ ಸಹ ಹೊರಗಿನ ಉತ್ತಮ ಅಂಶಗಳನ್ನು ಅಳವಡಿಸಿಕೊಂಡು ನಮ್ಮ ತನದ ಸಾಮಾಜಿಕ-ಸಾಂಸ್ಕೃತಿಕ-ರಾಜಕೀಯ ಸೊಗಡನ್ನು ಲೇಪಿಸಿಕೊಂಡಿರುವುದರಿಂದಲೇ ಇಂದಿಗೂ ಅಸಾಮಾನ್ಯ ರೀತಿಯ ಅಸ್ತಿತ್ವ ಗೌರವಗಳನ್ನು ಹೊಂದಿರುವುದು ಸಾಧ್ಯವಾಗಿದೆ ಎಂಬ ಅಂಶವನ್ನು ಸ್ಪಷ್ಟಪಡಿಸುತ್ತಾರೆ.

ಹಾಗೆಯೇ ಪೌರ್ವಾತ್ಯ ಸಾಹಿತ್ಯ, ಸಂಸ್ಕೃತಿ, ಕಲೆಗೂ ಅನ್ಯ ಜನಾಂಗಗಳ ಗಮನ ಸೆಳೆಯುವಲ್ಲಿಯೇ ಅಲ್ಲದೆ, ಇಂದಿಗೂ ವಿದೇಶೀ ಕಲಾವಿದರು ನಮ್ಮ ನಡುವೆ ಅಗಾಗ ಉಳಿದುಕೊಳ್ಳುವಷ್ಟು ಪ್ರಭಾವಶಾಲಿಯಾಗಿವೆ. ಈ ದೃಷ್ಟಿಯಿಂದ ಬೇರೆಯೇ ಆದ ಭಿನ್ನ ಧೋರಣೆಯ ಮಹೇಂದ್ರರ ಬರಹವೊಂದು "ಭಾರತೀಯ ಆಧುನಿಕ ಕಲೆಯ ಕೆಲವು ಆಯಾಮಗಳು" ಎಂಬುದನ್ನು ಪ್ರಸ್ತುತ ಸಂಚಿಕೆಯಲ್ಲಿ ಕಾಣಬಹುದಾಗಿದೆ.

ಇಲ್ಲಿ ಆಧುನಿಕ ಭಾರತೀಯ ಕಲಾ ಸಂದರ್ಭಗಳ ಐತಿಹಾಸಿಕ ಹಿನ್ನೆಲೆಗಳನ್ನು ಕುರಿತು ಸ್ಥೂಲ ಸಮೀಕ್ಷೆ ಮಾಡಲಾಗಿದ್ದು, ಅದರ ಅಗತ್ಯತೆಯಾಗಿರುವುದರಿಂದ ಕಾಲಕಾಲಕ್ಕೆ ನಡೆಯುತ್ತಲೇ ಇರಬೇಕು. ಇದೊಂದು ಅವಶ್ಯವೂ ಆಗಿದೆ ಎಂಬುದನ್ನು ಹಲವು ಅಂಶಗಳಿಂದ ಸ್ಪಷ್ಟಪಡಿಸಿದ್ದಾರೆ. ಈ ಎಲ್ಲದರ ನಡುವೆ ನಮ್ಮತನ ಹುಡುಕಬೇಕಾಗಿರುವುದೇ ಮುಖ್ಯ ಧೋರಣೆ, ಕಲಾ ಇತಿಹಾಸದ ಅನೇಕ ಪ್ರಕಾರಗಳು ಇಂದು ಎಷ್ಟೋ ವೈಚಾರಿಕ ನೆಲೆಗಳು ಅಪ್ರಸ್ತುತವಾಗಿದ್ದರೂ ನಾವು ಹೊಸ ನೆಲೆಗಳನ್ನು ಹುಡುಕಬೇಕಿದೆ. ಜನ ಕಲೆಯಲ್ಲಿ ಇಟ್ಟಿರುವ ನಿರೀಕ್ಷೆ ಹಾಗೂ ಕಲೆ ಜನರಿಂದ ನಿರೀಕ್ಷಿಸುವ ಸ್ಪಂದನವನ್ನು ಕಾಣಬೇಕಾಗಿದೆ ಎಂಬ ನಿಲುವನ್ನು ಲೇಖಕರು ಇಲ್ಲಿ ವಿವರಿಸಿದ್ದಾರೆ. ಈ ಲೇಖನವು ಒಂದು ಹೊಸ ಕಲಾ ಆಸ್ವಾದನೆಗೆ, ಅನುಭವಿಸುವಿಕೆಗೆ ತಿರುವು ನೀಡುವಂತದ್ದಾಗಿದೆ. ಕಲಾ ವಿದ್ಯಾರ್ಥಿಗಳು ಶಿಕ್ಷಕರೂ ಕೂಡ ಈ ನಿಟ್ಟಿನಲ್ಲಿ ಯೋಚನೆ ಮಾಡಿ ಪ್ರಸ್ತುತ ಪಠ್ಯವಿಷಯಗಳ ಜೊತೆಗೆ ಕಲಾ ಇತಿಹಾಸದ ಕೆಲವು ಪ್ರಶ್ನೆಗಳನ್ನು ಎದುರಿಸುವ ಮನೋಭಾವ ಬೆಳೆಸಿಕೊಳ್ಳಲು ಒಂದು ಸ್ಫೂರ್ತಿಯನ್ನು ನೀಡುವ ಲೇಖನವಾಗಿದೆ. ಇದರ ಮುಂದುವರಿದ ರೂಪವು ಮುಂದಿನ ನಾಲ್ಕು ಸಂಚಿಕೆಗಳಲ್ಲಿ ಕಾಣಬಹುದಾಗಿದೆ.

ದಿಲೀಪ ಕುಮಾರ್ ಕಾಳೆಯವರು ಬರೆದಿರು 'ಕಲಾಕೃತಿಯಲ್ಲಿ ಜೀವನ ಮೌಲ್ಯ ಹಾಗೂ ಸಮಾಜ ನಿಷ್ಠೆ' ಎಂಬ ಲೇಖನವಿದ್ದು, ಕಲೆಯ ಉದ್ದೇಶ ಏನೆಂಬುದನ್ನು ಈ ಹಿಂದೆ ಕೇಳಿ ಬಂದಿರುವ, 'ಕಲೆಗಾಗಿ ಕಲೆ: ಆನಂದವೇ ಕಲೆಯ ಮೌಲ್ಯ" ಎನ್ನುವ ಅಂಶಗಳ ಸೊತ್ತಾಗಿತ್ತು. ಆನಂದ ಎನ್ನುವುದು ತೀರ ವ್ಯಕ್ತಿಗತವಾಗಿ ಸಂಕುಚಿತ ಅರ್ಥವನ್ನು ಪಡೆದು ಸಾಮಾಜಿಕ ಹೊಣೆಗಾರಿಕೆಯಿಂದ ದೂರವಾಗಿ ಕೆಲವೇ ಜನರ ಸ್ವತ್ತಾದದ್ದೂ ಉಂಟು.

ಔದ್ಯೋಗಿಕ ಕ್ರಾಂತಿಯು ಅನಂತರ ಸಮಾಜದಲ್ಲಿನ ಎಲ್ಲ ವಲಯದಲ್ಲಿ ಹರಡಿ ಮೂಲಭೂತ ಬದಲಾವಣೆಯನ್ನು ರೂಪಿಸಿದವು. ಕಲೆ ಮತ್ತು ಸಾಹಿತ್ಯದ ಅನುಭವದ ಅಸ್ವಾದನೆಗಳು ಜನಸಾಮಾನ್ಯರಿಗೂ ಮುಟ್ಟುವಂತಾಗಲು ಸಾಂಸ್ಕೃತಿಕ ಕ್ರಾಂತಿಯಾಗಬೇಕೆಂದು ಲೆನಿನ್ ನಿರ್ಧರಿಸಿದನು. ಕಲೆ ಸಾಹಿತ್ಯ ಮೊದಲಾದ ಸಾಂಸ್ಕೃತಿಕ ಪರಿಕರಗಳೆಲ್ಲವೂ ಸಾಮಾಜಿಕ ಸಾಧ್ಯತೆಗಳ ಒಳಿತಿಗಾಗಿ ಎಂಬುದು ಮಾರ್ಕ್ಸ್‌ನ ಸೌಂದರ್ಯ ತತ್ವದ ಅಡಿಗಲ್ಲಾಗಿತ್ತು. ಆದರೆ ರಷ್ಯಾನ್ ಬರಹಗಾರರು, ಕಲಾವಿದರು, ಇದಕ್ಕೆ ತದ್ವಿರುದ್ಧವಾಗಿ ಸಮಾಜದ ದುಃಖವೇ ತಮ್ಮ ದುಃಕವೆಂದು ಸಾಮಾಜಿಕ ಹೊಣೆಗಾರಿಕೆಯನ್ನು ಎತ್ತಿ ಹಿಡಿದರು ಮತ್ತು ಒಂದು ಕಲಾಕೃತಿಯನ್ನು ಅದು ಪಡೆದಿರುವ ಸಾಮಾಜಿಕ ಮಹತ್ವದಿಂದಲೇ ಬೆಲೆ ಕಟ್ಟಬೇಕೆಂಬ ನಿಲುವನ್ನು ತಳೆದರು.

ಈ ನಿಟ್ಟಿನಲ್ಲಿ ಅನೇಕ ವಿಮರ್ಶಕರು ಚಿಂತಿಸಿ, ತಮ್ಮ ನಿಲುವುಗಳಿಂದ ಕಲೆಯ ವಿಶಿಷ್ಟ ಶಕ್ತಿಯನ್ನು ಎತ್ತಿ ತೋರಿಸಿದ್ದನ್ನು ಲೇಖಕರು ಪರಿಚಯಿಸುತ್ತಾ ಕಲೆ ಬುದ್ಧಿಯಿಂದ ಕಂಡದ್ದನ್ನು ಹೃದಯದಿಂದ ಪ್ರಭಾವಿಸುವಂತದ್ದು. ವಾಸ್ತವ ಜೀವನದಲ್ಲಿ ಬರುವ ಪ್ರತಿಮೆಗಳು, ಕಲಾವಿದರ ಪ್ರತಿಭೆಯಿಂದ ರೂಪಿತವಾದ ನೂತನ ಸತ್ಯಗಳಾಗಿವೆ ಮತ್ತು ಈ ನಿಟ್ಟಿನಲ್ಲಿ ಅನೇಕರ ಕಲಾಕೃತಿಗಳಿಂದ ಇಲ್ಲಿ ಸಮರ್ಥಿಸಲಾಗಿದೆ. ಹಾಗೆ ಕಲೆ ಯಾವಾಗಲೂ ಸತ್ಯದರ್ಶಕ ಪರಿಚಿತವಾದುದರಲ್ಲಿ ಅಪರಿಚಿತವನ್ನು ತೋರಿಸುತ್ತದೆ. ಅಪರಿಚಿತವನ್ನು ಪರಿಚಿತವನ್ನಾಗಿಸುತ್ತದೆ. ಆದ್ದರಿಂದ ಲೇಖಕರು ಒಟ್ಟಾಂಶವಾಗಿ ಕಲೆ ಕೇವಲ ತಯಾರಿಕೆಯಲ್ಲ, ಸತ್ಯದ ಸ್ಪಷ್ಟ್ಯಾತ್ಮಕವಾದ ನೂತನ ನಿರ್ಮಾಣ ''Art is the Creative reprodution of reality''ಎಂದು ಕರೆದಿರುವುದು.

ಇನ್ನೊಂದು ಲೇಖನದಲ್ಲಿ ಡಾ.ಶಿವಾನಂದ ಎಚ್.ಬಂಟನೂರರು ಬರೆದಿರುವ "ಆರಾಧನೆಯಲ್ಲಿ ಲೋಹಶಿಲ್ಪಗಳು" ಎಂಬುದರಲ್ಲಿ ನಮ್ಮ ಶಿಲ್ಪಕಲೆಗೆ ಸಾವಿರಾರು ವರ್ಷಗಳ ಇತಿಹಾಸವಿದ್ದು ತನ್ನ ಅಭಿವ್ಯಕ್ತಿಗೆ ಮರ, ಶಿಲೆ ಮತ್ತು ಲೋಹ ಮಾಧ್ಯಮಗಳನ್ನು ಬಳಸಿಕೊಂಡಿದ್ದನ್ನು ಇಲ್ಲಿ ಕಂಡುಬರುತ್ತದೆ. ವಿಶೇಷವಾಗಿ ಕರಕುಶಲಕಲೆಗಳಲ್ಲಿ ಈ ಲೋಹ ಮಾಧ್ಯಮದ ಶಿಲ್ಪಗಳು ಮೈ ತಳೆದ ರೀತಿಯಂತೂ ತೇಜೋಹಾರಿಯಾಗಿದ್ದು, ಹಲವು ನಂಬಿಕೆ, ಧರ್ಮ, ಆಚರಣೆಗಳ ಹಿನ್ನೆಲೆಯಲ್ಲಿ ಬೆಳೆದುಬಂದ ಶಿಲ್ಪಗಳ ಶೈಲಿ, ಮಾಧ್ಯಮ ಮತ್ತು ಆಕಾರಗಳಲ್ಲಿ ವೈವಿಧ್ಯತೆ ಕಾಣಬಹುದು.

ಈ ಹಿನ್ನೆಲೆಯಲ್ಲಿ ಲೇಖಕರು ಮೊದಲಿಗೆ ಲೋಹ ಶಿಲ್ಪ ರಚನೆ, ವಿಧಾನಗಳು ಮತ್ತು ಈ ಕ್ರಿಯೆಗಳಿಗೆ ಬಳಸುವ ವಿವಿಧ ಮಾಧ್ಯಮಗಳನ್ನು ಪರಿಚಯಿಸುತ್ತಾ ಅವು ದೈವೀ ಸೃಷ್ಟಿಯ ಆರಾಧನೆಯ ಮೂಲ ಉದ್ದೇಶದಿಂದ ರಚನೆಗೊಳ್ಳುತ್ತವೆ ಎನ್ನಲಾಗಿದೆ. ಮುಂದೆ ಪ್ರಾರಂಭದ ಇತಿಹಾಸವನ್ನು ಕುರಿತು ಸಂಕ್ಷಿಪ್ತ ವಿವರಣೆ ನೀಡಿ, ಅವುಗಳ ಸೃಷ್ಟಿ ಕಾರ್ಯದ ಪ್ರಾರಂಭದ ಹಂತವನ್ನು ತಿಳಿಸಿದ್ದು, ಪ್ರಾಚೀನ ಶಿಲ್ಪಗಳ ಸ್ವರೂಪ, ರಚನೆ ಸ್ಥಳನಾಮಗಳನ್ನು ಇಲ್ಲಿ ತಿಳಿಸಲಾಗಿದೆ. ಪ್ರಾರಂಭದಲ್ಲಿ ಹಳ್ಳೂರು, ತೆಕ್ಕಲಕೋಟೆಗಳಲ್ಲಿದ್ದು ನಂತರ ಪಿಕ್ಕಿಹಾಳ, ಮಸ್ಕಿ, ಸಂಗನಕಲ್ಲು,

ಸಂಡೂರು, ಹಟ್ಟಿ, ಕೋಲಾರಗಳಲ್ಲಿ ಲೋಹದ ಕುಲುಮೆಗಳು ಇದ್ದುವೆಂದು ಸಂಶೋಧನೆಯಿಂದ ತಿಳಿದುಬಂದಿದ್ದೆನ್ನಲಾಗಿದ್ದು, ಹಾಗೆ ನಮ್ಮ ಪ್ರಾಚೀನ ಗ್ರಂಥಗಳಲ್ಲಿಯೂ ಇವುಗಳು ಉಲ್ಲೇಖಗೊಂಡಿದ್ದವೆಂದು ಲೇಖಕರು ಸೂಚಿಸಿದ್ದಾರೆ. ಈ ಪರಂಪರೆಯು ಕರ್ನಾಟಕದಲ್ಲಿ ಶಾತವಾಹನರ ಕಾಲದಿಂದ ರಾಷ್ಟ್ರಕೂಟರು, ಗಂಗರು ಮತ್ತು ಹೊಯ್ಸಳರ ಕಾಲದಲ್ಲೂ ರೂಪುಗೊಂಡಿದ್ದವೆಂದು ತಿಳಿಸಲಾಗಿದೆ. ಆಯಾ ಕಾಲಮಾನಕ್ಕೆ ತಕ್ಕಂತೆ ರಾಜರು ಧರ್ಮ, ಮತಗಳ ಹಿನ್ನೆಲೆಯಲ್ಲಿ ಲೋಹಶಿಲ್ಪಗಳ ಪ್ರತಿಮೆಗಳನ್ನು, ಮೂರ್ತಿಗಳು, ವಿಗ್ರಹಗಳು ಮೂಡಿಬಂದಿರುವ ಉಲ್ಲೇಖಗಳನ್ನು ಇಲ್ಲಿ ನೀಡಿದ್ದಾರೆ.

ನಂತರ ಅವುಗಳ ಉಪಯೋಗಗಳನ್ನು ನಂಬಿಕೆ ಮಿಥನ್ ದೃಷ್ಟಿಯಿಂದ ನಿರ್ಮಿಸಲಾಗುತ್ತಿದ್ದು, ಶಿಲ್ಪವನ್ನು ಮರ ಅಥವಾ ಮಣ್ಣಿನಿಂದ ರಚಿಸಿದ್ದಾದರೆ. ಆಯಸ್ಸು, ಐಶ್ವರ್ಯ, ಬಲ ಜಯ ಒದಗಿಸುತ್ತದೆಂದು ಹಾಗೆ, ಮಣಿಗಳ ಮೂರ್ತಿ ಲೋಕಹಿತವನ್ನು, ಬಂಗಾರದ್ದು ಪುಷ್ಟಿಯನ್ನು, ಬೆಳ್ಳಿಯದು ಯಶಸ್ಸನ್ನು, ತಾಮ್ರದ್ದು ಸಂತಾನವನ್ನು ಅಲ್ಲದೆ ಮನೆಯಲ್ಲಿ ಲೋಹದ ಮೂರ್ತಿ, ದೇವಾಲಯದಲ್ಲಿ ಶಿಲಾಮೂರ್ತಿಯನ್ನು ಆರಾಧಿಸಬೇಕೆಂದು 'ಶುಕ್ರ ನೀತಿಸಾರ'ದಲ್ಲಿನ ಪರಿಚಯ ನೀಡಿದ್ದಾರೆ. ಹಾಗೆ ಈ ಲೋಹಶಿಲ್ಪ ನಿರ್ಮಾಣ ಮನರಂಜನೆಯಲ್ಲಿ ಭಕ್ತರ, ಭಾವುಕರ, ಭಾವನೆಗಳ ಜನ್ಮ ಜನ್ಮಾಂತರಗಳ ಪುಣ್ಯ ಪಾಪಗಳ ಫಲವೆನ್ನಲಾಗಿದೆ. ಇವುಗಳನ್ನು ಹರಕೆಯ ಶಿಲ್ಪಗಳೆನ್ನಲಾಗಿದೆ.

ಈ ಲೋಹಶಿಲ್ಪ ರಚನೆಯ ವಿಧಾನವನ್ನು ಇಲ್ಲಿ ಪ್ರಸ್ತುತಪಡಿಸಿದ್ದು, ವಿವಿಧ ಮಾಧ್ಯಮಗಳಲ್ಲಿ ರಚನೆ ಮಾಡುವ ಮೂರ್ತಿಗಳ ಅಂಗಾಂಗಳ ಪ್ರಮಾಣಬದ್ಧ ವಿಗ್ರಹಗಳು ಪೂಜೆಗೆ ಅರ್ಹವಾಗಿರುವುದರಿಂದ ಶಾಸ್ತ್ರೋತ್ರ್ಮಕವಾಗಿ ರೂಪಿಸಿದ್ದಾಗಿರುತ್ತವೆ. ಇವುಗಳಲ್ಲಿ ಎರಕ ಹೊಯ್ಯುವುದು ಮುಖ್ಯ ವಿಧಾನವೆಂದು ಸ್ಪಷ್ಟೀಕರಿಸಿದ್ದಾರೆ. ಮೇಣ, ಜೇಡಿಮಣ್ಣು ಇನ್ನಿತರ ಅಚ್ಚಿನ ಗೂಡುಗಳಿಂದ ಹಲವು ಮೂರ್ತಿಗಳನ್ನು ತೆಗೆಯಲಾಗುತ್ತಿದ್ದು, ಒಂದು ರೀತಿಯಲ್ಲಿ ಕಷ್ಟ ಸಾಧ್ಯವಾದ ಕೆಲಸವೇ ಸರಿ ಎಂದಿರುವರು.

ಪ್ರಸ್ತುತ ಸಂದರ್ಭದಲ್ಲಿ ಪಾಶ್ಚಾತ್ಯ ಕಲೆಯ ಪ್ರಭಾವದಿಂದ ಬೇರೆ ಬೇರೆ ಮಾಧ್ಯಮಗಳಲ್ಲೂ ಶಿಲ್ಪಗಳು ಆಧುನಿಕ ಶೈಲಿಯಲ್ಲಿ ರಚನೆಗೊಳ್ಳಲಾರಂಭಿಸಿದ್ದು, ಜೊತೆಗೆ ಸಾಂಪ್ರದಾಯಿಕ ಶಿಲ್ಪಗಳೂ ಸೃಷ್ಟಿಯಾಗುತ್ತಿವೆ. ಪ್ರಾಚೀನ ಶಿಲ್ಪ ಸಂಪ್ರದಾಯವನ್ನು ಮುಂದುವರಿಸಿಕೊಂಡು ಬರುತ್ತಿರುವುದು ನಿಜಕ್ಕೂ ಸಂತೋಷದ ವಿಷಯವಾಗಿದ್ದು, ಪ್ರಸ್ತುತ ಲೇಖನವು ಉತ್ತಮ ಅಂಶವನ್ನು ಒಳಗೊಂಡಿದೆ ಎನ್ನುವಲ್ಲಿ ಸಂಶಯವಿಲ್ಲ.

"ಆಧುನಿಕ ಕಲೆಯ ರೀತಿ ಬದ್ಧತೆಗಳ ಒಳನೋಟ" ಎಂಬ ಒಂದನೇ ಆಯಾಮದ ಲೇಖನವಾಗಿದ್ದು, ಆಧುನಿಕತೆ ಎಂದರೇನು? ಇತ್ತೀಚೆಗೆ ಈ ಶಬ್ದ ಹೆಚ್ಚಾಗಿ ಕೇಳಿಬರುತ್ತಿದ್ದು,

ಇದರ ರೂಪುರೇಷೆ, ಬೆಳವಣಿಗೆಯನ್ನು ಲೇಖಕರು ಇಲ್ಲಿ ಪ್ರಸ್ತಾಪಿಸಿದ್ದಾರೆ. ಕೆಲವು ಪ್ರಮುಖ ವಿಧಾನಗಳ ಮೂಲಕ ವಿಂಗಡನೆ ಮಾಡಿಕೊಂಡು ವಿವರಣೆ ನೀಡಲಾಗಿದೆ. ಕಲೆಯ ಪರಿವರ್ತನೆಯ ಹಾದಿಯಲ್ಲಿ ಭಾರತದಲ್ಲಿ ಬ್ರಿಟೀಷರ ಆಳ್ವಿಕೆಯಿಂದ, ನಮ್ಮಲ್ಲಿ ಬದಲಾವಣೆಗಳು ಕಂಡುಬಂದಿದ್ದು ಅನಿವಾರ್ಯತೆಯಾಗಿ ಅಲ್ಲದೆ ಸಹಜ ರೀತಿಯಲ್ಲಿಯೇ ನಮ್ಮ ಕಲಾವಿದರು ಪ್ರಭಾವಿತಗೊಂಡು ರಚನೆ ಕೈಗೊಂಡಿದ್ದನ್ನು ತಿಳಿಸುತ್ತಾ ಬೆಳವಣಿಗೆಯಲ್ಲಿ ಎರಡು ವಿಧಗಳಿವೆ. ಪ್ರಗತಿ ಮತ್ತು ಅಭ್ಯೂದಯವೆಂದು ಸ್ಪಷ್ಟೀಕರಿಸಲಾಗಿದೆ.

ಈ ಬೆಳವಣಿಗೆಯ ಹಾದಿಯಲ್ಲಿ ಅನೇಕ ಬದಲಾವನೆಗಳೂ ಕಾಣಬರುತ್ತವೆ. ೧೯ನೇ ಶತಮಾನದಲ್ಲಿ ಡಾರ್ವಿನ್‌ನ ವಿಕಾಸವಾದದ ಪರಿಣಾಮವಾಗಿ ಡೆವಲಪ್‌ಮೆಂಟ್ ಇಲ್ಲವೇ ಅಭಿವೃದ್ಧಿ ವಿಕೃತಗೊಳ್ಳತೊಡಗಿದೆ. ಈ ನಮ್ಮ ವಿಕಾಸದ ಹಾದಿಯೇ ಮೊದಲು ಈಗಲೂ ಭಿನ್ನವಾಗಿಯೇ ಇತ್ತು. ಬ್ರಿಟೀಷರ ಚಳುವಳಿಗಳಿಂದ ಪ್ರಾಪ್ತವಾಗಿರುವ ಜ್ಞಾನ, ತಂತ್ರಜ್ಞಾನ ಅಭಿವೃದ್ಧಿಯಿಂದಾಗಿ ಮುನ್ನಡೆಯುತ್ತಿದ್ದೇವೆ. ಈ ಆಧುನಿಕತೆಯಲ್ಲಿ ಸ್ವಂತಿಕೆ ಪಾತ್ರವು ಬಹುಮುಖ್ಯ ವಾಗಿದೆ. ಪಾಶ್ಚಾತ್ಯ ಪ್ರಭಾವಗಳಿಂದ ಮುಕ್ತವಾಗಬೇಕಾದದ್ದು ಅವಶ್ಯಕವಾಗಿದೆ. ನೆಹರು ಸ್ವಾತಂತ್ರ್ಯನಂತರ ಕಲೆಯ ಬೆಳವಣಿಗೆಗಾಗಿ ಪಂಚವಾರ್ಷಿಕ ಯೋಜನೆಯಲ್ಲಿ ಕೆಲವು ಯೋಜನೆಗಳು ರೂಪಿಸಿದರೂ ಅವರಿಗೆ ಮಾದರಿಯಾದದ್ದು ಪಾಶ್ಚಾತ್ಯ ರಾಷ್ಟ್ರಗಳೇ ವಿನಾಃ ನಮ್ಮ ಆಂತರಿಕ ವಿಕಾಸ ಸ್ವಭಾವವಲ್ಲ. ಆದರೆ ಹಾಗೆ ರೂಪಿಸಿದ ದಾರಿಗಳು ಈ ಹಿಂದಿನ ವಾದಗಳಂತೆ ಅಸ್ತಿತ್ವದಲ್ಲಿಲ್ಲ. ಹೀಗಾಗಿ ಇಂಥ ಹಿನ್ನೆಲೆಯಲ್ಲೇ ಈ ವಾತಾವರಣದ ನಡುವೆ ನಿಜವಾದ ವಿಕಾಸದ ಹಾದಿ ನಾವು ಕಂಡುಕೊಳ್ಳಬೇಕಿದೆ. ಕಲಾವಿದ ಸೌಜಾ ಹೇಳುವಂತೆ "ಮಾರ್ಡ್‌ನ್ ಆರ್ಟ್‌ ಪರಿಪೂರ್ಣ ಉದ್ದೇಶವೇ ಆಂಟಿ ಟ್ರಡೀಶನ್ ಎಂಬುದಷ್ಟೇ ನಮ್ಮ ನಿಲುವು ಆಗದೆ ಅದುವೇ ಮತ್ತೊಮ್ಮೆ ನಮ್ಮ ಆರಂಭವಾಗಬೇಕಾಗಿದೆ ಎಂಬ ಅಂಶಗಳನ್ನು ಪರಿಚಯಿಸುತ್ತಾ ಈ ನಿಟ್ಟಿನಲ್ಲಿ ಹೊಸ ಹಾದಿಯತ್ತ ಕೊಂಡೊಯ್ಯುವ ಉದ್ದೇಶವನ್ನೊಳಗೊಂಡಂತಿದೆ.

'ದಿ ಮ್ಯೂಸ್' ಎಂಬ ಶಶಿಧರರವರ ಲೇಖನವಿದ್ದು ತಮ್ಮ ಅನುಭವದ ರೂಪವಾದ ಬರಹಗಳನ್ನುಇಲ್ಲಿ ಕಟ್ಟಿಕೊಟ್ಟಿದ್ದಾರೆ. ಹಾಗೆ ಡಿ.ಎಸ್.ಜಾಗತಿರವರು ಬರೆದ 'ಗುಣಮುಖ'ಎಂಬ ಕಥೆಯನ್ನು ಇಲ್ಲಿ ಕಾಣಬಹುದಾಗಿದೆ. ಕೊನೆಯಲ್ಲಿ ದೃಶ್ಯಕಲೆಗೆ ಸಂಬಂಧಿಸಿದಂತ 'ಕಲೆ ಮತ್ತು ನಾನು' ಎಂಬ ಎಂ.ಟಿ.ಪಿ.ಆಚಾರ್ಯರವರ ಪುಸ್ತಕ ಪರಿಚಯವನ್ನು ಡಾ.ಅ.ಲ.ನರಸಿಂಹನ್‌ರವರು ಮಾಡಿಕೊಟ್ಟಿದ್ದಾರೆ. ಈ ರೀತಿಯಲ್ಲಿ ದೃಶ್ಯ ಕಲೆಯಲ್ಲಿನ ಶಿಲ್ಪ, ಚಿತ್ರ, ಅಭಿವ್ಯಕ್ತಿ ಕುರಿತಾಗಿರುವ ಆಧುನಿಕ ಸಂದರ್ಭದಲ್ಲಿ ಅವುಗಳ ಅಸ್ತಿತ್ವ, ನಾವು ಈ ಆಧುನಿಕ ಶೈಲಿಯಲ್ಲಿ ಎಷ್ಟು ಮುಳುಗಿ ಹೋಗಿದ್ದೇವೆ ಇದರಿಂದ ಹೊರಬಂದು ನಮ್ಮದೇ ಆದ ಸ್ವಂತಿಕೆಯನ್ನು ಕಾಣುವ ತುಡಿತಗಳು ಹುಟ್ಟಬೇಕೆನ್ನುವಂತಹ ವಿಷಯಗಳನ್ನು ಒಳಗೊಂಡಿರುವ ಈ ಸಂಚಿಕೆಯು ಕೆ.ವಿ.ಸುಬ್ರಹ್ಮಣ್ಯಂರವರ ಸಂಪಾದಕತ್ವದಲ್ಲಿ ಮೂಡಿಬಂದಿರುವುದು ನಿಜಕ್ಕೂ ಪ್ರಶಂಸನೀಯ ವಿಷಯವಾಗಿದೆ.

### ೪. ಕರ್ನಾಟಕ ಕಲಾವಾರ್ತೆ, ಸಂಚಿಕೆ ೪

ಕೆ.ವಿ.ಸುಬ್ರಹ್ಮಣ್ಯಂ ಅವರ ಸಂಪಾದಕತ್ವದಲ್ಲಿ ಬಂದಿರುವ ಅಕ್ಟೋಬರ್-ಡಿಸೆಂಬರ್ ೨೦೦೦ ರಲ್ಲಿನ ಕರ್ನಾಟಕ ಕಲಾವಾರ್ತೆಯ ೪ನೇ ಸಂಚಿಕೆ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟಗೊಂಡಿದ್ದಾಗಿದೆ. ಮುಖಪುಟ ವಿನ್ಯಾಸದಲ್ಲಿನ ಕಲಾಕೃತಿಯ ದಿ.ಜಿ.ಎಸ್.ಶೆಣೈರವರದಾಗಿದ್ದು ಮೂರು ಬಾರಿ ಪ್ರದರ್ಶನಕ್ಕೆ ಆಯ್ಕೆಗೊಂಡಿರುವ ಕೃತಿಯಾಗಿದೆ.

ಸಂಪಾಕದರ ಮೊದಲ ನುಡಿಗಳಲ್ಲಿ ನಮ್ಮೊಂದಿಗೆ ಹಂಚಿಕೊಂಡಿರುವ ಮಾತುಗಳಲ್ಲಿ ಬಹುಕಾಲ ಕಾಡುವ ಲಂಕೇಶ ನೆನಪು...ಎಂಬ ವಿಷಯವನ್ನೊಳಗೊಂಡಿದ್ದು, ಕನ್ನಡ ಸಂಸ್ಕೃತಿಗೆ ಹಲವು ಆಯಾಮ ತೀವ್ರತೆಗಳನ್ನು ತಂದಿತ್ತವರಲ್ಲಿ ಒಬ್ಬರಾಗಿರುವ ಲಂಕೇಶರ ನೆನಪು ಅವರು ನಮ್ಮಿಂದ ದೂರವಾದ ಒಂದು ವರ್ಷದ ನಂತರವೂ ಕಾಡುತ್ತಲೇ ಇದೆ. ಅವರ ಸಾಹಿತ್ಯದ ಸಮಕಾಲೀನ ಸ್ಪರ್ಶದ ತೀವ್ರಗ್ರಹಿಕೆಗಳಲ್ಲಿ ಹಾಗೂ ಸಮಕಾಲೀನ ದೃಶ್ಯಕಲೆಯ ಕಲಾವಿದರಾದ ವಾಸುದೇವ್, ಯೂಸೊಫ್ ಅರಕ್ಕಲ್ ಹಾಗೂ ಶಿವಪ್ರಸಾದ್‌ರವರ ಕಲಾಕೃತಿಗಳನ್ನು ಮೆಚ್ಚುತ್ತಿದ್ದ ರೀತಿಯಲ್ಲಿ ದೃಶ್ಯಕಲೆಯ ಕುರಿತು ಎಲ್ಲ ಕೃತಿಗಳನ್ನು ನೋಡುವ ಅನಿವಾರ್ಯತೆಯನ್ನು ಉಂಟುಮಾಡಿಕೊಳ್ಳದೆ ದೃಶ್ಯಕಲೆಯ ಅನುಭಗಳನ್ನು ಪೂರ್ಣವಾಗಿ ದಕ್ಕಿಸಿಕೊಳ್ಳುವ ಸಮಕಾಲೀನ ಕಲೆಯ ಸೃಷ್ಠಿ ಗ್ರಹಿಕೆಗಳ ದರ್ಶನ ಸಾಧಿಸದ, ಕಲೆಯ ಬಗ್ಗೆ, ಕಲಾವಿಮರ್ಶೆಯ ಬಗ್ಗೆ ಹೆಚ್ಚೆಚ್ಚು ಮಾತನಾಡುವ, ಆಗಾಗ ಬರೆಯುವ ಇತರ ಬರಹಗಾರರಿಗಿಂತ ವಿಭಿನ್ನ ನಡೆ-ನೋಟಗಳಿದ್ದು, ಹೆಬ್ಬಾರ್, ವಾಸುದೇವ, ಹಡಪದರ ನಂತರದ ಪೀಳಿಕೆಯ ಕಲೆ-ಕಲಾವಿದರ ಕುರಿತು ಅಷ್ಟೇನೂ ಪರಿಚಯವಿಲ್ಲದ ನಮ್ಮ ಬಹುತೇಕ ಬರಹಗಾರರ ನಡುವೆ ಲಂಕೇಶರ ದೃಷ್ಟಿ ಆಹ್ಲಾದಕರ ಅನುಭವಗಳನ್ನು ದೃಶ್ಯಕಲಾರಂಗಕ್ಕೆ ತಂದಿದ್ದಾರೆ. ಎಚ್.ಎ.ಅನಿಲ್‌ಕುಮಾರ್ ಮತ್ತು ಈ ಸಂಚಿಕೆಯ ಸಂಪಾದಕರು ಇವರ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿದ್ದು ಉಂಟು.

೧೯೯೦ರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ ಕೃತಿಯಾದ 'ವೆಂಕಟಪ್ಪ ಸಮಕಾಲೀನ ಪುನರಾವಲೋಕನ' ಬಗ್ಗೆ ಅವರು ವಿಮರ್ಶಿಸಿದ ರೀತಿ, ಕಲೆಯ ಕುರಿತ ಅವರ ಗ್ರಹಿಕೆಗಳಿಗೆ ಸಂಕ್ಷೇಪವನ್ನೊದಗಿಸಿವೆ. ಮುಖಪುಟ, ಹಿಂಪುಟಗಳಲ್ಲಿ ಯುಸೂಫ್ ಅರಕ್ಕಲ್‌ರಂಥ ಹಲವಾರು ಕೃತಿಗಳಲು ಕಾಣಿಸಿಕೊಂಡಿವೆ. ಈ ನಿಟ್ಟಿನಲ್ಲಿ ಕನ್ನಡ ಸಂಸ್ಕೃತಿಯ ದೇಶೀ ದರ್ಶನದ ಅವರ ಗ್ರಹಿಕೆ ಇಂದು ಅತ್ಯಂತ ಮಹತ್ವಪೂರ್ಣವಾಗಿ ಕಾಣುತ್ತಿದೆ ಎನ್ನುವ ಲೇಖಕರ ಮಾತುಗಳಲ್ಲಿ ಸಾಹಿತ್ಯವಲಯದಲ್ಲಿಯ ಕೃತಿಗಳಲ್ಲಿ ಕಲಾಕೃತಿಗಳನ್ನು ಬಳಸಿಕೊಳ್ಳುತ್ತಿರುವುದು ನಿಜಕ್ಕೂ ಸಂತೋಷದ ವಿಷಯವಾಗಿದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿಯಲ್ಲಿ 'ಕಳೆದ ಶತಮಾನದ ಕರ್ನಾಟಕ ಕಲೆ-ಸಿಂಹಾವಲೋಕನ' ಎಂಬ ವಿಚಾರ ಸಂಕಿರಣದಲ್ಲಿ ರಾಜ್ಯಾದ್ಯಂತ ಕಲಾವಿದರೂ, ಕಲಾಲೇಖಕರು, ಸಾಹಿತಿಗಳು

ಮತ್ತು ಆಸಕ್ತ ಪ್ರೇಕ್ಷಕರು ಪಾಲ್ಗೊಂಡಿದ್ದು 'ಕಲಾ ಇತಿಹಾಸ', 'ಕಲಾಶಿಕ್ಷಣ' ೧೯೫೦ರಿಂದ ೧೯೭೫ರ ವರೆಗೆ ನಡೆದು ಬಂದಿರುವುದು ಮತ್ತು ೧೯೭೫ರಿಂದ ೨೦೦೦ರ ವರೆಗಿನ ಕಲಾಶಿಕ್ಷಣ ಬೆಳೆದುಬಂದಿರುವ ರೀತಿ 'ಕಲಾಪುಸ್ತಕಗಳ ಶೀರ್ಷಿಕೆ', 'ಕಲಾವಿಮರ್ಶೆ', 'ಕಲೆಯಲ್ಲಿನ ಇತ್ತೀಚಿನ ಒಲವುಗಳು', 'ಮಾನಸಿಕ ಅವಸ್ಥೆ', 'ವಾಣಿಜ್ಯಕಲೆ' ಮತ್ತು ರಕ್ಷಾಪುಟಗಳು, 'ಸಂದರ್ಭ ಚಿತ್ರಗಳು', 'ಕಲಾಕೃತಿಗಳ ಮೇಲಾದ ಪಾಶ್ಚಿಮಾತ್ಯ ಪ್ರಭಾವ', 'ಇಲ್ಲಿನ ಪ್ರಭಾವ ಅನ್ಯರ ಮೇಲೆ', 'ವಸ್ತು ಮತ್ತು ತಾತ್ವಿಕ ನೆಲೆ', 'ವೆಂಕಟಪ್ಪನವರ ಕೃತಿಗಳ ವಿಮರ್ಶೆ, ಸಮೂಹ ಕಲಾ ಪ್ರದರ್ಶನ ಹಾಗೆ 'ವರ್ತಮಾನ ಮತ್ತು ಮುಂದೇನು?' ಎಂಬ ಸಮೂಹ ಚಿಂತನೆಗಳೂ ಈ ಸಮಾರಂಭದಲ್ಲಿ ಮೇಲಿನ ಎಲ್ಲ ವಿಷಯವಾಗಿ ಸಂಕ್ಷಿಪ್ತ ವಿವರಣೆಯನ್ನು ಶಶಿಧರ್ ಸಿ.ಎಸ್.ರವರು ಮಾಡಿಕೊಟ್ಟಿದ್ದಾರೆ.

ಶಿವಾನಂದ ಬಂಟನೂರರ 'ಸೃಜನಶೀಲ ದೃಷ್ಟಿ–ಸೃಷ್ಟಿ' ಎಂಬ ಶೀರ್ಷಿಕೆಯ ಲೇಖನದಲ್ಲಿ ಕಲಾವಿದನ ಕೃತಿ ನಿರ್ಮಾಣದಲ್ಲಿ ಮಾಧ್ಯಮಗಳ ಬಳಕೆ ಮಿತಿಗಳು, ಪ್ರಭಾವ, ಅನುಭವಗಳ ರಸಪಾಕವಾಗಿಸಿಕೊಂಡಿರುವ ಸೃಷ್ಟಿ ಮತ್ತು ಈ ಸೃಜನಶೀಲತೆಗೆ ನೆರವಾಗುವ ಅಂಶಗಳು, ಮಾನಸಿಕ ಸ್ಥಿತಿ, ಮಾಧ್ಯಮಗಳ ಶೋಧನೆ, ಅದು ಸಾಗಿ ಬಂದ ದಾರಿ ಯಾವುದು, ಯಾವ ಬಗೆಯದು, ಅದರ ಪರಂಪರೆ ಎಂತಹುದು, ವಸ್ತು ತಂತ್ರಗಳ ದೃಷ್ಟಿಯಲ್ಲಿ ಅದರ ಸ್ವರೂಪ ಮತ್ತು ಸಾಧ್ಯತೆಗಳೇನು? ಎಂಬುದನ್ನು ವಿವಿಧ ಅಂಗಗಳ ಮಗ್ಗುಲಗಳ ನೆಲೆಯಲ್ಲಿ ಅಭ್ಯಾಸಿಸುವುದು ಮೊದಲ ಕೆಲಸವಾಗಿದ್ದು, ಹೀಗಾಗಿ ಸೃಜನಶೀಲನಿ(Creater)ಗೆ ಪ್ರಯೋಗಶೀಲ (Experimental) ದೃಷ್ಟಿ ಧೋರಣೆಗಳು ಮುಖ್ಯವೆನ್ನುತ್ತಾರೆ.

ಪ್ರಸ್ತುತ ಸಂದರ್ಭದಲ್ಲಿಯೂ ಕಲಾವಿದರನೇಕರು ತಮ್ಮದೇ ಆದ ಮಾಧ್ಯಮ ಮಾರ್ಗವನ್ನು ಕಂಡುಕೊಳ್ಳುತ್ತಿದ್ದಾರೆ. ಸುತ್ತಣ ಸಮಾಜಕ್ಕೆ ಇಡಿಯಾಗಿ ಪ್ರತಿ ಸ್ಪರ್ಧಿಸುತ್ತಾ, ತಾನು ಹೇಳಬೇಕಾಗಿರು ವುದನ್ನು ಆಧುನಿಕ ಸನ್ನಿವೇಶಕ್ಕೆ ಸಮಗ್ರವಾಗಿ ಹೊಂದಿಕೆಯಾಗುವ ರೀತಿಯಲ್ಲಿ ಸೃಷ್ಟಿಸುತ್ತ ಸಾಗುತ್ತಲೇ ನಡೆದಿದ್ದಾನೆ. ಅದನ್ನು ಯಾರೂ ತಡೆಯಲಾರರು, ಅದು ತಡೆಯಲಾರರು ನಿರಂತರ ಪ್ರಕ್ರಿಯೆ ಎನ್ನಿಸಿಕೊಳ್ಳುತ್ತದೆ.

ಕೃಷ್ಣರವರ ಲೇಖನ "ಕಲಾ ಶಿಕ್ಷಣ ಬೇಕೇ?... ಬೇಡವೇ?... ಎಂಬ ವಿಷಯವಾಗಿ ಚರ್ಚಿಸಲಾಗಿದೆ. ಶೀರ್ಷಿಕೆ ಪ್ರಸ್ತುತವೋ ಅಲ್ಲವೋ ತಿಳಿಯುವುದಿಲ್ಲ. ಬೇಕೆಂದರೆ ಬೇಕು, ಬೇಡವೇಂದರೆ ಬೇಡ ಎಂಬ ಪ್ರಶ್ನೆಯನ್ನು ಮುಂದಿಡುತ್ತಾ ಬರುವ ಶೈಕ್ಷಣಿಕ ವರ್ಷಗಳನ್ನು ಮುಂದಾಲೋಚನೆಯಿಂದ ಗಮನಿಸಿ ಹೇಳುವುದಾದರೆ ಭಾರತದಲ್ಲಿ ಎಲ್ಲೂ ಇರಲಾರದಷ್ಟು ಕಲಾ ಶಾಲೆಗಳು ನಮ್ಮಲ್ಲಿದ್ದು ಪ್ರತಿಷ್ಠಿತ ಕಲಾಶಾಲೆಯಲ್ಲಿ ಕಲಿತರೆ ಮುಂದಿ ಸ್ಕಾಲರ್‌ಶಿಫ್... ವಿದೇಶಿಯಾತ್ರೆ ಪ್ರಸಿದ್ಧಿಗೆ ಬರಬಹುದೆಂಬುದು ವಿದ್ಯಾರ್ಥಿಗಳ ನಿರೀಕ್ಷೆಗಳಾಗಿವೆ. ಕಾರಣ ಈ ಮೊದಲು ೧೯೮೦ರಲ್ಲಿ ಅನೇಕ ಪ್ರಸಿದ್ಧ ಕಲಾವಿದರು ಬರೋಡಾ, ಶಾಂತಿನಿಕೇತನ ಕಲಾಶಾಲೆಯಲ್ಲಿ ಕಲಿತು ಬಂದು ಮುಂದಾಗಿದ್ದವರು. ಆದರೆ ಇಂದಿನ ವಿದ್ಯಾರ್ಥಿಗಳಿಗೆ ಹಿಂದೆ ಇದ್ದ ಕೆಲಸದ ಒತ್ತಡವೇ ಇಲ್ಲ.

ಮುಖ್ಯವಾಗಿ ಕಂಪ್ಯೂಟರ್ ಬಂದ ನಂತರ ಕಾಮನ್‌ಸೆನ್ಸ್ ಮತ್ತು ಸೃಜನಶೀಲತೆಯನ್ನು ಹೊಂದಿರುವ ವಿದ್ಯಾರ್ಥಿಯು ವಿರಳ. ಅಂತವರಿಗೆ ಕಲಾಶಿಕ್ಷಣದಿಂದ Work Load ಮಾಡಿಸುವುದು, ಶಿಕ್ಷಕರ ಪಾತ್ರ ಹಿರಿದಾಗಿದೆ. ಶಿಕ್ಷಕರು ವಿದ್ಯಾರ್ಥಿಗಳೊಂದಿಗೆ ಬೆರೆತು ತಮ್ಮ ವೈಯಕ್ತಿಕ ಅಭಿವ್ಯಕ್ತಿಗಳನ್ನು ಕಲಾಕೃತಿಗಳನ್ನು ಪ್ರತಿನಿತ್ಯ ನಡೆಸಬೇಕಾಗಿದೆ. ಕಲಾಕೃತಿಗಳಿಗಿಂತ ಕಲಾವಿದರೇ ಹೆಚ್ಚು ಮಾತನಾಡಲಾರಂಭಿಸಿದ್ದಾರೆ. ಇದೇ ರೀತಿ ಮುಂದುವರಿದರೆ ಶೀರ್ಷಿಕೆ ಹೇಳುವಂತೆ ನಿಲ್ಲುವ ಸ್ಥಿತಿಯನ್ನು ನಾವು ಎದುರಿಸಬೇಕಾಗುತ್ತದೆ. ಅಂದರೆ ಆಕಾಶದಲ್ಲಿ ಅರಮನೆ ಕಟ್ಟಲಾರಂಭಿಸಿದ್ದಾರೆ. ಫಲಿತಾಂಶ....ಎಂಬ ನಿರೀಕ್ಷೆಯನ್ನು ಲೇಖಕರು ನಮ್ಮ ಮುಂದಿಟ್ಟಿದ್ದಾರೆ.

"ಭಾರತೀಯ ಆಧುನಿಕ ಕಲೆಯ ಕೆಲವು ಆಯಾಮಗಳು" ಲೇಖನದಲ್ಲಿ ಹಿಂದೆ ಎರಡು ವರದಿಯನ್ನು ಹಿಂದಿನ ಸಂಚಿಕೆಯಲ್ಲಿ ಪರಿಚಯಿಸಿ ಮುಂದಿನ ರೂಪವನ್ನು ಡಿ.ಮಹೇಂದ್ರರವರ ಬರಹಗಳು ಇಲ್ಲಿ ಕಾಣಬಹುದಾಗಿದ್ದು, ಇಲ್ಲಿ ಆಧುನಿಕ ಕಲೆ ಮತ್ತು ಮುದ್ರಣ ತಂತ್ರಗಾರಿಕೆ ಎನ್ನುವ ವಿಷಯವಾಗಿ ಪ್ರಸ್ತಾಪಿಸಲಾಗಿದೆ.

ಭಾರತದಲ್ಲಿ ನೆಲೆಸಿದ ಪಾಶ್ಚಾತ್ಯರು ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ಮತ್ತು ಧಾರ್ಮಿಕ ಕ್ಷೇತ್ರಗಳ ಮೇಲೂ ಪ್ರಭಾವ ಬೀರಿದ್ದು, ಅದರಲ್ಲಿ ೧೮ನೆಯ ಶತಮಾನದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಮುದ್ರಣ ಕ್ಷೇತ್ರವು ಔದ್ಯೋಗಿಕವಾಗಿ ಬದಲಾಗತೊಡಗಿತ್ತು. ಕಲ್ಕತ್ತಾದಲ್ಲಿ ನೆಲೆ ನಿಂತ ವಿಲಿಯಂ ಡ್ಯಾನಿಯಲ್ ತನ್ನ ಪ್ರಿಂಟ್‌ಗಳನ್ನು ತಾನೇ ಮುದ್ರಿಸಿದ್ದು ಹೊಸದೊಂದು ತಿರುವು ಪಡೆದುಕೊಂಡಿದೆ.

ಇನ್ನು ಭಾರತೀಯರಿಗೆ ಈ ಮುದ್ರಣ ತಂತ್ರಜ್ಞಾನದ ತಿಳುವಳಿಕೆ ಸಿಂಧೂ ನಾಗರಿಕತೆಯ ಕಾಲದಿಂದಲೇ ಪರಿಚಯವೆಂದು ನಂತರ ಅವುಗಳ ಮೂಲ ಸ್ವರೂಪ, ವಿಧಿ ವಿಧಾನಗಳನ್ನು ಲೇಖಕರು ಇಲ್ಲಿ ಪರಿಚಯಿಸುತ್ತಾರೆ. ಮೊದಲು ಮುದ್ರೆ ಅಥವಾ ಅಚ್ಚುಗಳೆಂದು ಕರೆಯುತ್ತಿದ್ದು, ತಾಮ್ರದ ಪ್ಲೇಟುಗಳ ಮೇಲೆ ಎನ್‌ಗ್ರೇವ್ ಮಾಡಿದ ಮತ್ತು ಅವುಗಳನ್ನು ಭೂದಾನ ವ್ಯಾಪಾರಕ್ಕಾಗಿ ಬಳಸುವ ಹಾಗೂ ಧಾರ್ಮಿಕ ವಿಧಿ ವಿಧಾನದಲ್ಲಿನ ವಸ್ತುವಾಗುತ್ತಿತ್ತು. ಲೋಹದ ಪಾತ್ರೆಗಳ ಮೇಲೆ, ದಂತ, ಮರ, ಚಿಪ್ಪು, ಶಂಖ, ಮೊಳೆ ಇತ್ಯಾದಿ ವಸ್ತುಗಳ ಮೇಲೆ ಕೆತ್ತನೆಯ ಎನ್‌ಗ್ರೇವ್ ಮಾದರಿಯಲ್ಲಿ ಕಾಣಬರುತ್ತಿತ್ತು. ವೇದಗಳ ಕಾಲದಲ್ಲೂ ಧಾರ್ಮಿಕ ಆಚರಣೆಯಲ್ಲಿ ತಾಮ್ರದ ಶಿಲೆಗಳನ್ನು ಬಳಸಿಕೊಂಡಿದ್ದು ಕಾಗದದ ಮೇಲೆ ಒಂದು ಮಾಸ್ಟರ್ ಬ್ಲಾಕ್‌ಗಳ ಮೂಲಕ ನೂರಾರು ಪ್ರಿಂಟುಗಳನ್ನು ತೆಗೆಯುವ ಹೊಸ ವಿಧಾನ ನಮ್ಮ ಕಲಾವಿದರಿಗೆ ಸಹಜವಾಗಿ ಹೊಸತನವೆನಿಸಿತು. ೧೯೧೬ರಲ್ಲಿ ರಾಮಚಂದ್ರರಾಯ್ ಗ್ರಾಫಿಕ್ ರಚನೆಯನ್ನು ಮೊದಲು ರಚಿಸಿದ ಭಾರತೀಯನೆಂದು ಗುರುತಿಸುತ್ತಾರೆ. ನಂತರ ೧೮೨೧-೩೦ರ ನಡುವೆ ಜಾಲ್ಸ್ ಡಿ.ಓವಲಿಯು ಬಂಕಿಪುರದಲ್ಲಿ ತನ್ನ ರೇಖಾಚಿತ್ರಗಳ ಮುದ್ರಣಕ್ಕಾಗಿ ಲಿಥೋಗ್ರಾಫಿ ಪ್ರೆಸ್ ಸ್ಥಾಪಿಸಿದನು. ೧೮೭೦-೧೯೦೫ರಲ್ಲಿ ರಾಜಾ ರವಿವರ್ಮನು ತೀಕ್ಷ್ಣವಾದ ಮತ್ತು ದೃಢವಾದ

ಯುರೋಪಿಯನ್ ತಾಂತ್ರಿಕತೆಯೊಂದಿಗೆ ಹಾಗೂ ಭಾರತೀಯ ಧಾತುಗಳೊಂದಿಗೆ ಹೊರ ಹೊಮ್ಮಿದ ತನ್ನ ಹಲವು ವರ್ಣ ಚಿತ್ರಗಳನ್ನು ಯಥಾವತ್ತಾಗಿ ಓಲಿಯೋಗ್ರಾಫಿ ಮಾಧ್ಯಮದ ಮೂಲಕ ರಚಿಸಿದನು. ಇದಕ್ಕೆ ಕಾರಣ ಹಿಂದೂ ದೇವತೆಗಳನ್ನು ರಚನಾ ತಾಂತ್ರಿಕತೆಯನ್ನು ಕೂಲಂಕುಷವಾಗಿ ಅರಿತಿದ್ದರಿಂದ ದೈವತ್ವದ ಆಗಾಧತೆ ವೈಭವಗಳನ್ನು ತುಂಬಿಕೊಂಡಿದ್ದು ಸಾಂಪ್ರದಾಯಿಕವಾಗಿ ರಚಿಸುವ ಸಿದ್ಧ ನಿರೂಪಣಾ ಕಲಾಕೃತಿಗಳು ಹೆಚ್ಚು ಜನಪ್ರಿಯಗೊಂಡವು. ಇದರಿಂದ ಬೇಡಿಕೆಗಳ ತೀವ್ರತೆಯಿಂದಾಗಿ ಜರ್ಮನಿಯಿಂದ ಸ್ಟೀಮ್ ಪ್ರೆಸ್‌ಗಳನ್ನು ತರಿಸಿಕೊಂಡು, ತನ್ನ ಮೂಲಕೃತಿಗಳಿಂದ ಅನೇಕ ಪ್ರಿಂಟುಗಳನ್ನು ಹೊರತಂದನು. ಕೆಲವು ಕಾರಣಗಳಿಂದ ನಂತರ ಪ್ರೆಸ್‌ನ್ನು ಮುಚ್ಚಲಾಯಿತು. ಈ ಭಾವನಾತ್ಮಕ ಅಂಶವನ್ನಿಟ್ಟುಕೊಂಡು ಬ್ರಿಟೀಷರು ತಮ್ಮ ವಸ್ತುಗಳಿಗೆ ಬಳಸಿ ವ್ಯಾಪಾರ ಮಾಡಲಾರಂಭಿಸಿದರು. ಇಂದಿಗೂ ಈ ಕಾರ್ಯಗಳು ಆಯಾ ದೇಶಗಳಲ್ಲಿ ಮುಂದುವರೆಸಿಕೊಂಡಿದ್ದು ನಾವು ಕಾಣಬಹುದು. ಲೇಖಕರು ಈ ನಿಟ್ಟಿನಲ್ಲಿ ಭಾರತೀಯ ಕಲಾಪರಂಪರೆಯಲ್ಲಿ ಆದ ಬದಲಾವಣೆಯಲ್ಲಿ ಮುದ್ರಣಯಂತ್ರದ ಕಾರ್ಯ, ಅದರ ಹುಟ್ಟು ಬೆಳವಣಿಗೆ, ಸಮಕಾಲೀನ ಸಂದರ್ಭದ ಕಲಾವಿದರು ಬಳಸಿಕೊಂಡ ರೀತಿಗಳನ್ನು ಸಂಕ್ಷಿಪ್ತ ವಾಗಿ ವಿವರಿಸಿರುವರು.

ಆಯಾಮ ನಾಲ್ಕರಲ್ಲಿ ಆಧುನಿಕ ಕಲೆ ಸಂದರ್ಭದಲ್ಲಿ ಶಿಕ್ಷಣದ ಪ್ರಸ್ತುತತೆಗಳು ಎಂಬ ಲೇಖನದಲ್ಲಿ ಈ ಹಿಂದಿನ ೩ನೇ ಆಯಾಮದಲ್ಲಿ ಬ್ರಿಟೀಷರು ಶಿಕ್ಷಣ ನೀಡಲು ಅವಶ್ಯಕವಾದ ವಾತಾವರಣಗಳು ಹೇಗೆ ರೂಪಿತಗೊಂಡವು ಎಂಬುದನ್ನು ತಿಳಿಸಲಾಗಿದ್ದು, ಹಾಗೇ ಶಿಕ್ಷಣ ನೀಡುವ ಮೂಲಕ ಭಾರತೀಯರ ಮನೋಭಾವೆಗಳನ್ನು ಬದಲಿಸಿ ಅದರ ಲಾಭ ಪಡೆಯಬೇಕೆನ್ನುವ ಉದ್ದೇಶವಿದ್ದುದರ ಅಂಶಗಳನ್ನು ತಿಳಿಸಿದ್ದಾಗಿದೆ.

ಪ್ರಸ್ತುತ ಲೇಖನದಲ್ಲಿ ಬ್ರಿಟೀಷರು ಭಾರತೀಯರ ಮನೋಭಾವದೊಳಗೂ ಆಕ್ರಮಿಸಿ ಶಿಕ್ಷಣದಂಥ ಸಮರ್ಥ ಯೋಜನೆಗಳನ್ನು ಮುಂದಿಟ್ಟುಕೊಂಡು ಪಾಶ್ಚಾತ್ಯ ಕಲೆಯ ತಾಂತ್ರಿಕತೆಗಳನ್ನು ಭಾರತೀಯರಿಗೆ ಕಲಿಸಬೇಕೆಂದು ಅಕಾಡೆಮಿಕ್ ಕಲಾಶಾಲೆಗಳನ್ನು ಪ್ರಾರಂಭಿಸಿದರು. ಈ ಹಿನ್ನೆಲೆಯಲ್ಲಿ ಪ್ರಮುಖ ಮೊದಲ ನಾಲ್ಕು ಕಲಾಶಾಲೆಗಳಾದ ಕಲ್ಕತ್ತಾ, ಮುಂಬಯಿ, ಮದ್ರಾಸ್, ಲಾಹೋರ್‌ಗಳಲ್ಲಿ ಬ್ರಿಟೀಷ್ ಅಧಿಕಾರಿಗಳು ಮುಖ್ಯಸ್ಥರಾಗಿದ್ದರು, ಬ್ರಿಟೀಷ್ ಅಕಾಡೆಮಿಕ್ ಪದ್ಧತಿಗಳನ್ವಯ ಕಲಾಶಿಕ್ಷಣ ನೀಡತೊಡಗಿದರು. ಈ ಹಿನ್ನೆಲೆಯಲ್ಲಿ ಬೆಳೆದುಬಂದಿರುವ ಕಲಾಶಾಲೆಗಳಲ್ಲಿನ ಪಠ್ಯಕ್ರಮಗಳು ಇವುಗಳಿಗೆ ಪ್ರಭಾವಿತಗೊಂಡಿರುವ ಕಲಾವಿದರು ಇ.ವಿ.ಹ್ಯಾವೆಲ್‌ರು ಹೊಸ ಮಾರ್ಗದತ್ತ ನಮ್ಮ ಕಲಾವಿದರನ್ನು ಪರಿವರ್ತಿಸಿ ಭಾರತೀಯ ಕಲೆಯ ಪುನರುಜ್ಜೀವನ ಕಾರ್ಯಕ್ಕೆ ತಮ್ಮನ್ನು ತೊಡಗಿಸಿಕೊಂಡ ವೈಖರಿ, ಹಾಗೆ ಆನಂದಕೊಮಾರಸ್ವಾಮಿಯವರ ಲೇಖನಗಳು ಹಿಂದೂ ಧರ್ಮದ ವೈಶಿಷ್ಟ್ಯತೆ, ಕಲೆಯಲ್ಲಿನ ಅಂತಸತ್ವವನ್ನು ಪರಿಚಯ ಮಾಡಿಸುವಂತಿದ್ದವು. ಇನ್ನೊಬ್ಬ ಕಲಾ ಹೋರಾಟಗಾರರಾದ ಅಬನೀಂದ್ರನಾಥ ಠ್ಯಾಗೋರರು ಬಂಗಾಳ ಕಲಾಶೈಲಿಯನ್ನು ಹುಟ್ಟು

ಹಾಕಿ ತಮ್ಮ ಶಿಷ್ಯ ಬಳಗವನ್ನು ಬೆಳೆಸಿದರು. ಇವರೆಲ್ಲ ಭಾರತೀಯ ಕಲೆ ಎಂದು ಗುರುತಿಸಲ್ಪಡುವ ವಾಶ್ ಮೆಥಡ್ ಮತ್ತು ಟೆಂಪೆರಾ ವರ್ಣಗಳನ್ನು ಅನುಸರಿಸಿ ಚಿತ್ರ ರಚನೆಗೆ ಮುಂದಾದರು. ನಂತರ ಕ್ಷೀಣಿಸುತ್ತ ಬಂದು ೧೯೨೦ರ ವೇಳಗೆ ಕೊನೆಗೊಳ್ಳಲಾರಂಭಿಸಿತು. ಕಲಾವಿದರು ತಮ್ಮದೇ ಆದ ಶೈಲಿ, ತಂತ್ರಗಳನ್ನು ಬಳಸಿಕೊಂಡು ಚಿತ್ರರಚನೆಗೆ ಮುಂದಾದರು.

ಇನ್ನು ಸ್ವಾತಂತ್ರ್ಯಾನಂತರದ ಕಲಾಶಿಕ್ಷಣವನ್ನು ನಾವು ಗಮನಿಸಿದರೆ, ಬ್ರಿಟೀಷ್ ಅಕಾಡೆಮಿಕ್ ಶಿಕ್ಷಣ ಕ್ರಮಗಳನ್ನು ವಿರೋಧಿಸಿ ಹೊಸ ಸಿದ್ಧಾಂತವೊಂದನ್ನು ರೂಪಿಸ ಹೊರಟರು. ನಮ್ಮದೇ ಆದ ಸ್ವಂತಿಕೆಯನ್ನು ರೂಪಿಸಿಕೊಳ್ಳಲಾಗಲಿಲ್ಲ. ೧೯೬೪-೬೬ರಲ್ಲಿ ಕೋಠಾರಿ ಆಯೋಗವನ್ನು ರಚಿಸಿದಾಗ ಅದರ ವರದಿಯಲ್ಲಿ ಕಲಾಶಿಕ್ಷಣಕ್ಕಾಗಿ ಕೇವಲ ಒಂದು ಪ್ಯಾರವನ್ನು ಮಿಸಲಿಟ್ಟಿತ್ತು ಮತ್ತು ಆ ಪ್ಯಾರ್ಯಾದಲ್ಲಿ ಕೆಲಸಕ್ಕಾಗಿ ಮತ್ತೊಂದು ಸಮಿತಿಯನ್ನು ರಚಿಸಿಬೇಕೆಂಬ ಶಿಫಾರಸ್ಸು ಮಾಡಿತ್ತು. ಈ ನಿಟ್ಟಿನಲ್ಲಿ ಸಹಜ ಬೆಳವಣಿಗೆಯತ್ತ ಇತರ ಶಿಕ್ಷಣದ ಅಸಮಾನತ್ವದಲ್ಲಿ ಕಲೆ ಮುನ್ನಡೆಯುತ್ತಿರುವುದು ನಿಜಕ್ಕೂ ಶೋಚನಿಯ ವಿಷಯವಾಗಿದ್ದು, ಪ್ರಸ್ತುತ ಲೇಖನದಿಂದ ನಮ್ಮಲ್ಲಿ ಕಲಾಶಿಕ್ಷಣ ಬೆಳೆದು ಬಂದ ರೀತಿಯನ್ನು ಒಟ್ಟಾರೆಯಾಗಿ ಸಂಕ್ಷಿಪ್ತತೆ ಮತ್ತು ಭಾಗ ಭಾಗಳಾಗಿ ವಿಂಗಡಿಸಿಕೊಂಡು ಲೇಖಕರು ಸುಂದರವಾಗಿ ನಮ್ಮ ಮುಂದಿಟ್ಟಿದ್ದಾರೆ.

ಹಾಗೆ ಮುಂದುವರೆದು ಡಿ.ಎಸ್.ಚೌಗಲೆಯವರು ಬರೆದಿದ್ದ 'ಕರಗಿ ಹೋದ ಕೃತಿ ಮೌಲ್ಯ' ಎಂಬ ಕಥೆಯ ವಿವರಣೆಯನ್ನು ನೀಡಲಾಗಿದೆ. ವಿಶೇಷವಾಗಿ ಕಲಾವಾರ್ತೆಗೆಂದೆ ಶಶಿಧರ್‌ರವರಿಂದ ಬರೆಸಲಾದ ''An Unmatched momentum of Sensibilities with the market?'' ಎಂಬ ಇಂಗ್ಲೀಷ್ ಬರಹವಿದೆ. ಅಲ್ಲದೆ ಮತ್ತೊಂದು ಲೇಖನ Ramdas Adyanthaya ಅವರು ಬರೆದಿರುವ ''Bringing out creativity in children in the area of Fine Arts'' ಎಂಬ ವಿಷಯವಾಗಿದ್ದು ಇದೂ ಕೂಡ ಇಂಗ್ಲಿಷ್ ಬರಹವಾಗಿದೆ. ಹಾಗೆ **''Contemporary Art from Germany''** ಎಂಬ ಬರಹವು By Christoph Vitali ಅವರದಾಗಿದೆ.

ಕೆ.ವಿ.ಸುಬ್ರಹ್ಮಣ್ಯಂ ಅವರ ಸಂಪಾದಕತ್ವದಲ್ಲಿ ಬಂದಿರುವ ಕಲಾವಾರ್ತೆಯ ೪ನೇ ಸಂಚಿಕೆಯು ಕಲೆ, ಕಲಾಶಿಕ್ಷಣ ಜೊತೆಗೆ ಕಲಾ ಪ್ರದರ್ಶನಗಳೊಳಗೊಂಡಂತೆ ಇಂಗ್ಲಿಷ್ ಮತ್ತು ಕನ್ನಡದ ಬರವಣಿಗೆಗಳು ಮೂಡಿಬಂದಿದ್ದು ನಿಜಕ್ಕೂ ಪ್ರಶಂಸನೀಯ ಸಂಗತಿಯೆನ್ನಬಹುದು. ಏಕೆಂದರೆ ನಮ್ಮಲ್ಲಿ ಕಲಾ ಸಾಹಿತ್ಯಿಕ ಬರವಣಿಗೆಗಳೇ ಕಡಿಮೆ, ಅಂತದರಲ್ಲಿ ಇಂಗ್ಲೀಷನಲ್ಲಿಯೂ ಬರವಣಿಗೆಗಳನ್ನು ರೂಢಿಸಿಕೊಳ್ಳುತ್ತಿರುವ ಯುವ ಕಲಾವಿದರ ಅಭಿರುಚಿಗೆ ಪ್ರಸ್ತುತ ಈ ಸಂಚಿಕೆಯ ಸಂಪಾದಕರ ಪ್ರೋತ್ಸಾಹವನ್ನು ಮೆಚ್ಚುವಂತೆ ಮಾಡಿದೆ.

ಹೀಗೆ ಅವರ ಸಂಪಾದಕತ್ವದಲ್ಲಿ ಹಲವು ಸಂಚಿಕೆಗಳು ಹೊರಬಂದಿದ್ದು, ಲಭ್ಯವಾದಂತಹ ಕೆಲವು ಸಂಚಿಕೆಗಳನ್ನು ಇಲ್ಲಿ ಪರಿಚಯಿಸಲಾಗಿದೆ.

**ಟಿಪ್ಪಣಿಗಳು**

೧. ಸುಬ್ರಹ್ಮಣ್ಯಂ ಕೆ.ವಿ.(ಸಂ), **ಕರ್ನಾಟಕ ಕಲಾವಾರ್ತೆ, ಸಂಚಿಕೆ ೫೫,** ೧೯೯೯.

೨. ಸುಬ್ರಹ್ಮಣ್ಯಂ ಕೆ.ವಿ.(ಸಂ), **ಕರ್ನಾಟಕ ಕಲಾವಾರ್ತೆ, ಸಂಚಿಕೆ ೩೬,** ೧೯೯೯.

೩. ಸುಬ್ರಹ್ಮಣ್ಯಂ ಕೆ.ವಿ.(ಸಂ), **ಕರ್ನಾಟಕ ಕಲಾವಾರ್ತೆ, ಸಂಚಿಕೆ ೩,** ೨೦೦೦.

೪. ಸುಬ್ರಹ್ಮಣ್ಯಂ ಕೆ.ವಿ.(ಸಂ), **ಕರ್ನಾಟಕ ಕಲಾವಾರ್ತೆ, ಸಂಚಿಕೆ ೫೫,** ೨೦೦೦.

# ಅಧ್ಯಾಯ ನಾಲ್ಕು

# ವ್ಯಕ್ತಿ ಕೇಂದ್ರಿತ ದೃಶ್ಯಕಲಾ ಸಾಹಿತ್ಯ

೪.೧. ಕೆ.ವೆಂಕಟಪ್ಪ: ಪುನರಾವಲೋಕನ

೪.೨. ವಿಜಯ ಸಿಂಧೂರ

೪.೩. ಎಸ್.ಜಿ.ವಾಸುದೇವ

೪.೪. ಸಿ.ಪಿ.ರಾಜಾರಾಮ್

೪.೫. ಆರ್.ಎಸ್.ನಾಯ್ಡು

೪.೬. ಎನ್.ಹನುಮಯ್ಯ

೪.೭. ವೆಂಕಟಾಚಲಪತಿ

## ಅಧ್ಯಾಯ ನಾಲ್ಕು

# ವ್ಯಕ್ತಿ ಕೇಂದ್ರಿತ ದೃಶ್ಯಕಲಾ ಸಾಹಿತ್ಯ

ಮಾತು ಬರಹಕ್ಕಿಳಿದಾಗ ಮನುಷ್ಯ ತನ್ನ ಬಾಳ್ಗತೆಗಳ ಸುಖ-ದುಃಖ, ನೋವು-ನಲಿವು, ಇಷ್ಟಾನಿಷ್ಟಗಳನ್ನು ತೋಡಿಕೊಳ್ಳುವ ಕಲ್ಪನಾಂಶಗಳು ಕಡಿಮೆಯಾಗಿ ಲಿಪಿಯ ಮೂಲಕ ಬರಹಗಳಲ್ಲಿ ಹಿಡಿದಿಡುವ ಕಾರ್ಯಕ್ಕಿಳಿದನು. ಅವು ಕೇವಲ ಐತಿಹ್ಯಗಳಾಗಿ ಉಳಿಯದೇ ಚರಿತ್ರೆಗಳು ಆತ್ಮಚರಿತ್ರೆಗಳಾಗುತ್ತವೆ. ಒಂದು ವಸ್ತುವಿನ ಇಡೀ ಬದುಕಿನ ವಿವರವನ್ನು ತಿಳಿಸತಕ್ಕದ್ದೇ ಚರಿತ್ರೆ. ಹಾಗೆ ಒಬ್ಬ ವ್ಯಕ್ತಿಯ ನಡತೆಯೇ ಅವನ ಚರಿತ್ರೆಯಾಗುತ್ತದೆ. ಆದರೆ, ಎಲ್ಲ ವ್ಯಕ್ತಿಗಳ ಬದುಕು ಚರಿತ್ರೆಯ ವಸ್ತುವಾಗಲಾರದು. ಯಾವ ವ್ಯಕ್ತಿ ತನ್ನ ತ್ಯಾಗ ತಪಸ್ಸುಗಳಿಂದ ಬುದ್ಧಿ ಸಾಹಸಗಳಿಂದ ಶಿಖರ ಸ್ಥಾನಕ್ಕೇರಿ ಸಾಮಾನ್ಯ ವ್ಯಕ್ತಿಗಳಿಂದ ಪ್ರತ್ಯೇಕವೆಂಬಂತೆ ನಿಂತು ಗೌರವಭಾಜನನಾಗುತ್ತಾನೆಯೋ ಅಂಥ ವ್ಯಕ್ತಿಯ ಬದುಕು ಕಥನಯೋಗ್ಯವಾಗುತ್ತದೆ. ಈ ಹಿನ್ನೆಲೆಯಲ್ಲಿ ದೃಶ್ಯ ಕಲೆಯ ಇತಿಹಾಸದಲ್ಲಿ ಇತ್ತೀಚೆಗೆ ಅನೇಕ ಹಿರಿಯ ಮತ್ತು ಪ್ರತಿಭಾವಂತ ಕಲಾವಿದರನ್ನು ಕುರಿತು, ಅವರ ಜೀವನ ಕಲೆ ಮತ್ತು ಸಾಧನೆಗಳನ್ನು ಪರಿಚಯಿಸುವ ನಿಟ್ಟಿನಲ್ಲಿ ಕನ್ನಡದಲ್ಲಿ ಅನೇಕ ಪುಸ್ತಕಗಳು ಹೊರಬಂದಿದ್ದು, ಹಲವಾರು ಕಲಾ ಲೇಖಕರಿಂದ ಈ ರೀತಿಯ ಕೃತಿಗಳು ಪ್ರಕಟಗೊಂಡಿವೆ. ಅವರಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಅವರು ಹಲವು ಕಲಾವಿದರ ಕುರಿತು ಪುಸ್ತಕಗಳನ್ನು ಬರೆದಿರುವರು. ಅವುಗಳನ್ನು ಪ್ರಸ್ತುತ ಅಧ್ಯಯನದ ಅನುಕೂಲಕ್ಕಾಗಿ ವ್ಯಕ್ತಿಕೇಂದ್ರಿತ ದೃಶ್ಯಕಲಾ ಸಾಹಿತ್ಯ ಎಂದು ಕರೆದು ಅಧ್ಯಯನ ಮಾಡಲಾಗಿದೆ.

### ೪.೧. ವೆಂಕಟಪ್ಪ: ಸಮಕಾಲೀನ ಪುನರಾವಲೋಕನ

ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ೧೯೯೦ರಲ್ಲಿ ಪ್ರಕಟವಾದ 'ವೆಂಕಟಪ್ಪ ಸಮಕಾಲೀನ ಪುನರಾವಲೋನ' ಎಂಬ ಕೃತಿಯು ೨೦೦೮ರಲ್ಲಿ ಎರಡನೆಯ ಮುದ್ರಣಗೊಂಡಿದ್ದು, ಕೃತಿಯ ಬರವಣಿಗೆಯಲ್ಲಿನ ಅಮೂಲ್ಯತ್ವವನ್ನು ತೋರ್ಪಡಿಸುತ್ತದೆ. ಒಟ್ಟು ೧೪೬ ಪುಟಗಳನ್ನು ಒಳಗೊಂಡಿದೆ. ವೆಂಕಟಪ್ಪನವರ ಕುರಿತಂತೆ ವ್ಯಕ್ತಿತ್ವ, ಕಲಾ ಅಭಿವ್ಯಕ್ತಿ, ಕಲಾಕೃತಿಯ ರಚನೆಯಲ್ಲಿ

ತಮ್ಮನ್ನು ತೊಡಗಿಸಿಕೊಂಡ ವೈಖರಿ, ಸ್ವಭಾವದ ಪರಿಚಯ ಮಾಡಿಕೊಡಲಾಗಿದೆ. ವೆಂಕಟಪ್ಪನವರ ದಿನಚರಿಯ ಪುಟಗಳಿಂದ ನೇರವಾಗಿ ತೆಗೆದುಕೊಂಡ ಅಭಿವ್ಯಕ್ತಿಗಳು, ಅವರಿಗೆ ಬರೆದ ಪತ್ರಗಳು, ಅವರು ಬೇರೆಯವರಿಗೆ ಬರೆದಿರುವಂತ ಪತ್ರಗಳು 'ಪುನರುಜ್ಜೀವನ'ದ ಪುನರಾವಲೋಕನಕ್ಕೆ ಸಂಬಂಧಿಸಿದಂತ ಕಲಾಕೃತಿಗಳ ವಿವರಣೆ, ಪುನರುಜ್ಜೀವನ ಕಲೆಗಾಗಿ ಸ್ಪಂದಿಸಿದಂತ ಕಲಾವಿದರ ತಂತ್ರ ಶೈಲಿ, ನಿರೂಪಣೆಗಳನ್ನು ಹಂತ ಹಂತವಾಗಿ ಕಟ್ಟಿಕೊಟ್ಟಿದ್ದಾರೆ. ಅಲ್ಲದೆ ವೆಂಕಟಪ್ಪನವರಲ್ಲಿ ಸಂಗ್ರಹಗೊಂಡ ಕೆಲವು ಪ್ರಮುಖ ಕೃತಿಗಳ ಮಾಹಿತಿಯನ್ನು ನೀಡಲಾಗಿದೆ.

ಈ ಕೃತಿಯಲ್ಲಿ ಕೆ.ವೆಂಕಟಪ್ಪ: ಒಂದು ನೋಟ, ದಿನಚರಿಯ ಪುಟಗಳಿಂದ, ಪತ್ರಗಳು, ಪುನರುಜ್ಜೀವನದ ಪುನರಾವಲೋಕನ, ಕೆ.ವಿ.ಸಂಗ್ರಹದಲ್ಲಿದ್ದ ಪ್ರಮುಖ ಗ್ರಂಥಗಳು ಎಂದು ವಿಭಾಗಿಸಿಕೊಂಡು ಕಲಾವಿದ ಕೆ.ವೆಂಕಟಪ್ಪನವರ ಜೀವನ ಕಲಾಸಾಧನೆಯನ್ನು ಸಮಗ್ರವಾಗಿ ಪರಿಚಯಿಸಲು ಮುಂದಾಗಿದ್ದಾರೆ. ಕೆ.ವೆಂಕಟಪ್ಪ: ಒಂದು ಹಿನ್ನೋಟದಲ್ಲಿ ವೆಂಕಟಪ್ಪನವರ ಹುಟ್ಟು, ವಂಶಪಾರಂಪರಿಕತೆಯನ್ನು ಸಂಕ್ಷಿಪ್ತ ರೀತಿಯಾಗಿ ಹೇಳಿಕೊಡಲಾಗಿದೆ. ಕಲಾಭ್ಯಾಸವನ್ನು ಶ್ರೀ ಚಾಮರಾಜೇಂದ್ರ ಚಿತ್ರ, ಕರಕುಶಲ ಶಾಲೆಯಲ್ಲಿ ಆರ್.ಟಿ.ರಾಮಕೃಷ್ಣಪ್ಪನ್‌ವರಲ್ಲಿ, ಪಾಶ್ಚಾತ್ಯ ಶೈಲಿಯ ಶಿಕ್ಷಣ ಪಡೆದುಕೊಂಡರು ಹಾಗೂ ತಮ್ಮ ತಂದೆಯವರೇ ಮೈಸೂರಿನ ಅರಮನೆಯ ಚಿತ್ರಕಲಾವಿದರಾಗಿದ್ದರಿಂದ ಮೊದಲ ಕಲಾಗುರುಗಳು ಇವರೇ ಆಗಿದ್ದರು. ನಂತರ ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೋತ್ಸಾಹದಿಂದ ಕಲ್ಕತ್ತಾ ಕಲಾಶಾಲೆಗೆ ಸೇರಿದರು. ಖ್ಯಾತ ಪರ್ಶಿ ಬ್ರೌನ್ ಮತ್ತು ಅವನೀಂದ್ರನಾಥರ ಮಾರ್ಗದರ್ಶನದಲ್ಲಿ ಕಲಿತು ಆ ಸಂದರ್ಭದಲ್ಲಿಯೇ ಲೇಡಿ ಹೇರಿಂಗ್ ಹ್ಯಾಮ್‌ರವರಿಂದ ಅಜಂತಾ ಗುಹೆಗಳಲ್ಲಿನ ಭಿತ್ತಿ ಚಿತ್ರಗಳನ್ನು ನಕಲು ಮಾಡುವ ಅವಕಾಶವೂ ಇವರಿಗೆ ಲಭಿಸಿತ್ತು. ನಂತರ ಮೈಸೂರಿಗೆ ಮರಳಿ ಊಟಿ ಹಾಗೂ ಕೊಡೈಕನಾಲ್ ಭೂ ದೃಶ್ಯಗಳನ್ನು ಅನುಭವಿಸಿ ಚಿತ್ರ ರಚನೆಗೆ ತೊಡಗಿದ್ದು, ವೀಣೆಯ ವಾದ್ಯವನ್ನು ಅಂಟಿಸಿಕೊಂಡರು.

ಜಿ.ವೆಂಕಟಾಚಲಂ ಅವರು ವೆಂಕಟಪ್ಪನವರ ಸ್ವಭಾವವನ್ನು ಕುರಿತಾಗಿ ಈ ರೀತಿಯಲ್ಲಿ ಉಲ್ಲೇಖಿಸಿದ್ದಾರೆ. "ಅವರು ಏಕಂತವಾಸಿ ನಿಜ, ಆದರೆ ಅವರಿಗೆ ಸ್ನೇಹಿತರು, ಕಲಾಪ್ರೇಮಿಗಳು ಬೇಕಿದ್ದರು. ನಿರರ್ಥಕ ಸಂಭಾಷಣೆ, ಹರಟೆಯಲ್ಲಿ ಕಾಲಹರಣ ಮಾಡುವವರನ್ನು ಹತ್ತಿರ ಸೇರಿಸುತ್ತಿರಲಿಲ್ಲವೆಂದು, ಮಂತ್ರಿಗಳು, ಮಹಾರಾಜರು ಅಥವಾ ಸಾರ್ವಜನಿಕರು ಯಾರೇ ಆಗಲಿ ಕಲಾಕೃತಿಗಳನ್ನು ನಿಜವಾದ ಆಸಕ್ತಿಯಿಂದ ನೋಡಲು ಬಯಸಿದರೆ ಅವರಿಗೆ ತಾವೇ ವಿವರವಾಗಿ ತೋರಿಸುತ್ತಿದ್ದರು. ನಿರ್ದಿಷ್ಟ ವೇಳೆಗೆ ಹೋಗಬೇಕಿತ್ತು"ಎಂಬ ಇವರ ಮಾತುಗಳಲ್ಲಿ ವೆಂಕಟಪ್ಪನವರ ಕ್ರಿಯಾಶೀಲ ವ್ಯಕ್ತಿತ್ವವನ್ನು ತೋರಿಸುವಂತಿದೆ.

ಮುಂದೆ ಕಲಾಕೃತಿಯ ರಚನೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದನ್ನು ಕೆಲವು ಸಂದರ್ಭಗಳನ್ನಿಟ್ಟುಕೊಂಡು ವಿವರಣೆ ನೀಡಲಾಗಿದೆ. ಶಿಲ್ಪರಚನೆಯ ಅಭಿವ್ಯಕ್ತಿಗಾಗಿ ವಿದೇಶವೊಂದಕ್ಕೆ ಹೋಗಿ ಅಲ್ಲಿಂದ ಅತೃಪ್ತರಾಗಿ ಬಂದು, ಮನರಂಜನೆಗಾಗಿ ಚಲನಚಿತ್ರ ನೋಡುವ ಹುಚ್ಚನ್ನು

ಬಳಸಿಕೊಂಡಿದ್ದು ವಿಶೇಷವೇ ಸರಿ. ಅವರು ಕೊನೆಯಲ್ಲಿ ಕೆಲವು ಅಹಿತ ಘಟನೆಗಳಿಂದಾಗಿ, ದೃಶ್ಯ ಕಲೆಯ ರಾಜಕಾರಣಕ್ಕೆ ಹೊಂದಿಕೊಳ್ಳದೆ ತಾವೇ ತಾವಾಗಿ ದೂರ ಉಳಿದುಕೊಂಡು ಮೈಸೂರಿನಿಂದ ಬೆಂಗಳೂರಿಗೆ ಬಂದು ಶಾಶ್ವತ ನೆಲೆನಿಂತು, ಎಲ್ಲಿಯೂ ಪರಿಚಿತರಾಗಿ ಕಾಣಿಸಿಕೊಳ್ಳದೆ ಇದ್ದದ್ದು ನಿಗೂಢ ಸಂದರ್ಭವೆಂಬ ಲೇಖಕರು ಹೇಳಿರುವ ಮಾತು ಚಿಂತನೆಗೆ ಒಳಪಡಿಸುವಂತಿದೆ. ಆದರೆ ಒಟ್ಟಾರೆ ಅವರ ಬದುಕು ಮತ್ತು ಕಲೆಯಲ್ಲಿ ಒಂದು ವಿಶಿಷ್ಟ ರೀತಿಯ ನಿರೂಪಣೆಯನ್ನು ಪಡೆದುಕೊಂಡವರು. ಕಲಾವಿದ ವೆಂಕಟಪ್ಪನವರು ರಚಿಸಿದ ವೈವಿಧ್ಯಮಯ ಭೂದೃಶ್ಯ, ಕಲಾಕೃತಿಗಳು, ಉಬ್ಬು ಶಿಲ್ಪಗಳು ಈಗಲೂ ನಮ್ಮ ಮುಂದೆ ಅದ್ಭುತ ಪ್ರಪಂಚವನ್ನು ಮುಂದಿಡುವಂತಿವೆ ಎಂಬುದು ಸತ್ಯ.

ನಂತರ ವೆಂಕಟಪ್ಪನವರು ಬರೆದಿರುವ Auto-biography ಯಿಂದಾಯ್ದ ಬರಹಗಳನ್ನು ಲೇಖಕರು ನೇರವಾಗಿ ಎತ್ತಿಕೊಂಡು ಅವುಗಳಲ್ಲಿನ ನಿರೂಪಣಾ ಗೊಂದಲದ ಅನುಭವ ನಮಗೆ ನೀಡಿದ ಹಾಗೆ ಪ್ರತಿ ದಿನದಿನದ ಅನುಭವಗಳನ್ನು ಯಥಾರೀತಿಯಲ್ಲಿ ಕಟ್ಟಿಕೊಡಲಾಗಿದೆ. ಈ ಒಂದು ಅಧ್ಯಯನದಿಂದ ಓದುಗರಿಗೆ ವೆಂಕಟಪ್ಪನವರ ಜೀವನವನ್ನು ಬರಹಕ್ಕೆ ತಕ್ಕಂತೆ ಅವರ ಬದುಕಿನ ಚಿತ್ರಗಳು ಕಣ್ಣಮುಂದೆ ಹಾದು ಹೋಗುವಂತೆ ಮಾಡುತ್ತವೆ. ಅವರ ಬರವಣಿಗೆಯಲ್ಲಿ ಕೆಲವು ತೆಲುಗು ಮಿಶ್ರಿತ ಕನ್ನಡದಲ್ಲಿವೆ. ಹಾಗೆ ಕೆಲವು English ಬರಹಗಳನ್ನು ಒಳಗೊಂಡಿದ್ದು. ಲೇಖಕರು ಅವುಗಳನ್ನು ಅನುವಾದಿಸಿ ಮೂಲ ಸತ್ವವು ಕಳೆದು ಹೋಗದಂತೆ ಎಚ್ಚರವಹಿಸಿದ್ದಾರೆ. ಮುಂದಿನ ಶೀರ್ಷಿಕೆಯಡಿಯಲ್ಲಿ ಪತ್ರಗಳು ಎಂಬುದಾಗಿದ್ದು ಅದರಲ್ಲಿ ಕಲಾವಿದ ವೆಂಕಟಪ್ಪನವರು ಇತರರಿಗೆ ಬರೆದಿರುವ ಮತ್ತು ಬೇರೆಯವರು ಇವರಿಗೆ ಬರೆದಂತಹ ಪತ್ರಗಳ ವಿವರಣೆಯನ್ನು ಸ್ಪಷ್ಟೀಕರಿಸುತ್ತಾ ಇನ್ನು ಕೆಲವು ಅವರ ಹಸ್ತ ಮುದ್ರಿಕೆ ರೂಪದಲ್ಲಿಯೇ ಯಥಾವತ್ತಾಗಿ ಅಚ್ಚು ಮಾಡಿ ಪ್ರಕಟಿಸಿದ್ದಾರೆ. ಅವುಗಳಲ್ಲಿ ಮುಖ್ಯವಾಗಿ ಅವನೀಂದ್ರನಾಥ ಠಾಗೋರ್, ಪರ್ಶಿಬ್ರೌನ್‌ರು ಇವರಿಗೆ ಬರೆದಿದು, ಇವರು ಡೆಕ್ಕನ್ ಹೆರಾಲ್ಡ ಪತ್ರಿಕೆಗೆ, ಸೆಂಟ್ರಲ್ ಕಾಲೇಜಿನ ಕರ್ನಾಟಕ ಸಂಘದ ಕಾರ್ಯದರ್ಶಿಗಳಿಗೆ, ಕಾರಂತರಿಗೆ ಬರೆದವುಗಳಾಗಿದ್ದು, ಕೆಲವು ಸಂಗೀತಕ್ಕೆ ಸಂಬಂಧಿಸಿದ ದಾಖಲೆಗಲನ್ನು ಇಲ್ಲಿ ದಾಖಲಿಸಿದ್ದಾರೆ.

ಹಾಗೆಯೇ 'ಪುನರುಜ್ಜೀವನ'ದ ಪುನರಾವಲೋಕನ' ಎಂಬ ಶೀರ್ಷಿಕೆಯಡಿಯಲ್ಲಿ ವೆಂಕಟಪ್ಪನವರು ಈ ಹಿನ್ನೆಲೆಯಲ್ಲಿ ರಚಿಸಿದ ಪ್ರಕೃತಿಯ ನೈಜ ಸೃಷ್ಟಿಯಲ್ಲಿನ ಜೀವಂತಿಕೆ, ಭಾರತೀಯ ಮೂಲದ ಭಾವಚಿತ್ರಗಳನ್ನು, ಭೂದೃಶ್ಯಗಳಲ್ಲಿ ಕಾಣುತ್ತೇವೆ. ಬಂಗಾಳ ಪುನರುಜ್ಜೀವನ ಕಲಾಪಂಥಕ್ಕೆ ಸ್ಫೂರ್ತಿ ನೀಡಿದ ಅವನೀಂದ್ರನಾಥ ಟ್ಯಾಗೋರ್, ಇ.ಬಿ.ಹ್ಯಾವೆಲ್, ಆನಂದಕುಮಾರಸ್ವಾಮಿಯವರ ಕಟ್ಟುಪಾಡುಗಳು, ಅಮೃತಾ ಶೇರ್‌ಗಿಲ್ ತನ್ನ ಕಲಾಕೃತಿಗಳಲ್ಲಿ ಆಗಿನ ಸಮಕಾಲೀನ ಸ್ಪರ್ಶವನ್ನು ನೀಡಿ ಸ್ಪಂದಿಸಿದ ರೀತಿಗಳನ್ನು ಲೇಖಕರು ಒಂದೊಂದು

ಹಂತಹಂತವಾಗಿ ವಿವರಣೆಯನ್ನು ನೀಡಲಾಗಿದ್ದು, ಪುನರುಜ್ಜೀವನದ ಆಂದೋಲನ ಕುರಿತಾಗಿ ನಡೆದು ಬಂದ ದಾರಿಯನ್ನು ಸ್ಪಷ್ಟವಾಗಿ ಕಟ್ಟಿಕೊಡಲು ಪ್ರಯತ್ನಿಸಿದ್ದಾರೆ.

ಲೇಖಕರು ಕೊನೆಯಲ್ಲಿ ವೆಂಕಟಪ್ಪನವರ ಸಾಹಿತ್ಯ ಪ್ರೀತಿಯನ್ನು ಪರಿಚಯಿಸಿ ಅವರಲ್ಲಿರುವ ಗ್ರಂಥ ಭಂಡಾರದಲ್ಲಿನ ಪುಸ್ತಕಗಳ ಪಟ್ಟಿಯನ್ನು ನೀಡಿರುವರು.

ಒಟ್ಟಾರೆ ಈ ಕೃತಿಯು ಒಂದು ಅಪರೂಪದ ಕೃತಿಯಾಗಿದ್ದು, ಈ ಸ್ವರೂಪದಲ್ಲಿ ಈವರೆಗೂ ಕಲಾಕ್ಷೇತ್ರದಲ್ಲಿ ಪ್ರಕಟಗಣೆಗಳು ಬಂದಿರುವುದಿಲ್ಲ ಎನ್ನಬಹುದು. ಈ ನಿಟ್ಟಿನಲ್ಲಿ ಡಾ.ಹಾ.ಮಾ.ನಾಯಕರು ಹೇಳಿರುವಂತೆ "ಲೇಖಕರಿಗೆ ವಿಷಯದ ಮೇಲಿನ ಪ್ರೀತಿ, ಇಂಥ ಪ್ರಕಟಣೆಗಳನ್ನು ಹೊರತರಲು ಬೇಕಾದ ಉತ್ಸಾಹ, ಧೈರ್ಯ, ಸಾಹಸ ಇವುಗಳಿಂದ ಮಾತ್ರ ಸಾಧ್ಯವಾಗಬಹುದಾದ ಕೆಲಸ. ಯಾವುದೋ ಸಂಗ್ರಹಾಲಯದ ಮೂಲೆಯಲ್ಲಿ ಧೂಳು ಹಿಡಿದು ಕುಳಿತ ಸಾಮಗ್ರಿಯನ್ನು ಪತ್ತೆ ಮಾಡಿ ಅದಕ್ಕೊಂದು ರೂಪಕೊಟ್ಟು ಒಪ್ಪು ಮಾಡಿ ಪ್ರಕಟಿಸುವುದು ಸಾಮಾನ್ಯದ ಸಂಗತಿಯಲ್ಲ. ಒಂದು ದೃಷ್ಟಿಯಲ್ಲಿ ಇದು ಈ ಬಗೆಯ ಮೊದಲ ಕನ್ನಡ ಪುಸ್ತಕ ಇಂಥ ಪುಸ್ತಕಗಳ ಒಂದು ಮುಖ್ಯ ಉದ್ದೇಶವೆಂದರೆ ಆಕಾರವಾಗಿರುವುದು. ಪತ್ರಾಗಾರಗಳಿಗೆ, ಸಂಗ್ರಹಾಲಯಗಳಿಗೆ ಹೋಗಿ ಮೂಲ ದಾಖಲೆಗಳನ್ನು ಪರಿಶೀಲಿಸುವುದು ಎಲ್ಲರಿಗೂ ಸಾಧ್ಯವಾಗುವ ಕೆಲಸವಲ್ಲ. ಅಂಥವರಿಗೆ ಇವು ಸಹಾಯಕವಾಗರಿಬೇಕು. ಮುಂದಿನ ವಿಮರ್ಶೆ ಸಂಶೋಧನೆಗಳಿಗೆ ಆಧಾರವೆನ್ನಿಸುವಂತಿರಬೇಕು. ಆ ದಿಕ್ಕಿನಲ್ಲಿ ಈ ಪುಸ್ತಕ ಉಪಯುಕ್ತವಾದುದಾಗಿದೆ. ಸುಬ್ರಹ್ಮಣ್ಯಂ ಅವರನ್ನು ಅಭಿನಂದಿಸಬೇಕು. ಈ ಕೆಲಸಕ್ಕಾಗಿ... ಇದರಲ್ಲಿ ಕಲಾವಿದನೊಬ್ಬನ ಪ್ರಪಂಚವನ್ನು ಕಾಣಬಹುದು. ಈ ಪ್ರಪಂಚ ಕನ್ನಡದ್ದು ಎನ್ನವುದು ನಮಗೆಲ್ಲ ಸಂತೋಷ ಅಭಿಮಾನವನ್ನು ಉಂಟು ಮಾಡುತ್ತದೆ" ಎಂಬ ಮಾತುಗಳಲ್ಲಿ ಕೆಲಸದ ಮೇಲಿನ ನಿಷ್ಠೆಯನ್ನು ಪ್ರತಿಬಿಂಬಿಸುವಂತಿದೆ.

### ೪.೨. ವಿಜಯ ಸಿಂಧೂರ

ಪ್ರಸ್ತುತ ಕೃತಿಯು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ೨೦೦೦ರಲ್ಲಿ ಪ್ರಕಟಗೊಂಡಿದೆ. ಇದರ ಪ್ರಧಾನ ಸಂಪಾದಕರಾದ ಪ್ರೊ.ವಿ.ಜಿ.ಅಂದಾನಿಯವರ ನೇತೃತ್ವದಲ್ಲಿ ಹೊರತರಲಾಗಿದ್ದು ಒಟ್ಟು viii+೪೬ ಪುಟಗಳನ್ನು ಬಳಸಿಕೊಂಡಿರುವುದಾಗಿದೆ. ಈ ಕೃತಿಯು ಕರ್ನಾಟಕದ ಹಿರಿಯ ಮತ್ತು ಸಮಕಾಲೀನ ಕಲಾವಿದರಲ್ಲಿ ಒಬ್ಬರಾದ ವಿಜಯ ಸಿಂಧೂರ ಜೀವನ ಮತ್ತು ಅವರ ಕಲೆಯ ಪರಿಚಯ ಮಾಡಿಕೊಡುವುದಾಗಿದೆ.

ಬಿಜಾಪುರ ಜಿಲ್ಲೆಯ ಜಮಖಂಡಿಯಲ್ಲಿ ಜನಿಸಿದ(೭-೬-೧೯೪೦) ಸಿಂದೂರರು ಇದನ್ನೇ ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡು ಕಲಾಸಾಧನೆಯ ಜೊತೆಗೆ ಸಾಹಿತ್ಯ, ಸಂಗೀತದಲ್ಲಿಯೂ ಅಭಿರುಚಿಯುಳ್ಳವರಾಗಿದ್ದಾರೆಂದು ತಿಳಿಸುತ್ತ, ತಮ್ಮ ಚಿತ್ರಶಾಲೆಯನ್ನು ಕಲಾಭಿಮಾನಿಗಳ ಸ್ಫೂರ್ತಿದಾಯಕವಾಗಿದ್ದು ಲೇಖಕರು ಈ ಅಂಶಗಳನ್ನು ಇಲ್ಲಿ ಮೂಡಿಸಿದ್ದಾರೆ.

ಸಿಂಧೂರರ ಬಾಲ್ಯವು ವಿಶಿಷ್ಟ ಕಲ್ಲು–ಮಣ್ಣುಗಳ ರಾಮತೀರ್ಥ ಗುಡ್ಡದ ಮೇಲಿನಿಂದ ಸುತ್ತಲಿನ ಪ್ರಕೃತಿಯ ಬಣ್ಣಗಳ ಛಾಯಾಂತರು, ಸೂರ್ಯನ ಮೂಲದ ಬದಲಾಗುವ ಬೆಳಕಿನ ನಂತರದ ನಸುಗತ್ತಲಿನ ಜೊತೆಗೆ ಆ ಸಂದರ್ಭದ ಮೌನರಾಗದ ಹಿಮ್ಮೇಳದಂಥ ಪಕ್ಷಿಗಳ ಚಿಲಿಪಿಲಿ ಅನುಭವ ಸಿಮೆಂಟ್ ಕಾಡಿನ, ಗಡಿಬಿಡಿ ನಗರ ಜೀವನದಿಂದ ದೂರವಾಗಿ ಆತ್ಮೀಯ ಜನರ ನಡುವೆ ಬಗೆ ಬಗೆಯ ಬಳ್ಳಿ ಹೂಗಳ ಬದಿಯಲ್ಲಿ ಅವರ ಮನೆಯಲ್ಲಿನ ಸಂಗೀತ ಕೇಳುತ್ತ ಪ್ರಕೃತಿಯ ಹಲವು ಒಳನೋಟಗಳು ಅನುಭವಿಸಿ ಬಣ್ಣ, ಬೆಡಗು, ಬೆಳಕು, ನೆರಳುಗಳ ವೈವಿಧ್ಯಮಯ ಹೊರನೋಟಗಳು ಅವರ ಭೂದೃಶ್ಯ ಕಲೆಯಲ್ಲಿ ಅಸಾಮಾನ್ಯ ಪ್ರತಿಭೆಯಿಂದ ಬಿಂಬಿಸಿರುವುದು ಅವರ ವೈವಿಧ್ಯಮ ಶೈಲಿ, ಮಾಧ್ಯಮಗಳ ನಿರ್ವಹಣೆ ಹಾಗೂ ಕರ್ನಾಟಕದ ನೆಲ–ಜಲ–ಆಕಾಶಗಳನ್ನು ಜನರ ಬದುಕನ್ನು ಸಾಂಸ್ಕೃತಿಕ ಆಕರಗಳಂಥ ಸ್ಥಳಗಳನ್ನು ಕಲಾವಿದರು ತಮ್ಮ ಅಭಿವ್ಯಕ್ತಿಯಲ್ಲಿ ಬಿಂಬಿಸಿರುವುದನ್ನು ಲೇಖಕರು ಮಾರ್ಮಿಕವಾಗಿ ಕಟ್ಟಿಕೊಟ್ಟಿದ್ದಾರೆ. ಹಾಗೆ ಜೆ.ಜೆ.ಕಲಾಶಾಲೆಯಲ್ಲಿನ ಕಲಿಕೆಯ ಸಂದರ್ಭದಲ್ಲಿ ರಾಷ್ಟ್ರೀಯ ಖ್ಯಾತ ಕಲಾವಿದರಾದ ಜತಿನ್‌ದಾಸ್, ಕಾಮಕರ್, ಪುಂಚಿತ್ತಾಯ ಮುಂತಾದವರ ಸ್ನೇಹ ಅವರೊಂದಿಗಿನ ಒಡನಾಟದ ಅನುಭವಗಳು, ಇವರ ಸ್ಥಳೀಯ ಜೀವನದ ಭಾವಚಿತ್ರ ಕೃತಿಗಳು, ಪ್ರಕೃತಿ ಚಿತ್ರಗಳಲ್ಲಿನ ಪ್ರಬಲ ಕೈಚಳಕ ತೈಲವರ್ಣದಲ್ಲಿ ವಿಶಿಷ್ಟ ಪ್ರಯೋಗಗಳನ್ನು ಅತ್ಯಂತ ಗಮನರ್ಹ ರೀತಿಯಲ್ಲಿ ಲೇಖಕರು ಹಿಡಿದಿಟ್ಟಿದ್ದಾರೆ. ಹಾಗೆ ಅವರ ಕಲಾ ಸಾಧನೆಗೆ ಸಂದ ಪ್ರಶಸ್ತಿ ಗೌರವಗಳು, ವ್ಯಕ್ತಿಪರಿಚಯ, ಪ್ರದರ್ಶನಗಳು ಹಾಗೂ ಮುಖ್ಯವಾಗಿ ಕಲಾಕೃತಿಗಳಲ್ಲಿ ಭಾವ ಪ್ರಕ್ರಿಯೆಯಲ್ಲಿನ ವಿಶಿಷ್ಟ ಹೊರರೂಪ ವ್ಯಕ್ತಿತ್ವಗಳ ಜೊತೆಗೆ ಆ ವ್ಯಕ್ತಿಗಳ ಒಳನೋಟಗಳನ್ನು ಗ್ರಹಿಸಿ ಅಭಿವ್ಯಕ್ತಿಸಿರುವ ಭಾವಚಿತ್ರಗಳನ್ನು ಮತ್ತು ಚಿಟ್ಟೆಗಳು, ಮೇಕೆಗಳು, ಕಾಕ್ಟಸ್, ನನ್ನ ಹುಟ್ಟೂರಿನ ಸ್ಥಳ ಚಿತ್ರಗಳು ಹಾಗೂ ಭಿನ್ನ ಬಿಜಾಪುರ ಮುಂತಾದ ಸರಣಿ ಕೃತಿಗಳನ್ನು ಲೇಖಕರು ನಮ್ಮ ಅನುಭವಕ್ಕೆ ದಕ್ಕುವಂತೆ ಇಲ್ಲಿ ಮೂಡಿಸಿದ್ದಾರೆ. ಒಟ್ಟಾರೆ ಈ ಕೃತಿಯು ಸಿಂಧೂರವರ ಜೀವನದ ಒಳನೋಟಗಳ ಚಿತ್ರವನ್ನು ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲಿಯೂ ಸ್ಥೂಲವಾಗಿ ವ್ಯಕ್ತಗೊಂಡಿದೆ.

### ೪.೩. ಎಸ್.ಜಿ.ವಾಸುದೇವ

೨೦೦೮ರಲ್ಲಿ ಪ್ರಕಟವಾದ ಎಸ್.ಜಿ.ವಾಸುದೇವ ಎಂಬ ಕೃತಿಯು ಕರ್ನಾಟಕ ಲಲಿತಕಲಾ ಅಕಾಡೆಮಿಯ ಆಗಿನ ಅಧ್ಯಕ್ಷರಾದ ಪ್ರೊ.ವಿ.ಜಿ.ಅಂದಾನಿಯವರ ನೇತೃತ್ವದಲ್ಲಿ ಹೊರತರಲಾಗಿದೆ.

ದೃಶ್ಯಕಲೆಯ ಪುಸ್ತಕ ಪ್ರಕಟಣೆಯಲ್ಲಿ ದೇಶಿಭಾಷೆಗಳಲ್ಲಿ ಕರ್ನಾಟಕ ಲಲಿಕಲಾ ಅಕಾಡೆಮಿ ಗಣನೀಯ ಕೆಲಸವನ್ನು ಮಾಡುತ್ತಿದ್ದು, ಅದೇ ಹಾದಿಯಲ್ಲಿ ಹಲವು ದಿಟ್ಟ ಹೆಜ್ಜೆಗಳನ್ನು ಇಡುತ್ತಾ ಸಾಗುತ್ತಿದೆ. ಕನ್ನಡದ ಹಿರಿಯ ಸಮಕಾಲೀನ ಕಲಾವಿದರ ನಂತರ ಕಲೆಯ ಕುರಿತ ಪ್ರಕಟಣೆಗಳನ್ನು ಸಂಖ್ಯೆಯಿಂದ ಮಾತ್ರವೇ ಅಲ್ಲದೆ ಗುಣ ಮೌಲ್ಯದಿಂದಲೂ ಹೆಚ್ಚಿನದನ್ನು ಸಾಧಿಸಿರುವುದು

ಗಮನಾರ್ಹ. ಈ ದೃಷ್ಟಿಯಲ್ಲಿಯೇ ಪ್ರಸ್ತುತ ಕೃತಿಯಾದ ಎಸ್.ಜಿ.ವಾಸುದೇವ ಎಂಬುದು ವ್ಯಕ್ತಿ ಕೇಂದ್ರಿತ ಅಧ್ಯಯನವನ್ನು ಒಳಗೊಂಡಿದ್ದು, ನಾಡಿನ ಹಿರಿಯ ಹಾಗೂ ಬಹುಮುಖ್ಯ ಕಲಾವಿದರಲ್ಲೊಬ್ಬರು. ಪ್ರಸ್ತುತ ಕೃತಿಯಲ್ಲಿ ಒಟ್ಟು vii+೪೦+xvi+iv ಪುಟಗಳಿದ್ದು, ೮ ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಒಂದೊಂದು ವಿಷಯಕ್ಕೆ ತಕ್ಕನಾದ ವಿವರಣೆ ನೀಡಲಾಗಿದೆ. ಅವು ಎಸ್.ಜಿ.ವಾಸುದೇವ, ವಾಸುದೇವರ ಕಲಾಸೃಷ್ಟಿ: ೧೯೬೦–೭೦, ವಾಸುದೇವರ ಅಭಿವ್ಯಕ್ತಿಯಲ್ಲಿ ಹೊಸ ರೂಪ, ಸಂಯೋಜನೆಗಳು S.G.Vasudav, The Social activist, Works of Vasudeva, New Idioms and Compositions in Vasudevas work's ಶಬ್ದಸೂಚಿ/Index ಎಂಬ ವಿಷಯಗಳಿದ್ದು ಮೊದಲು ಮೂರು ಬರಹಗಳು ಕೆ.ವಿ.ಸುಬ್ರಹ್ಮಣ್ಯಂ ಅವರು ಬರೆದದ್ದು, ಇನ್ನುಳಿದ ಇಂಗ್ಲೀಷ್ ಅನುವಾದವನ್ನು ರವಿಕುಮಾರ ಕಾಶಿಯವರಾಗಿದ್ದಾಗಿದೆ.

ಮೈಸೂರು ನಗರದ ಹಳೆಯ ಅಗ್ರಹಾರದ ಕುಟುಂಬದಲ್ಲಿ ಮಾರ್ಚ್ ೩, ೧೯೪೧ರಲ್ಲಿ ಹುಟ್ಟಿದ ವಾಸುದೇವ ಇವರ ತಾಯಿಯು ಕಲಾವಿದೆಯಾಗಿದ್ದು, ರವಿವರ್ಮ ಮತ್ತು ಪಾಶ್ಚಾತ್ಯ ಯುರೋಪಿನ ಕಲಾವಿದರ ಕಲಾಕೃತಿಗಳನ್ನು ನಕಲು ಮಾಡುವ ಕೌಶಲತೆ ಹೊಂದಿದ್ದರು. ಇಂತಹ ಕಲಾವಾತಾವರಣದಲ್ಲಿ ಬೆಳೆದಿದ್ದ ವಾಸುದೇವರು ವಿಜ್ಞಾನ ಶಾಸ್ತ್ರಾಧ್ಯಯನ ಮುಗಿಸಿ ದಿ॥ ವಿ.ವೆಂಕಟಾಚಲಪತಿ ಮತ್ತು ಅವರ ಸಹೋದರರ ನೆರವಿನ ಪ್ರೋತ್ಸಾಹದಿಂದ ಮದರಾಸಿನ ಕಲಾಶಾಲೆಗೆ ಸೇರಿಕೊಂಡು ತಾವು ಅಭಿವ್ಯಕ್ತಿಸುವುದರೊಂದಿಗೆ ಜೀವಿಸುವುದು ಎಂಬಂತೆ ಕಲಾಜಗತ್ತಿಗೆ ತಮ್ಮನ್ನು ಮುಡುಪಾಗಿಟ್ಟು ಕೊಂಡಿದ್ದು ಲೇಖಕರು ಸಂಕ್ಷಿಪ್ತ ಮಾತುಗಳಲ್ಲೇ ಒಳಾರ್ಥವನ್ನು ವ್ಯಕ್ತಿಪಡಿಸಿದ್ದಾರೆ. ಮುಂದೆ ಅವರು ಕಲಾಕೃತಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ರೀತಿ ಕಲಾಕೃತಿಯ ಮೇಲಾದ ಪ್ರಭಾವ ಮುಖ್ಯವಾಗಿ ಇಲ್ಲಿ ಅವರ ಕಲಾರಚನೆಗೆ ಪ್ರೇರಣೆ ನೀಡಿದ ಮುಂಬೈ ಕಲಾಶಾಲೆಯ ಪ್ರಿನ್ಸಿಪಾಲರಾದ ಫಣಿಕ್ಕರ್ ಅವರ ಮಾರ್ಗದರ್ಶನದಿಂದಾದ ಬದಲಾವಣೆಯನ್ನು ಕುರಿತಾಗಿ ಲೇಖಕರು ಇಲ್ಲಿ ಪ್ರಸ್ತಾಪಿಸಿದ್ದಾರೆ. 

೧೯೬೦ರಲ್ಲಿ ಫಣಿಕರ್‌ರವರ ಜೊತೆಗೂಡಿ ದಕ್ಷಿಣದ ಕಲೆಯನ್ನು ಪುನರುಜ್ಜೀವನಗೊಳಿಸಲು 'ಕಲಾಗ್ರಾಮ' ಹುಟ್ಟು ಹಾಕಿದರು. ಕಲಾಕೃತಿಗಳಲ್ಲಿ ರೇಖೆ ಮತ್ತು ವರ್ಣಚಿತ್ರ ಸೃಷ್ಟಿಯನ್ನು ಸ್ವಾತಂತ್ರ್ಯ ಮನೋಭವ ಹಾಗೂ ಹೊಸ ದೃಷ್ಟಿಕೋನಗಳಿಂದ ಅಭಿವ್ಯಕ್ತಿಸುವ ಪ್ರಕ್ರಿಯೆಗಳಲ್ಲಿ ತಮ್ಮದೇ ಆದ Identityಯನ್ನು ಹೊಂದಲು ಪೂರಕ ವಾತಾವರಣವನ್ನು ಫಣಿಕರ್‌ರು ವಾಸುದೇವರಿಗೆ ನಿರ್ಮಿಸಿಕೊಟ್ಟಿದ್ದರು. ಹಾಗೆ ಫಣಿಕರ್‌ರವರ ವ್ಯಕ್ತಿತ್ವವನ್ನು ಕುಶಲತೆಯ ಚಟುವಟಿಕೆಗಳನ್ನು ತಿಳಿಯಪಡಿಸುತ್ತಾ ಹೋಗಿದ್ದಾರೆ. ಮುಂದೆ ವಾಸುದೇವರವರ ಕಲಾಪಯಣ, ಕಲಾಪ್ರದರ್ಶನಗಳ ಕುರಿತಾಗಿ ಹೇಳಿದ್ದು, ಮೈಸೂರಿನಲ್ಲಿ ಹುಟ್ಟಿ ಬೆಳೆದಿರುವುದರಿಂದ ಅಲ್ಲಿನ ದಸರಾ ಮೆರವಣಿಗೆ ಹಾಗೆಯೇ ಮನೆಯ ಹತ್ತಿರ ಇದ್ದ ಆನೆ ರೂಪ, ೧೯೭೪ರಲ್ಲಿ ತಮ್ಮ ಕಲಾಕೃತಿಗಳಲ್ಲಿ ವಿಶಿಷ್ಟ ರೂಪವಾಗಿಸಿಕೊಂಡಿವೆ. ಸಾಹಿತಿಗಳ ಒಡನಾಟದಿಂದ ಸಂಸ್ಕೃತಿಯ

ಚಿಂತನೆ, ಚಲನಚಿತ್ರ, ಭಿತ್ತಿ ಚಿತ್ರಗಳ ಸೃಷ್ಟಿಗೆ ಕಾರಣರಾದರು. ಹೀಗೆ ಬೇಂದ್ರೆ ಮನೋಹರ ಕಾವ್ಯ ಕೃತಿಗಳು ಇನ್ನೂ ಹಲವಾರು ಸಾಹಿತ್ಯ ಕೃತಿಗಳ ಮುಖ ಪುಟಗಳನ್ನು ರಚಿಸಿದ್ದು ಕಂಡುಬರುತ್ತದೆ.

ವಾಸುದೇವರ ಅಪರಿಚಿತ ಮುಖಗಳಲ್ಲಿ ಅವರೊಳಗಿನ Socialನ ಮುಖವೂ ಒಂದಾಗಿದ್ದು, ಲೇಖಕರು ಅದನ್ನು ಗ್ರಹಿಸಿ ಕೆಲವೊಂದು ಸಂದರ್ಭಗಳನ್ನು ಉಲ್ಲೇಖಿಸಿದ್ದಾರೆ. ವಾಸುದೇವರ ಕಲಾಸೃಷ್ಟಿ: ೧೯೬೦-೭೦ರ ವರೆಗೆ ನಡೆದಿರುವ ಕಲಾಕೃತಿಗಳಲ್ಲಾದ ಬದಲಾವಣೆ, ಕಲಾಸೃಷ್ಟಿಗೆ ಕಾರಣವಾದ ಜೀವನದ ಪ್ರತಿಯೊಂದು ಘಟನೆಗಳಿಗೆ ತಕ್ಕಂತೆ ಕೃತಿ ಸರಣಿಗಳು ಮೂಡಿದ್ದು ವಿಶೇಷವಾಗಿದೆ. ೧೯೬೦ರಲ್ಲಿ ಯೌವನದ ಆಶಯಗಳಿಗೆ ಸೂಕ್ತವಾದ, ಪೂರಕವಾದ Fantasy ಮಾಲೆಯ ಕೃತಿಗಳು, ೧೯೬೨-೬೩ರಲ್ಲಿ ಖ್ಯಾತ ಕಲಾವಿದರಾದ ನ್ಯೂಟನ್‌ಸೌಜಾರ ಪ್ರಭಾವದಿಂದ 'ಸಿಟಿ' ಶೀರ್ಷಿಕೆಯ ಕೃತಿ ಸರಣಿ, ಆ ಮಧ್ಯೆ ಫಣಿಕ್ಕರ್‌ರವರ ಕೃತಿಗಳಿಂದಲೂ ಪ್ರಭಾವಿಸಿ ಚಿತ್ರರಚನೆ ಮಾಡಿದಿದ್ದು ಕಾಣಬಹುದಾಗಿದೆ. ೧೯೭೦ರಲ್ಲಿ ಪುರಾಣ, ವಾಸ್ತು, ಶಿಲ್ಪ, ಉಬ್ಬುಶಿಲ್ಪ, ಭಿತ್ತಿ ಚಿತ್ರಗಳು ಸಮಕಾಲಿನವಾಗಿ ಮುಂದುವರೆದಿದ್ದು 'ಮೈಥುನ್' The Act of Painting ಕೃತಿ ಸರಣಿಗಳಲ್ಲದೆ ವಾಸುದೇವರು ಕೆಲವು ಕುಂಚ ಬಣ್ಣ, ಕ್ಯಾನ್‌ವಾಸ್‌ಗಳಲ್ಲದೆ ಮ್ಯೂರಲ್ ಆರ್ಟ್‌ಗಳನ್ನು ಮಾಡಿದ್ದನ್ನು ಇಲ್ಲಿ ಉಲ್ಲೇಖಿಸಿದ್ದಾರೆ.

೧೯೭೦ರ ಹೊತ್ತಿಗೆ ತಮ್ಮದೇ ಆದ ಶೈಲಿ ಮತ್ತು ವಸ್ತುವನ್ನು ಸಾಧಿಸಿಕೊಂಡು 'He' and 'Manscape' ಶೀರ್ಷಿಕೆಯ ಕೃತಿಸರಣಿಗಳು ಅನನ್ಯತೆಯನ್ನು ಸಾಧಿಸಿದ್ದವು ಎನ್ನಲಾಗಿದೆ. ನೋವಿನ ಮುಖಗಳ Human Scape, Earth Scapesಗಳು, ಚಿತ್ರ-ಕಾವ್ಯ, ಸ್ನೇಹ-ಚರ್ಚೆಗಳಿಗೆ ಸಂಬಂಧಿಸಿದ ರೇಖಾ ಚಿತ್ರಗಳನ್ನು ರಚಿಸಿದ್ದಾರೆ. ಇವು ವ್ಯಕ್ತಿಯೊಬ್ಬನ ಕೈಬರಹ, ರೇಖೆ ಅಥವಾ ಚಿತ್ರ ಆ ವ್ಯಕ್ತಿಯ ಅಂತರಂಗದ ಒಳನೋಟಗಳ ಮುಖವನ್ನು ಸಂಕೇತಿಸುವಂತಿದೆ ಎನ್ನುತ್ತಾರೆ.

ವಾಸುದೇವರ ಅಭಿವ್ಯಕ್ತಿಯಲ್ಲಿ ಕಂಡುಕೊಂಡ ಹೊಸರೂಪ, ಸಂಯೋಜನೆಗಳು ನಾಲ್ಕು ದಶಕಗಳಲ್ಲಿ ಹಲವು ಮಜಲುಗಳನ್ನು ದಾಟಿ ಬಂದಿರುವುದರ ಆ ಅನುಭವ ಗ್ರಹಿಕೆಗಳ ತೀವ್ರತೆಯ ವೈವಿಧ್ಯದಿಂದ ಸಹಜವಾಗಿಯೇ ಅವರ ಕಲಾಕೃತಿಗಳಲ್ಲಿನ ರೂಪ ಅಥವಾ ಚಿತ್ರಭಾಷೆ ರೂಪಾಂತರಗೊಳ್ಳುತ್ತಾ ಬಂದಿದೆ. ಲೇಖಕರು ಅವುಗಳ ಕೃತಿ ಸರಣಿಯ ಚಿತ್ರಮಾಲೆಗಳನ್ನು ಪರಿಚಯಿಸುತ್ತಾ ಅವುಗಳಲ್ಲಿನ ವಸ್ತು ವಿಷಯ, ಅನುಭಗಳ ಪ್ರಭಾವದ ಒಳನೋಟಗಳಿಂದ ರಚನೆಯ ವಿಧಾನ, ಅಲ್ಲದೆ ಕನ್ನಡ ಸಾಹಿತ್ಯ-ಕನ್ನಡ ಜಾನಪದ, ಸಿನಿಮಾ ರಂಗಭೂಮಿ, ವಸ್ತು ಆಶಯಗಳು, ತಮ್ಮ ರೇಖೆ, ಬಣ್ಣ ರೂಪಗಳಲ್ಲಿ ಪಾರ್ವತ್ಯ ಚಿಂತನೆಯ ಫಲದಂತೆ ಇಂದಿನ ಗ್ರಾಮೀಣ ಭಾರತೀಯ ಬದುಕಿನ ಒಳನೋಟಗಳನ್ನು ತೋರುತ್ತಿರುವ ಅನೇಕ ಅಭಿವ್ಯಕ್ತಿಗಳಲ್ಲಿ ಬಹುಮುಖ ಪ್ರತಿಭೆಯನ್ನು ಲೇಖಕರು ಪರಿಚಯಿಸಿದ್ದು ನಿಜಕ್ಕೂ ಉತ್ತಮ. ಅತ್ಯಂತ ಚಿಕ್ಕ ಪ್ರಮಾಣದಲ್ಲಿದ್ದರು ಕೃತಿಯ ಹೊಳಪು ಒಳಗಿನ ಕೃತಿಗಳ ಛಾಯಾಚಿತ್ರಗಳಿಂದ ಇನ್ನಷ್ಟು ಇಮ್ಮಡಿಯನ್ನಾಗಿಸಿವೆ. ಒಟ್ಟಾರೆ ಈ ಕೃತಿಯು ಕಲಾವಿದ್ಯಾರ್ಥಿಗಳಿಗೆ ಅಲ್ಲದೆ ಕಲಾವಿದರಿಗೂ

ಕಲಾ ಸಾಹಿತಿ ಬರಹಗಾರರಿಗೂ ಒಬ್ಬ ವ್ಯಕ್ತಿಯನ್ನು ಯಾವ ರೀತಿಯಲ್ಲಿ ಪರಿಚಯಿಸಿಕೊಡಬಹುದು ಎಂಬುದಕ್ಕೆ ಒಳ್ಳೆಯ ಮಾದರಿಯಂತಿದ್ದು ಅಧ್ಯಯನ ಯೋಗ್ಯ ಕೃತಿಯಾಗಿದೆ.

**೪.೪. ಸಿ.ಪಿ.ರಾಜಾರಾಮ್**

ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟಗೊಂಡ ಈ ಕೃತಿಯು ೨೦೦೪ರಲ್ಲಿ ಮುದ್ರಣಗೊಂಡಿದ್ದು ವ್ಯಕ್ತಿ ಕೇಂದ್ರಿತ ಬರವಣಿಗೆಯಾಗಿದೆ. ಲೇಖಕರ ಹೇಳಿಕೆಯಂತೆ ನಮ್ಮ ರಾಜ್ಯದ ಶಿಲ್ಪಕಲೆಗೆ ವಿಶ್ವದಲ್ಲೇ ಹೆಸರು ಪಡೆದಿದ್ದು 'ಶಿಲ್ಪಕಲೆಯ ತವರೂರು' ಎಂದು ಕರೆಯಲ್ಪಟ್ಟಿದೆ. ಈ ನಾಡಿನಲ್ಲಿ ಅನೇಕ ಶಿಲ್ಪ ಶೈಲಿಗಳು ಹುಟ್ಟಿ, ಅವು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಪಡೆದಿವೆ. ಅಲ್ಲದೇ ಹೆಸರಾಂತ ಶಿಲ್ಪಿಗಳು ದುಡಿದು ತಮ್ಮ ಅನರ್ಘ ಪರಂಪರೆಯನ್ನು ಬಿಟ್ಟು ಹೋಗಿದ್ದಾರೆ. ಅಂತಹವರಲ್ಲಿ ಸಿ.ಪಿ.ರಾಜಾರಾಂ ಕೂಡ ಒಬ್ಬರಾಗಿದ್ದು, ಕರ್ನಾಟಕದಲ್ಲಿ ಆಧುನಿಕ ಶಿಲ್ಪಕಲೆ ಪ್ರಾರಂಭಿಸಿದವರಲ್ಲಿ ಮೊಟ್ಟಮೊದಲಿಗರು ಎಂಬ ಅಭಿಪ್ರಾಯವನ್ನು ನಮ್ಮ ಮುಂದಿಡಲು ಪ್ರಯತ್ನಿಸಿದ್ದಾರೆ.

ಪ್ರಸ್ತುತ ಕೃತಿಯು ೨೮ ಪುಟಗಳ ಕಿರುರೂಪದ ಕೃತಿಯಾಗಿದ್ದು ಮೊದಲಿಗೆ ಶಿಲ್ಪಿಯ ಸಂಕ್ಷಿಪ್ತ ಮನೆತನದ ಪರಿಚಯದೊಂದಿಗೆ ಅವರು ಕೃತಿಗಳ ರಚನೆಯಲ್ಲಿ ತೊಡಗಿದ ರೀತಿ ಶಾಲೆಯಲ್ಲಿ ಕಲಿಯುವಾಗ ಅವರ ಕಲಾಕೃತಿಗಳಲ್ಲಿನ ವೈಶಿಷ್ಟತೆ, ಮಾಧ್ಯಮ ಮುಖ್ಯವಾಗಿ ಪರಿಸರದಿಂದಾದ ಪ್ರಭಾವವನ್ನು ಪರಿಚಯಿಸುತ್ತಾ, ಅವರ ಒಟ್ಟು ಕಲಾಕೃತಿಯ ರಚನೆ, ಬೆಳವಣಿಗೆ, ವೃತ್ತಿಯನ್ನು ಜೊತೆಯಾಗಿ ಕಲೆಯ ರಚನಾಕಾರ್ಯ ಕುರಿತಾಗಿ ನಮ್ಮ ಮುಂದೆ ಕಟ್ಟಿಕೊಡುವಲ್ಲಿ ಸಮರ್ಥರಾಗಿದ್ದನ್ನು ನಾವು ಮನಗಾಣಬಹುದು.

ಅಕ್ಕಮ್ಮ, ಸಿ.ಬಿ.ಪೊನ್ನಪ್ಪ ಎಂಬ ದಂಪತಿಗಳಿಗೆ ೧೯೨೭ರಲ್ಲಿ ಜನಿಸಿದ ಸಿ.ಪಿ.ರಾಜಾರಾಮರು ತಂದೆ ಸಿ.ಬಿ.ಪೊನ್ನಪ್ಪ ಸೈನಿಕ ವಲಯದಲ್ಲಿ ಸ್ವಾತಂತ್ರ್ಯ ಮತ್ತು ದೇಶಭಕ್ತಿಯ ದೃಷ್ಟಿಗಾಗಿ ಸುಪರಿಚಿತರಾಗಿದ್ದು ತಾಯಿ ಸಂಗೀತಗಾರ್ತಿಯಾಗಿದ್ದು ಎರಡು ಕಲೆಗಳಿಂದ ಇವರಲ್ಲಿ ಕಲಾವಿದ ಮತ್ತು ಸೈನಿಕನಾಗಿ ರೂಪುಗೊಳ್ಳಲು ಪ್ರೇರೇಪಿಸಿದ್ದವು. ಕೊಡಗಿನ ಬೆಟ್ಟಗುಡ್ಡಗಳಲ್ಲಿ ಅಲೆದಾಡುತ್ತಲೇ ಅಲ್ಲಿನ ಗಿಡಮರಗಳ ವಿವಿಧ ರೂಪ, ಆಕರಗಳಲ್ಲಿ ಪಕ್ಷಿ, ಪ್ರಾಣಿಗಳ ಮನುಷ್ಯರ ರೂಪಗಳನ್ನು ಸೃಷ್ಟಿಸುವಲ್ಲಿ ಮುಂದಾದರು. ಶಿಕ್ಷಣ ಸಂದರ್ಭದಲ್ಲಿಯೂ ಅನೇಕ ಶಿಲ್ಪಕೃತಿಗಳನ್ನು ರಚನೆ ಮಾಡಿದ್ದು ಇಲ್ಲಿ ಪ್ರಸ್ತಾಪಿಸಿದ್ದಲ್ಲದೆ ಅವರ ದೃಷ್ಟಿಕೋನಗಳಿಂದ ಕಲಾಕೃತಿಗಳ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

ತಮ್ಮ ಸೈನಿಕ ವೃತ್ತಿ ಜೀವನದ ಜೊತೆಗೆ ಮರದ ತುಣುಕುಗಳಲ್ಲಿ ಪೆನ್‌ನೈಫ್‌ನಿಂದ ಕೆತ್ತಿದ ಅನೇಕ ಕೃತಿಗಳನ್ನು ರಚಿಸಿ, ದೇಶ ವಿದೇಶಗಳಲ್ಲಿಯೂ ಪ್ರದರ್ಶನಗೈದಿದ್ದಾರೆ. ಇವರು ಮೊದಲೇ ತಿಳಿಸಿದಂತೆ ಆಧುನಿಕ ಶಿಲ್ಪಕಲೆಯನ್ನು ಕರ್ನಾಟಕಕ್ಕೆ ಪರಿಚಯ ಮಾಡಿಕೊಟ್ಟಿದ್ದು, ಕರ್ನಾಟಕ

ಕಲಾವಿದರ ವೈಶಿಷ್ಟ್ಯತೆಯನ್ನು ಪ್ರದರ್ಶಿಸುವಂತಿದೆ. ಈ ನಿಟ್ಟಿನಲ್ಲಿ ಇವರು ಶಿಲ್ಪಕಲೆಯಲ್ಲಿಯೇ ಅನೇಕ ಪ್ರಶಸ್ತಿ, ಗೌರವಗಳನ್ನು ಪಡೆದುಕೊಂಡಿದ್ದು ಅಲ್ಲದೆ ಈ ಶಿಲ್ಪಕಲೆಯ ಕಲಿಕೆಗೆ ಜರ್ಮನಿ ದೇಶಗಳಿಗೆ ಹೋಗಿ ಅಲ್ಲಿನ ಶಿಲ್ಪಕಲೆಯಲ್ಲಿ ಪ್ರಮುಖರೆನಿಸಿದ ಕಲಾವಿದರನ್ನು ಪರಿಚಯಿಸಿಕೊಂಡು ಕಲೆಯ ಕುರಿತಾದ ಸೂಚನೆ ಸಲಹೆಗಳನ್ನು ಪಡೆದುಕೊಂಡು ತಮ್ಮ ಕಲಾಕೃತಿಗಳಲ್ಲಿ ಮೂಡಿಸಿದ್ದನ್ನು ಅವರ ಶಿಲ್ಪಗಳು ಛಾಯಾಚಿತ್ರಗಳನ್ನು ನೋಡಿದಾಗ ಅನುಭವವಾಗುತ್ತದೆ.

### ೪.೫. ಆರ್.ಎಸ್.ನಾಯ್ಡು

ಪ್ರಸ್ತುತ ಈ ಕೃತಿಯು ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಮುದ್ರಣಗೊಂಡಿದೆ. ಮೂವತ್ತಾರು ಪುಟಗಳ ಈ ಕೃತಿಯಲ್ಲಿ ನಾಡಿನ ಹಳೆಯ ತಲೆಮಾರಿನ, ಅಂತಾರಾಷ್ಟ್ರೀಯ ಖ್ಯಾತಿ ಪಡೆದ ಕಲಾವಿದ ಹಾಗೂ ಸ್ವಾತಂತ್ರ್ಯ ಹೋರಾಟಗಾರ ಆರ್.ಎಸ್.ನಾಯ್ಡು ಅವರ ಜೀವನ ಸಾಧನೆಯನ್ನು ಪರಿಚಯಿಸುವಂತಹ ಕೃತಿಯಾಗಿದೆ. ಪ್ರಸ್ತುತ ಕೃತಿಯಲ್ಲಿ ಕನ್ನಡ ಮತ್ತು ಇಂಗ್ಲೀಷ್ ಎರಡೂ ಮಾಧ್ಯಮದಲ್ಲಿ ಅವರ ಪರಿಚಯವನ್ನು ಓದುಗರಿಗೆ ನೀಡಿರುವುದು ಸ್ವಾಗತಾರ್ಹ ಬೆಳವಣಿಗೆ.

ಲೇಖಕ ಕೆ.ವಿ.ಸುಬ್ರಹ್ಮಣ್ಯಂ ಅವರು ಆರ್.ಎಸ್.ನಾಯ್ಡುರವರ ಮಾನವೀಯತೆಯನ್ನು ಬದುಕಿನ ಮೌಲ್ಯವಾಗಿ ಅರಗಿಸಿಕೊಂಡಿದ್ದರು. ಹಾಗಾಗಿಯೇ ಅವರಿಗೆ ಅಸಂಖ್ಯಾತ ಮಿತ್ರರು, ಅಭಿಮಾನಿಗಳು, ಅದೃಶ್ಯ ಅಭಿಮಾನಿಗಳೂ ಇದ್ದರು; ಇದ್ದಾರೆ. ಐ.ಆರ್.ಟಿ., ಬಿ.ವಿ.ಕೆ, ಆರ್. ಸೀತಾರಾಮ್, ಆರ್.ಎಂ.ಹಡಪದ, ಎಚ್.ಎಸ್. ಇನಾಮತಿ, ಕೆ.ಆರ್.ಕೃಷ್ಣಮೂರ್ತಿಯವರುಗಳು ಈ ವಿಶಿಷ್ಟ ವ್ಯಕ್ತಿಯ ಅಮೂರ್ತ ಮಾನವೀಯತೆಯನ್ನು ಅನುಭವಿಸಿದವರು ಎಂಬುದು ಲೇಖಕರು ಮಾರ್ಮಿಕವಾಗಿ ಪ್ರಸ್ತಾಪಿಸಿದ್ದಾರೆ.

ಕಲೆ, ನೆಮ್ಮದಿಯ ವಾತಾವರಣದಲ್ಲಿ ಮಾತ್ರ ಹುಟ್ಟಿಬರುತ್ತದೆ ಎಂಬ ನಂಬಿಕೆ ಹಲವರದು. ಆದರೆ ಆರ್.ಎಸ್.ನಾಯ್ಡುರಂತಹ ಕ್ರಾಂತಿಕಾರಿ ಮನಸ್ಥಿತಿಯವರೂ ಅಭಿವ್ಯಕ್ತಿಗೆ ಪೂರಕವಾಗಿ ದೃಶ್ಯ ಸಂಸ್ಕೃತಿಯ ರೇಖೆ ಹಾಗೂ ಶಿಲ್ಪ ಮಾಧ್ಯಮವನ್ನು ಜೊತೆಗೆ ಅಕ್ಷರ ಮಾಧ್ಯಮದ ಕ್ಯಾಲಿಗ್ರಾಫಿ ಕಲೆಯನ್ನು ಬಳಸಿಕೊಂಡಂತಹ ಬಹುಮುಖ ಪ್ರತಿಭೆಯ ಕಲಾವಿದರಾದ ಆರ್.ಎಸ್. ನಾಯ್ಡುರವರ ಜನನ ಬಾಲ್ಯದ ಪರಿಚಯದ ಕುರಿತು ಔಪಚಾರಿಕವಾಗಿ ಪ್ರಸ್ತಾಪಿಸಿದ್ದು, ಹೆಚ್ಚಾಗಿ ಅವರ ಬಹುಮುಖ ಪ್ರತಿಭೆಯ ಸಾಹಿತ್ಯ, ದೃಶ್ಯಕಲೆ, ಮನಃಶಾಸ್ತ್ರ,ಯೋಗ ಇತ್ಯಾದಿ ಹಲವು ಆಸಕ್ತಿಗಳು ಅವರ ವ್ಯಕ್ತಿತ್ವದ ಕುರಿತಾಗಿಯೇ ಈ ಕೃತಿಯಲ್ಲಿ ಲೇಖಕರು ಗಮನಹರಿಸಿರುವುದು ಮೇಲುನೋಟಕ್ಕೆ ಗುರುತಿಸಬಹುದು.

ಆರ್.ಎಸ್.ನಾಯ್ಡುರವರು ಹುಟ್ಟಿದ್ದು ಬೆಂಗಳೂರಿನಲ್ಲಿ ರಂಗಸ್ವಾಮಿ ಸೀತಾಪತಿನಾಯ್ಡು ಇವರ ಪೂರ್ಣ ಹೆಸರು. ತಂದೆ ಅರಣ್ಯ ಇಲಾಖೆಯಲ್ಲಿ ಸೇವೆ ಸಲ್ಲಿಸಿದ್ದರು. ತಮಿಳುನಾಡಿನ

ತಿರುಚನಾಪಲ್ಲಿಯಲ್ಲಿದ್ದ ಅಜ್ಜ ನಿವೃತ್ತ ಸೇನಾಧಿಕಾರಿ ಹಾಗಾಗಿ ಅಜ್ಜನ ಊರಿನಲ್ಲಿ ಬಾಲ್ಯ, ವಿದ್ಯಾಬ್ಯಾಸ ನಡೆದಿದ್ದು, ನಂತರ ಬೆಂಗಳೂರು, ಧಾರವಾಡ ಕರ್ನಾಟಕ ಕಾಲೇಜು ಹಾಗೂ ಪುಣೆಯ ಫರ್ಗುಸನ್ ಕಾಲೇಜುಗಳಲ್ಲಿ ಮುಂದುವರೆಯಿತು ಎಂಬುದು ಸಂಕ್ಷಿಪ್ತ ರೀತಿಯಲ್ಲಿ ಅವರ ಬಾಲ್ಯವನ್ನು ಪರಿಚಯಿಸುತ್ತ ಅವರ ಹೋರಾಟದ ಸಂದರ್ಭ ರಾಜಕೀಯ ಒಡನಾಟ ಮತ್ತು ಅವರ ರೇಖಾ ಚಿತ್ರಗಳ ರಚನೆಯು ಮಾರ್ಕ್ಸ್‌ವಾದಿ ಧೋರಣೆಯಂತೆ ದೃಶ್ಯಕಲೆಯನ್ನು ಸಾಮಾಜಿಕ ಮತ್ತು ರಾಜಕೀಯ ಕಾರಣಗಳಿಗೆ 'ಕಲೆ ಜನರಿಗಾಗಿ' ಎಂಬಂತೆ ಆರ್.ಎಸ್.ಎನ್. ಬಳಸಿಕೊಂಡ ರೀತಿ ಆ ಸಂದರ್ಭದ ಒಂದು ಅಚ್ಚರಿಯನ್ನು ಈ ಕೃತಿಯಲ್ಲಿ ಅರ್ಥಪೂರ್ಣ ವಿಷಯವಾಗಿದೆ.

### ೪.೬. ಎನ್.ಹನುಮಂತಯ್ಯ

೧೯೮೫ರಲ್ಲಿ ಪ್ರಕಟಗೊಂಡ ಪ್ರಸ್ತುತ ಕೃತಿಯು ಎಚ್.ಎನ್.ಚಂದ್ರಶೇಖರ್‌ರವರ ಸಂಪಾದಕತ್ವದಲ್ಲಿ ಮೂಡಿಬಂದಿದೆ. ನಿಸರ್ಗ ಚಿತ್ರಕಲೆಯಲ್ಲಿ ಹೆಸರು ಮಾಡಿದ ಮೈಸೂರಿನ ಕಲಾ ದಿಗ್ಗಜರುಗಳಲ್ಲಿ ಒಬ್ಬರಾದ ಖ್ಯಾತ ಕಲಾವಿದ ಎನ್.ಹನುಮಂತಯ್ಯ ಅವರ ಕಲಾಜೀವನವನ್ನು ಪರಿಚಯಿಸುವ ಕೃತಿಯಾಗಿದೆ. ಇದರಲ್ಲಿ ಪ್ರಮುಖವಾಗಿ ಅವರ ಬಾಲ್ಯ ಜೀವನ, ಮೈಸೂರು ಮಹಾರಾಜರ ಕೃಪಾ ಪೋಷಣೆ, ಮೈಸೂರು ಚಾಮರಾಜೇಂದ್ರ ತಾಂತ್ರಿಕ ಶಿಕ್ಷಣ ಸಂಸ್ಥೆಯಲ್ಲಿ ತೈಲ ಮತ್ತು ಜಲವರ್ಣಗಳಲ್ಲಿ ಪರಿಣಿತಿ ಪಡೆದ ರೀತಿಗಳ ಬಗ್ಗೆ ಹೇಳಿದೆ. ಅಂತೆಯೇ ಅವರ ಸಮಕಾಲೀನ ಕಲಾವಿದರುಗಳ ಕಲಾದೃಷ್ಟಿ, ಅದರೊಂದಿಗಿನ ಅನುಭವ, ಅಭಿಪ್ರಾಯ, ಪಾಶ್ಚಾತ್ಯ ಕಲೆಯ ಪ್ರಭಾವ, ಜೆ.ಜೆ.ಕಲಾಶಾಲೆಯ ವ್ಯಾಸಂಗ, ಖ್ಯಾತನಾಮರ ಸಮಕಾಲೀನ ಬದುಕುಗಳು ಇಲ್ಲಿ ಬಿಂಬಿತವಾಗಿವೆ. ಮೈಸೂರು ಸುತ್ತಲಿನ ಪರಿಸರವನ್ನೇ ವೈಭವೀಕರಿಸುತ್ತಿದ್ದ ಎಚ್.ಜೆ.ಪಾವಂಜೆ, ಟಂಕಸಾಲಿಯವರ ಮಾರ್ಗದರ್ಶನ ಪಡೆಯುತ್ತಿದ್ದರು. ಇವರ ಕಲಾಶೈಲಿ, ತಾಂತ್ರಿಕ ವಿಧಾನಗಳು ಆಕರ್ಷಿತವಾಗಿದ್ದವು. ಬೆಳಕಿನ ಬಗೆಗೆ ಇವರ ವಿಶಿಷ್ಟ ಕಲ್ಪನೆ–ಬಳಕೆ, ದೇಶ–ವಿದೇಶಗಳಲ್ಲಿ ಇವರ ಕಲಾಕೃತಿಗಳ ಸಂಗ್ರಹ, ಸ್ಥಳೀಯ ವಿಮರ್ಶಕರ ನಿಲುವು, ಸ್ಥಳೀಯ ಕಲಾವಿದರ ಬಗ್ಗೆ ಗಮನ ನೀಡುವಂತೆ ಮಾಡಿರುವ ಇವರ ಸಾಧನೆಗಳು, ಇವರಿಗೆ ಸಂದ ಪ್ರಶಸ್ತಿಗಳು, ಪ್ರೋತ್ಸಾಹಿಸಿದ ಹಿರಿಯರು, ಸಂಸ್ಥೆಗಳ ಹೆಸರುಗಳನ್ನು ಲೇಖಕರು ಉಲ್ಲೇಖಿಸಿದ್ದಾರೆ. ಹನುಮಯ್ಯನವರ ವರ್ಣಭರಿತ ಚಿತ್ರಕಲಾ ಕೃತಿಗಳನ್ನು ಅಚ್ಚು ಹಾಕಲಾಗಿದ್ದು, ಪುಸ್ತಕದ ಸೌಂದರ್ಯ ಹೆಚ್ಚಿಸಿದೆ.

### ೪.೭. ವೆಂಕಟಾಚಲಪತಿ

೨೦೧೪ರಲ್ಲಿ ಪ್ರಕಟಗೊಂಡ ಈ ಕೃತಿಯು ರಿಜಿಸ್ಟ್ರಾರ್, ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು ಇವರ ಸಂಪಾದಕತ್ವದಲ್ಲಿ ಹೊರಬಂದಿದೆ. ಪ್ರಸ್ತುತ ಕೃತಿಯಲ್ಲಿ ಲೇಖಕರು ಅವರ ಕಲಾ ಬದುಕಿನಲ್ಲಿ ಕಂಡುಕೊಂಡ ಹೊಸ ಹೊಸ ಸಂವೇದನೆಗಳಿಗೆ ಮೂಡಿಬಂದಿರುವ

# ಅಧ್ಯಾಯ ಐದು

## ತಾತ್ವಿಕ ದೃಶ್ಯಕಲಾ ಸಾಹಿತ್ಯ

೫.೧. ಮಧ್ಯಪ್ರದೇಶದ ಕಲೆ

೫.೨. ಪೋಟೋರಿಯಾಲಿಸಂ

೫.೩. ಕಲಾ ಸಂವೇದನೆಯ ಒಳನೋಟಗಳು

೫.೪. ಮುಖಗಳೊಂದಿಗೆ ಮುಖಾಮುಖಿ

೫.೫. ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ

೫.೬. ಇನ್‌ಸ್ಟಾಲೇಷನ್ ಕಲಾಪ್ರಪಂಚ

## ಅಧ್ಯಾಯ ಐದು

# ತಾತ್ವಿಕ ದೃಶ್ಯಕಲಾ ಸಾಹಿತ್ಯ

ಮಾನವನ ಹುಟ್ಟಿನೊಂದಿಗೆ ಕಲೆಗಳೂ ಹುಟ್ಟಿಕೊಂಡು ವಿಕಾಸಗೊಂಡಿರುತ್ತವೆ. ಕಾಲದ ಗತಿಯಲ್ಲಿ ಅನೇಕ ಬದಲಾವಣೆಯ ಮಜಲುಗಳನ್ನು ಕಾಣುತ್ತಾ ವಿವಿಧ ಕಲೆಗಳಾಗಿ ರೂಪುಗೊಂಡು ಸ್ವತಂತ್ರವಾಗಿ ವಿಕಾಸಗೊಂವು. ಪ್ರತಿಯೊಂದು ಪ್ರಕಾರದ ಕಲೆಯೂ ತನ್ನದೇ ಆದ ರೂಢಿ, ಪರಂಪರೆ, ಶೈಲಿ, ಸಿದ್ಧಾಂತಗಳನ್ನು ರೂಪಿಸಿಕೊಂಡು ವಿಶಿಷ್ಟವಾಗಿ ಪರಿಣಾಮಕಾರಿಯಾದ ಬೆಳವಣಿಗೆ ಕಂಡವು. ಇತರ ಲಲಿತ ಕಲೆಗಳಂತೆ ದೃಶ್ಯಕಲೆಗಳು ಕೂಡ ಅನೇಕ ಪ್ರಕಾರಗಳಲ್ಲಿ ತನ್ನ ವೈವಿಧ್ಯತೆಯನ್ನು ಮೆರೆದವು. ಚಿತ್ರವೇ ಇರಲಿ, ಶಿಲ್ಪವೇ ಇರಲಿ ಅದರ ಹಲವು ಉಪ ಪ್ರಕಾರಗಳೇ ಆಗಿರಲಿ; ಅದರ ರೂಪ, ಶೈಲಿ, ಆಶಯ, ಮಾಧ್ಯಮ ಹೇಗಿರಬೇಕು, ಯಾವುದಿರಬೇಕು, ಹೇಗಿದ್ದರೆ ಚೆನ್ನ ಅಥವಾ ಸೌಂದರ್ಯಾನುಭವಕಾರಿ ಎಂಬುದರ ಹಿನ್ನೆಲೆಯಲ್ಲಿ ಪ್ರತಿಯೊಂದು ದೃಶ್ಯಕಲಾ ಪ್ರಕಾರ ತನ್ನದೇ ತಾತ್ವಿಕ ನಿಲುವಗಳನ್ನು, ಸಿದ್ದಾಂತಗಳನ್ನು ರೂಢಿಸಿಕೊಂಡಿವೆ. ಇಂತಹ ಹಲವು ತತ್ವ ಸಿದ್ದಾಂತಗಳ ಹಿನ್ನೆಲೆಯಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಅವರು ಹಲವಾರು ಲೇಖನಗಳನ್ನು ಬರೆದಿರುವರು. ತಮ್ಮ ಸೃಜನಶೀಲ ಪ್ರತಿಭೆಯಿಂದ ಅನೇಕ ಹೊಸ ಆಯಾಮಗಳನ್ನು ದೃಶ್ಯಕಲೆಯ ತಾತ್ವಿಕ ಚೌಕಟ್ಟಿಗೆ ತರುವಲ್ಲಿ ವಿಶಿಷ್ಟವಾದ ಕೊಡುಗೆ ಅವರಿಂದ ದೃಶ್ಯಕಲಾ ಸಾಹಿತ್ಯ ಪ್ರಪಂಚಕ್ಕೆ ಸಂದಿರುವುದು ಗಮನಾರ್ಹ. ಅಂತಹ ಆಯ್ದ ಕೆಲವು ಬರಹಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೫.೧. ಮಧ್ಯಪ್ರದೇಶದ ಕಲೆ

ಪ್ರಸ್ತುತ 'ಮಧ್ಯಪ್ರದೇಶದ ಕಲೆ' ಎಂಬ ಕೃತಿಯು ಪಿ.ಆರ್.ತಿಪ್ಪೇಸ್ವಾಮಿಯವರು ಅಕಾಡೆಮಿ ಅಧ್ಯಕ್ಷರಾಗಿದ್ದಾಗ ಕರ್ನಾಟಕ ಲಲಿಕಲಾ ಅಕಾಡೆಮಿ ಬೆಂಗಳೂರು ಇವರ ನೆರವಿನಲ್ಲಿ ೧೯೭೫ರಲ್ಲಿ ಮುದ್ರಣಗೊಂಡಿದೆ. ೨೩ ಪುಟಗಳ ಈ ಕೃತಿಯು ಸೀಮಿತ ಕಾಲಾವಧಿಯಲ್ಲಿ ಲೇಖಕರು ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರವಾಸಾನುದಾನ ನೀಡಿ ಈ ಅಧ್ಯಯನ ಕೈಗೊಳ್ಳಲು ಅವಕಾಶ ಮಾಡಿಕೊಡಲಾಗಿದೆ ಎಂದು ಇಲ್ಲಿ ಲೇಖಕರು ನೆನಪಿಸುತ್ತಾರೆ.

ಮಧ್ಯಪ್ರದೇಶದಂಥ ವಿಶಿಷ್ಟ, ವಿಶಾಲ, ವೈವಿಧ್ಯಮಯ ರಾಜ್ಯದ ಕಲೆಯನ್ನು ಸಂಪೂರ್ಣವಾಗಿ ನೋಡುವುದಾಗಲೀ, ದಾಖಲಿಸುವುದಾಗಲೀ ಸಾಧ್ಯವಿಲ್ಲದ ಸಂದರ್ಭದಲ್ಲಿಯೂ ಹಲವು ಬಾರಿ ಹೋಗಿ ಅಲ್ಲಿನ ಕಲೆಯ ಒಳ ಹೊರಗುಗಳನ್ನು ಅನುಭವಿಸಿ ಬರೆದಿದ್ದಾರೆ. ಮುಖ್ಯವಾಗಿ ಕೆ.ವಿ.ಸುಬ್ರಹ್ಮಣ್ಯಂರ ಈ ಕೃತಿಯು ಪ್ರಥಮ ತಾತ್ವಿಕ ಕೃತಿಯಾಗಿರುವುದು ಒಂದು ವಿಶೇಷವಾಗಿದೆ. ಈವರೆಗೂ ಅವರು ಪತ್ರಿಕೆಗಳಿಗೆ, ನಿಯತಕಾಲಿಕೆಗಳಿಗೆ, ಲೇಖನಗಳ ಬರಹಗಳು ಕಳುಹಿಸುತ್ತಿದ್ದರು. ಅಲ್ಲದೇ ಅನೇಕರ ಕೃತಿ ವಿಮರ್ಶೆಗಳನ್ನು ಮಾಡಿದ್ದು ನಾವು ಕಾಣಬಹುದು.

ಮಧ್ಯಪ್ರದೇಶದ ಕಲೆ ತನ್ನದೇ ಆದ ಒಂದು ವೈಶಿಷ್ಟ್ಯತೆಯನ್ನು ಹೊಂದಿದ್ದು, ಪ್ರೋತ್ಸಾಹವನ್ನು ನೀಡಿಕೊಂಡು ಬಂದ ಆ ರಾಜ್ಯದ ಕಲೆಯನ್ನು ಸಂಕ್ಷಿಪ್ತವಾಗಿ ವಿಷಯದ ಒಟ್ಟು ಮೇಲ್ಮೈಯನ್ನು ಸ್ಪಷ್ಟವಾಗಿ ಪರಿಚಯಿಸಿದ್ದಾರೆ. ಈ ಕೃತಿಯ ಪ್ರಾರಂಭದಲ್ಲಿ ಮೊದಲಿಗೆ ಇತಿಹಾಸದ ಕಲೆಯನ್ನು ಪೂರಕವಾಗಿಟ್ಟುಕೊಂಡು ನಮಗೆ ಅರ್ಥವಾಗುವಂತೆ ಅಧ್ಯಯನದ ಸ್ವರೂಪ ತಿಳಿಸಲು ಪ್ರಯತ್ನಿಸಿದ್ದಾರೆ. ನಂತರದಲ್ಲಿ ಆಯಾ ವೈವಿಧ್ಯತೆಗೆ ತಕ್ಕಂತೆ ಪ್ರದೇಶದ ಹೆಸರನ್ನು ನಮೂದಿಸಿ ವಿಂಗಡನೆ ಮಾಡಿಕೊಂಡು ಅಲ್ಲಿನ ಕಲೆಯ ಬೆಳವಣಿಗೆ, ವಸ್ತು ವಿಷಯ, ಈಗ ಅವುಗಳಿಗೆ ನೀಡುತ್ತಿರುವ ಪ್ರೋತ್ಸಾಹ, ಅಲ್ಲಿನ ಪ್ರಸಿದ್ಧ ಕಲಾವಿದರು ಹೀಗೆ ವಿಷಯಗಳನ್ನು ಸರಳ ರೀತಿಯಲ್ಲಿ ದಾಖಲಿಸಿದ್ದಾರೆ.

ನಮ್ಮ ಕಲೆ ಎನ್ನುವುದು ಹರಪ್ಪಾ ಮೆಹೆಂಜೋದಾರೋ ನಾಗರಿಕತೆಯಿಂದ ಆರಂಭಗೊಂಡಿದ್ದು ನೂರಾರು ಇತಿಹಾಸ ಪೂರ್ವ ಚಿತ್ರ ನಿವೇಶನಗಳು ಶೋಧನೆಗೊಂಡಿದ್ದು, ಇದಕ್ಕೆ ಸಾಕ್ಷಿಯಂತಿವೆ. ಇಲ್ಲಿ ಹೇಳುವಂತೆ ಹೋಶಂಗಾವ್ ಜಿಲ್ಲೆಯ ಆದಂಗಡ, ಪ್ರಖ್ಯಾತ ಪಚ್‌ಮಡಿ ಗಿರಿಧಾಮದ ಬಳಿಯ ಮಹದೇವ ಗುಹೆಗಳಲ್ಲಿ ಭೀಂಬೆಟ್ಕಾದಷ್ಟೇ ಮಹತ್ವದ, ಸುಂದರವಾದ ಚಿತ್ರಗಳನ್ನು ಹೊಂದಿದ್ದು ಅಲ್ಲಿ ದಿನನಿತ್ಯದ ಚಟುವಟಿಕೆಗಳು ಸಾಂಸ್ಕೃತಿಕ ಆಚರಣೆಗಳು, ಬೇಟೆ, ಮನುಷ್ಯರ, ಪ್ರಾಣಿಗಳ, ಪಕ್ಷಿಗಳ ಚಿತ್ರಗಳನ್ನು ಕೆಂಪು ಹಾಗೂ ಬಿಳಿಯ ಬಣ್ಣಗಳಲ್ಲಿ ಕಾಣಬಹುದಾಗಿದೆ. ಬಸ್ತಾರ್ ಜಿಲ್ಲೆಯ ಬಸ್ತಾರ್, ಜಗದಲಪುರ, ಕೊಂಡಗಾಂವ್, ನಾರಾಯಣಪುರ, ರಾಯಗಡ್ ಜಿಲ್ಲೆಯ ಸನ್ನಾಊರಿ, ಚಿಂದ್ವಾರದಲ್ಲಿ ಇನ್ನೂ ಆದಿವಾಸಿ ಪಂಗಡಗಳಿದ್ದು ಈ ಆದಿವಾಸಿಗಳ ಚಿತ್ರ, ಶಿಲ್ಪ, ನೃತ್ಯ ವಾಸ್ತುಗಳೆಲ್ಲಾ ಇಲ್ಲಿ ವಿಶಿಷ್ಟವಾಗಿ ಇನ್ನು ಉಳಿದುಬಂದಿದೆ ಎಂದು ಲೇಖಕರು ವಿವರಿಸಿದ್ದಾರೆ.

ಕೊಂಡಗಾಂವ್‌ನ ಬಸ್ತಾರ್ ಶಿಲ್ಪ ಪರಿವಾರ ಎಂಬ ಉಪ ಶೀರ್ಷಿಕೆಯಡಿ ಇದೊಂದು ಸಂಘ ಸಂಸ್ಥೆಯಾಗಿದ್ದು, ಬಸ್ತಾರ್‌ನ ವಿವಿಧ ಕುಶಲ ಕಲಾ ಪ್ರಕಾರಗಳಿಗೆ ಕುಶಲ ಕಲಾಕಾರರಿಗೆ, ಪುರೋಭಿವೃದ್ಧಿಗೆ ಈ ಸಂಸ್ಥೆ ನೆರವಾಗುತ್ತಿದೆ. ವಿಶೇಷವೆಂಬಂತೆ ಟೆರೆಕೋಟಾ ಮಾಧ್ಯಮದಲ್ಲಿನ ಸೃಷ್ಟಿಗಳು ಲೋಹದ ಶಿಲ್ಪಗಳು ಸೃಷ್ಟಿಯಾಗಿವೆ. ಇನ್ನು ಹಚ್ಚೆ ಎಂಬುದು ವಿಶಿಷ್ಟ ಪರಂಪರೆಯೇ ಬೆಳೆದುಕೊಂಡು ಬಂದಿದೆ ಎನ್ನಲಾಗಿದೆ. ವಿಶೇಷವಾಗಿ ಇಲ್ಲಿ ತರಕಾರಿಯ ವರ್ಣದ್ರವ್ಯಗಳಿಂದ ಅಲಂಕರಿಸಿಕೊಂಡಿರುವುದನ್ನು ಉಲ್ಲೇಖಿಸುತ್ತಾರೆ.

ಶಿಲ್ಪಕಲೆಗೆ ಹೆಸರಾದ ಸಾಂಚಿಯ ವಾಸ್ತುಶಿಲ್ಪ–ಶಿಲ್ಪಕಲೆಗೆ ಹೆಸರುವಾಸಿಯಾಗಿದ್ದನ್ನು ಇಲ್ಲಿ ಪ್ರಮುಖವಾಗಿ ತಿಳಿಸಿದ್ದಾರೆ. ನಂತರ ಉದಯಗಿರಿ ಎಂಬ ಉಪ ಶೀರ್ಷಿಕೆಯಡಿ ಸಾಂಚಿಯಿಂದ ೧೩ಕಿಲೋ ಮೀಟರ್‌ಗಳ ದೂದಲ್ಲಿರುವ ಉದಯಗಿರಿ ಗುಹೆಗಳು ಕ್ರಿ.ಶ.೪ರಿಂದ ೫ನೆಯ ಶತಮಾನದವರೆಗೂ ರೂಪುಗೊಂಡಿದ್ದು ಸ್ವಲ್ಪ ನಸುಗೆಂಪು ಮರಳುಗಲ್ಲಿನಲ್ಲಿರುವ ಶಿಲ್ಪಗಳು ಅದ್ಭುತವಾಗಿವೆ ಎನ್ನಲಾಗಿದೆ. ಅಲ್ಲದೆ  ಕ್ರಿ.ಪೂ.೨ನೇ ಶತಮಾನದ ವಿಷ್ಣು ದೇವಾಲಯದಲ್ಲಿ ಶಿಲೆಯ ಮತ್ತು ಟೆರಾಕೋಟಾ ಶಿಲ್ಪಗಳಲ್ಲಿ ಸೂರ್ಯ, ಚಾಮುಂಡಿ ಮತ್ತು ಯಕ್ಷಿಯ ಶಿಲ್ಪಗಳು ಗಮನಾರ್ಹವಾಗಿದ್ದು ೧೧ನೇ ಶತಮಾನದ ಪಾರಮಾರರ ಶಿಲ್ಪಕಲೆಗೆ ಉತ್ತಮ ಉದಾಹರಣೆಯಂಥ ನೀಲಕಂಠೇಶ್ವರ ದೇವಾಲಯವನ್ನು ಇಲ್ಲಿ ಕಾಣಬಹುದೆನ್ನುತ್ತಾರೆ.

ಜಗತ್ತಿನಲ್ಲಿಯೇ ಸುಪ್ರಸಿದ್ಧ ದೇವಾಲಯಗಳಲ್ಲಿ ಒಂದಾಗಿರುವ ಖಜುರಾಹೋ ದೇವಾಲಯವು ಶಿಲ್ಪ ವೈವಿಧ್ಯತೆಯನ್ನು ಹೊಂದಿದ್ದಾಗಿದ್ದನ್ನು ಲೇಖಕರು ಈ ರೀತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ನೀಳವಾದ ಶಿಖರವನ್ನು ಎತ್ತಿ ಹಿಡಿಯುವಂತೆ ಸುತ್ತ ಬಿಚ್ಚಿಕೊಂಡ ಚಿಕ್ಕ ಚಿಕ್ಕ ಗೋಪುರುಗಳು ವಿಶಿಷ್ಟವಾಗಿ ಎದ್ದು ಕಾಣುತ್ತವೆ. ದೇವಾಲಯ ವಾಸ್ತುಶಿಲ್ಪ, ಮೂರ್ತಿಶಿಲ್ಪಗಳ ಕೌಶಲದಲ್ಲಿ ಶಿಲ್ಪಿಗಳ ಕೈಚಳಕ ಗಮನಿಸುವಂತಿದೆ. ಚೌಸಾತ್ ಯೋಗಿನಿ, ಬ್ರಹ್ಮ ಮತ್ತು ಮಹದೇವ ದೇವಾಲಯಗಳು ಗ್ರಾನೈಟ್ ಕಲ್ಲಿನವಾದರೆ, ಉಳಿದವು ಕಂದು, ನಸುಹಳದಿಯ ಮರಳುಗಲ್ಲಿನಲ್ಲಿ ಮೂಡಿ ಬಂದಂತಾಗಿದ್ದವು. ಈ ಶಿಲ್ಪಗಳ ವರ್ಣನೆ ಇಲ್ಲಿ ಅನಗತ್ಯವೆನ್ನುವಷ್ಟು ವಿಖ್ಯಾತ, ವಿಶ್ವನಾಥ, ಪಾರ್ಶ್ವನಾಥ, ವೈದ್ಯನಾಥ, ಜಗದಾಂಬಿ, ಚಿತ್ರಗುಪ್ತ, ವಾಮನ, ಆದಿನಾಥ, ಜವೇರಿ ಕಂಡಾರಿಯಾ ಮಹಾದೇವ ಮೊದಲಾದ ದೇವಾಲಯಗಳ ಅರ್ಧಮಂಟಪ, ಮಂಟಪ, ಮಹಾಮಂಟಪ, ಅಂತರಾಳ, ಗರ್ಭಗೃಹಗಳ ಒಳ–ಹೊರ ಭಾಗಗಳು ಹಲವು ಹತ್ತು ಬಾರಿ ನೋಡುವಂತೆ ನಮ್ಮನ್ನು ಸೆಳೆಯುವಂತಿವೆ ಎನ್ನಲಾಗಿದೆ.

ಹಾಗೆ ಜಗತಿಯ ಚೌಸಾತ್ ಯೋಗಿನಿ ದೇವಾಲಯದಲ್ಲಿಯೂ ೬೪ ಪುಟ್ಟ ಪುಟ್ಟ ಗರ್ಭಗೃಹಗಳಿದ್ದು, ವಿಷ್ಣುವಿನ ವರಾಹವತಾರದ ಕಲ್ಪನೆ, ಆಕರ್ಷಕವಾಗಿ ಕೆತ್ತಲ್ಪಟ್ಟಿದ್ದು ದೇಹದ ಮೇಲೆಲ್ಲಾ ವೈಷ್ಣವ ದೇವ ದೇವತೆಗಳನ್ನು ಕುಶಲತೆಯಿಂದ ಕೊರೆಯಲಾಗಿದೆ ಎನ್ನಲಾಗಿದೆ. ಒಂದು ಪ್ರಮುಖ ವಿಷಯವೆಂದರೆ ಉದಯಗಿರಿಯಲ್ಲಿ ಉಬ್ಬು ಶಿಲ್ಪವಾದರೆ, ಇವು ನೀಳಕಾಯದ ಶೈಲಿಯಂತಿವೆ ಎನ್ನಲಾಗಿದೆ.

ಓರ್ಛಾ ಎಂಬ ಪ್ರದೇಶದಲ್ಲಿಯೂ ಶಿಲ್ಪ ಸೌಂದರ್ಯಗಳು ಕಂಡುಬಂದಿದ್ದು, ಮಧ್ಯ ಕಾಲದನಂತರದ ಕಲಾಪರಂಪರೆಯ ಆಸ್ತಿ ಎನ್ನುತ್ತಾರೆ. ಇಲ್ಲಿ ಕ್ರಿ.ಶ.೧೬ ಮತ್ತು ೧೭ನೆಯ ಶತಮಾನದ ಅರಮನೆಗಳನ್ನು ದೇವಾಲಯಗಳನ್ನು ಇಂದಿಗೂ ಕಾಣಬರುತ್ತವೆ. ಇವು ವಿದೇಶಿ ಪ್ರವಾಸಿಗರಿಗೆ ಅತ್ಯಂತ ಆಕರ್ಷಕ ತಾಣವಾದ ಬೆಟ್ಟ, ನದಿಯ ದಂಡೆಯಲ್ಲಿದೆ. ವಿಶೇಷವಾಗಿ ಕಲ್ಲು, ಇಟ್ಟಿಗೆ, ಗಾರೆಗಳಿಂದ ಆಕಾಶವನ್ನು ಮುಟ್ಟುವ ಉದ್ದೇಶ ಹೊಂದಿರುವಂತೆ ಕಾಣುವ

ಬೃಹತ್ ಚತುರ್ ಬುಜ್ ದೇವಾಲಯ ಬುಂದೇಲ್ ಶೈಲಿಯ ಭಿತ್ತಿ ಚಿತ್ರಗಳಿಂದ ತುಂಬಿಕೊಂಡಿದ್ದು ರಾಮಾಯಣ ಮತ್ತು ಅಂದಿನ ಸಮಕಾಲೀನ ಸಾಮಾಜಿಕ ವಸ್ತು ವಿಶೇಷಗಳು ದಶಾವತಾರ ಚಿತ್ರಗಳು ಕಂಡುಬರುತ್ತಿದ್ದು ನೋಡುಗರ ಮನಸ್ಸು ಕೇಂದ್ರೀಕರಿಸಿ ತಲ್ಲೀನತೆಯಲ್ಲಿ ಮುಳುಗಿಸುವಂತಿವೆ ಎಂದು ಲೇಖಕರು ಹೇಳುವಾಗ ಉತ್ಪ್ರೇಕ್ಷೆ ಎನ್ನಿಸಿದರೂ ಅಲ್ಲಿನ ಇರುವಿಕೆಗೆ ಈ ಮಾತುಗಳು ಸಹಜವೇ ಸರಿ.

ಒಟ್ಟಾರೆ ಈ ಚಿತ್ರಶಿಲ್ಪ ವಾಸ್ತುಶಿಲ್ಪ, ಸ್ಮಾರಕ ಸಮಾದಿಗಳ ಉಳುವಿಕೆಗಳು, ಜಗತ್‌ಪ್ರಸಿದ್ಧ ಭೀಂಬೆಟ್ಕಾ ಶಿಲಾಶ್ರಯ ಚಿತ್ರಗಳ ಬಗ್ಗೆ ಕೇಳಿದರೇ ನೋಡಬೇಕೆಂಬ ಉತ್ಸಾಹ ವೀಕ್ಷಕನ ಚಿತ್ತವು ಒಂದು ವಿಶಿಷ್ಟ ಅನುಭವಲೋಕಕ್ಕೆ ಕರೆದೊಯ್ಯುವಂತೆ ಮಾಡುತ್ತದೆ. ಮುಖ್ಯವಾಗಿ ಇಂಥ ಸ್ಥಳಗಳ ಕುರಿತಾಗಿ ನಮ್ಮ ಇತ್ತೀಚಿನ ಯುವ ಕಲಾವಿದರಿಗೆ ಅನುಭವವಾಗಲೇ ಬೇಕಾಗಿದ್ದು, ಇದೊಂದು ಅಧ್ಯಯನಯೋಗ್ಯ ಕೇಂದ್ರವಾಗಿದೆ ಎನ್ನಬಹುದು.

ಈ ಮೇಲಿನ ಎಲ್ಲ ವಿಷಯಕ್ಕೆ ಒತ್ತು ನೀಡಿದ್ದರ ಜೊತೆಗೆ ಲೇಖಕರು ಆ ರಾಜ್ಯದ ಅಂದಿನ ಸಮಕಾಲೀನ ಇಬ್ಬರು ಜಗತ್ಪ್ರಸಿದ್ಧ ಕಲಾವಿದರನ್ನು ಬೇಂದ್ರೆ ಮತ್ತು ರಘುರಾರನ್ನು ಕುರಿತಾಗಿಯೂ ಇಲ್ಲಿ ಪರಿಚಯಿಸಿರುವರು. ಭಾರತ್ ಭವನ ಎಂಬ ಕಟ್ಟಡ ಇಂತಹ ಅನೇಕ ಕಲಾವಿದರ ಉತ್ಸಾಹಕ್ಕೆ ಅದ್ಭುತವೆನ್ನುವಷ್ಟು ಸ್ಫೂರ್ತಿ ನೀಡಿದೆ. ಇಲ್ಲಿ ರಾಷ್ಟ್ರೀಯ, ಅಂತರಾಷ್ಟ್ರೀಯ ಮಟ್ಟದ ಕಲಾ ಪ್ರದರ್ಶನಗಳನ್ನು ವ್ಯವಸ್ಥೆ ಮಾಡುತ್ತಿದ್ದು, ಸಾಹಿತ್ಯ, ಪ್ರದರ್ಶನ ಮತ್ತು ದೃಶ್ಯಕಲೆಗಳ ಈ ಕೇಂದ್ರವನ್ನು ಸಮಕಾಲೀನ ವಾಸ್ತುಶಿಲ್ಪಿ ಚಾರ್ಲ್ಸ್ ಕೋರಿಯ ವಿನ್ಯಾಸಗೊಳಿಸಿದ್ದಾರೆ. ಒಟ್ಟಾರೆ ಈ ರಾಜ್ಯ ನಮ್ಮ ರಾಷ್ಟ್ರದ ಒಂದು ಅಪರೂಪದ ಕಲಾನಿಧಿ ಎಂದು ಲೇಖಕರು ಇಲ್ಲಿ ಸ್ಪಷ್ಟಪಡಿಸುತ್ತಾರೆ.

**೫.೨. ಪೋಟೋರಿಯಲಿಸಂ**

"ಫೋಟೋರಿಯಲಿಸಂ" ಎಂಬ ಕೃತಿಯು ಸಿ.ಚಂದ್ರಶೇಖರ ಅವರು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಎಂಬ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರಬಂದಿದ್ದು, ಅವುಗಳಲ್ಲಿ ಒಂದಾದ ಈ ಕೃತಿಯು ಸಮಕಾಲೀನ ಸಂದರ್ಭದಲ್ಲಿ ಕಲೆಯಲ್ಲಾದ ಬದಲಾವಣೆಗಳಿಂದ ಕಲಾಪಂಥಗಳು ಹುಟ್ಟಿಕೊಂಡಿದ್ದು, ಇತ್ತೀಚಿನ ದಿನಮಾನಗಳಲ್ಲಿ ಕಲಾವಿದರು ತಮ್ಮ ಅಭಿವ್ಯಕ್ತಿಯನ್ನು ಒಂದೊಂದು ರೂಪ, ಶೈಲಿಯಲ್ಲಿ ಗುರುತಿಸಿಕೊಳ್ಳುತ್ತಿರುವುದು ಇಂಥ ಕಲಾ ಪಂಥಗಳ ಹುಟ್ಟಿಗೆ ಕಾರಣವಾಗಿದೆ.

ಪ್ರಸ್ತುತ ಕೃತಿಯು ೧೯೯೫ರಲ್ಲಿ ಪ್ರಥಮ ಮುದ್ರಣಗೊಂಡಿದ್ದು ಒಟ್ಟು ೧೨ ಪುಟಗಳನ್ನು ಹೊಂದಿದ್ದು ಅತ್ಯಂತ ಕಡಿಮೆ ಅವಧಿಯಲ್ಲಿ ಹೊರತರಲಾಗಿದೆ ಎಂಬ ಅಭಿಪ್ರಾಯ ಇಲ್ಲಿ

ವ್ಯಕ್ತಪಡಿಸಿದ್ದಾರೆ. ಕಲಾವಿದನೊಬ್ಬನು ತಾನು ಸೃಷ್ಟಿಸುವಾಗ ಹಲವು ರೀತಿಗಳನ್ನು ಅನುಸರಿಸುತ್ತಾನೆ. ಈ ಹಾದಿಯಲ್ಲಿ ಹಿಂದಿನಿಂದ ಬಳಸಲ್ಪಟ್ಟ ತಂತ್ರ, ಶೈಲಿಗಳನ್ನು ತನ್ನ ಅಭಿವ್ಯಕ್ತಿಯ ನೆರವಿಗೆ ಪಡೆಯಬಹುದು. ಹೀಗಾಗಿಯೇ ಇತಿಹಾಸಪೂರ್ವ ಕಾಲದಿಂದ ಇಂದಿನವರೆಗೆ ಕಲಾವಿದರು ತಮ್ಮ ಚಿತ್ರ, ಶಿಲ್ಪ ಹಾಗೂ ಪ್ರಿಂಟ್ ಮಾಧ್ಯಮಗಳಲ್ಲಿ ಹಲವಾರು ತಂತ್ರ ಹಾಗೂ ಶೈಲಿಗಳನ್ನು ಬಳಸಿರಿವುದುನ್ನು ಕಾಣುತ್ತೇವೆ. ಪೋಟೋರಿಯಲಿಸಂ ಅಂತ ಶೈಲಿಗಳಲ್ಲಿ ಒಂದಾಗಿದ್ದು ಎಂದು ಅದರ ವ್ಯಾಖ್ಯಾನವನ್ನು ನೀಡುತ್ತಾರೆ. ಮುಂದೆ ಬೆಳವಣಿಗೆ, ಸ್ವರೂಪ, ಕಲಾವಿದರು ಇದರಲ್ಲಿ ತೊಡಗಿಸಿಕೊಂಡಿರುವ ರೀತಿಯನ್ನು ಪರಿಚಯಿಸಿದ್ದಾರೆ. ಪಾಪ್‌ಕಲೆಯ ಉತ್ತರಾಧಿಕಾರಿಯಂತೆ, ಬದುಕನ್ನು ಪೂರ್ಣ ಬೆತ್ತಲುಗೊಳಿಸುವಂಥ ನಿಷ್ಕೃಷ್ಟ ವಿವರಗಳೊಂದಿಗೆ ಸುಮಾರು ೧೯೬೦-೧೯೭೦ರ ನಡುವೆ ಹಲವು ಕಲಾವಿದರ ಕುತೂಹಲದ ಮೇರೆಗೆ ಹುಟ್ಟಿಕೊಂಡಿದ್ದಾಗಿದೆ ಎನ್ನುತ್ತಾರೆ.

೧೯ನೇ ಶತಮಾನದಲ್ಲಿ ಛಾಯಾಚಿತ್ರ ಗ್ರಹಣ ಉತ್ತಮಪಡಿಸಲ್ಪಟ್ಟು ಕ್ಯಾಮೆರಾ ಬಳಕೆ ಹೆಚ್ಚಾಯಿತು ಅದೇ ಕಾಲಕ್ಕೆ ಇಂದಿನ ಕಲಾಶಾಲೆಗಳಲ್ಲಿ ಅತ್ಯುತ್ತಮ ನೈಜ ಚಿತ್ರಕಾರರನ್ನು ಮತ್ತು ಅದರಿಂದ ಸೃಷ್ಟಿಯಾಗಿದ್ದ ಚಿತ್ರ ಮತ್ತು ಶಿಲ್ಪಗಳನ್ನು ಕಾಣಬಹುದು. ನಂತರದ ದಶಕಗಳಲ್ಲಿ ಅದನ್ನು ಅನುಸರಿಸುವ ಹಲವು ಹೊಸ ದೃಷ್ಟಿಗಳ ಕಲಾವಿದರು ಮತ್ತು ಚಳುವಳಿಗಳು ನೈಜಶೈಲಿಯ ಗಡಿಗಳನ್ನು ಮತ್ತಷ್ಟು ದೂರತಳ್ಳಿ ಸ್ವಚ್ಛಂದವಾಗಿ ಉಳಿದುಕೊಂಡು ಅವರ ಬಹುಮುಖ್ಯ ವಸ್ತು ವಿಷಯ ಛಾಯಾಚಿತ್ರವೇ ಆಯಿತು ಎಂದು ಲೇಖಕರು ಅಭಿಪ್ರಾಯಪಡುತ್ತಾರೆ.

ನಂತರದಲ್ಲಿ ಈ ಪಂಥವನ್ನು ಅನುಸರಿಸಿ ಕೆಲವು ಕಲಾವಿದರು ತಮ್ಮ ಅಭಿವ್ಯಕ್ತಿಯನ್ನು ಬಳಸಿಕೊಳ್ಳಲು ಪ್ರಾರಂಭಿಸಿದರು. ಮೊದಲೇ ಹೇಳಿರುವಂತೆ ಈ ಪಂಥದ ಕಲಾವಿದರು ಸ್ವತಂತ್ರ ರಾಗಿ ಇರಲು ಇಚ್ಛಿಸಿದ್ದರಿಂದ ಆ ಪದದ ಅರ್ಥವನ್ನು ಖಚಿತಪಡಿಸಿಕೊಳ್ಳಲಾಗದಿದ್ದಾಗ ಲೊಹಿಸ್ ಎ.ಮೈಸೆಲ್ ಎಂಬ ಕಲಾವಿದ ಈ ಪದ ಪುಂಜವನ್ನು ಬಳಸಿ ಪ್ರಚಾರ ನೀಡಿದ ನಂತರ ಪೋಟೋರಿಯಲಿಸ್ಟ ಅಥವಾ ಫೋಟೋ ರಿಯಲಿಸಂ ಎಂದರೆ ಏನು? ಎಂದು ತಮ್ಮಲ್ಲೇ ಪ್ರಶ್ನಿಸಿಕೊಳ್ಳುವಂತೆ ಮಾಡಲಾಗಿತ್ತು. ಆಗ ಅವರು ಕಂಡುಕೊಂಡ ಉತ್ತರ ಸ್ಕೇಚ್ ಪ್ಯಾಡಗೆ ಬದಲಾಗಿ ಕ್ಯಾಮೆರಾ ಬಳಸುವ ಗ್ರೀಡ್ ಅಥವಾ ಪ್ರೋಜೆಕ್ಟರ್ ನೆರವಿನಿಂದ ವಿವಿಧ ತಂತ್ರ ಮಾಧ್ಯಮಗಳಿಂದ ಚಿತ್ರಿಸುವ ಅವಕಾಶಕ್ಕೆ ರೂಪಗಳನ್ನು ವರ್ಗಾಯಿಸುವ ಮತ್ತು ಚಿತ್ರವನ್ನು ಫೋಟೋಗ್ರಾಫ್‌ನಂತೆ ಚಿತ್ರಿಸುವ ಸಾಮರ್ಥ್ಯವಿರುವುದನ್ನು ಫೋಟರಿಯಾಲಿಸ್ಟ್ ಎಂದು ಕರೆಯಬಹುದೆಂದುಕೊಂಡಿದ್ದರು ಎಂದು ಪ್ರಾರಂಭದ ಇತಿಹಾಸವು ಅಸ್ಪಷ್ಟತೆಯಿಂದ ಕೂಡಿತ್ತು ಎನ್ನಲಾಗಿದೆ.

ನಂತರ ೧೯೬೯ರಲ್ಲಿ ಫೋಟೋರಿಯಲಿಸಂಗೆ ಲೂಯಿಸ್ ಕೆ.ಮೈಸೆಲ್ ಐದು ಅಂಶಗಳ ಸ್ಪಷ್ಟ ವಿವರಣೆಯ್ನನು ಲೇಖಕರು ಇಲ್ಲಿ ಕೊಟ್ಟಿದ್ದಾರೆ. ಈ ಹಾದಿಯಲ್ಲಿ ಪಾಶ್ಚಿಮಾತ್ಯ ದೇಶಗಳಲ್ಲಿನ ಕಲಾವಿದರು ಅನುಸರಿಸಿರುವ ಕೆಲವು ಕಲಾವಿದರ ಕಲಾಕೃತಿಗಳ ವಿವರಣೆಯೊಂದಿಗೆ ಪ್ರದರ್ಶನದ

ವಿವರಣೆಗಳನ್ನು ನೀಡುತ್ತಾ ಹೋಗಿದ್ದಾರೆ. ಈ ಪಂಥದ ಕಲಾವಿದರ(೧೯೭೩)ರಲ್ಲಿನ ಸೃಷ್ಟಿಗಳು ಕ್ಯಾನ್ವಾಸ್ ಅವಕಾಶದಲ್ಲಿ ಅಕ್ರೆಲಿಕ್ ಅಥವಾ ತೈಲವರ್ಣಗಳಲ್ಲಿದ್ದು ಅಲ್ಲದೆ ಇತರ ಮಾಧ್ಯಮಗಳಲ್ಲಿ ಇಲ್ಲವೆಂಬಂತೆ ತೋರಿಬರುತ್ತವೆ ಎನ್ನಲಾಗಿದೆ. ಇದಕ್ಕೆ ವಿರುದ್ಧವೆಂಬಂತೆ ೧೯೭೬ರಲ್ಲಿ ಜಲವರ್ಣ ಚಿತ್ರಗಳನ್ನು ಮತ್ತು ರೇಖಾಚಿತ್ರಗಳನ್ನು ಪ್ರಿಂಟ್, ಮಾಧ್ಯಮವನ್ನು ನೆರವಾಗಿಸಿಕೊಂಡು ಕಲಾಕೃತಿಗಳನ್ನು ರಚನೆ ಮಾಡಿದ್ದರು. ಕೆಲವರು ಲಿಥೋ, ಸ್ಕ್ರೀನ್ ಪ್ರಿಂಟ್ ಹಾಗೂ ಎಚ್ಚಿಂಗ ತಂತ್ರಗಳಲ್ಲಿ ಫೋಟೋ ರಿಯಲಿಸಂ ಅನ್ನು ಪ್ರಯೋಗಿಸಿದ್ದರು. ಆದರೆ ಪ್ರಾರಂಭದಲ್ಲಿ ಮುಖ್ಯವಾಗಿ ಇವರು ತಮ್ಮ ಸ್ವಭಾವ ಚಿತ್ರಣದಲ್ಲಿ ಹೆಚ್ಚಿನ ಆಕರ್ಷಣೆ ಕಂಡುಕೊಂಡಿದ್ದರು. ಹಾಗೇ ಮಿಶ್ರಮಾಧ್ಯಮವಾದ ಪ್ಲಾಸ್ಟಿಕ್, ಪಾಲಿಯೆಸ್ಟರ್, ರೆಸೀನ್ ಮತ್ತು ಪೈಬರ್ ಗಾಜು ಇತ್ಯಾದಿಗಳು ಈ ಕಲಾವಿದರ ಕೈಗೆ ಸಿಕ್ಕು ಹೊಸ ರೂಪ ಪಡೆದುಕೊಂಡವು. ಉದಾಹರಣೆಯೆಂಬಂತೆ 'ಪ್ಲೋರಿಡಾ ಶಾಪರ್' ಶಿಲ್ಪಿ ಹ್ಯಾನ್‌ಸಾನ್ ಪಾಲಿಕ್ರೂಮ್ ರಚಿಸಲಾಗಿದ್ದು ಇತ್ಯಾದಿಗಳು ಇಲ್ಲಿ ಉಲ್ಲೇಖಿಸಿದ್ದಾರೆ.

ಒಟ್ಟಾರೆ ಈ ಕಲಾವಿದರಿಗೆ ಯಾವುದೇ ರೀತಿಯ ಕಟ್ಟಪ್ಪಣೆಗಳು ಇಲ್ಲ ನೈಜತೆಯ ಹೊಸದೃಷ್ಟಿಗೆ ನಗ್ನ ಚಿತ್ರಗಳ ಅಧ್ಯಯನ ಆರಂಭಿಸಿಕೊಂಡಿದ್ದರು ಎನ್ನುವುದಕ್ಕೆ ಭಾರತೀಯ ಕಲಾವಿದರಾದ ಬಿಕಾಶ್ ಬಟ್ಟಾಚಾರ್ಯ, ಕೆ.ಟಿ.ಶಿಪ್ರಸಾದ್‌ರ ಕೆಲವು ಪ್ರಿಂಟ್ ಮಾಧ್ಯಮದಲ್ಲಿ ಚಿತ್ರ ಕೃತಿಗಳಲ್ಲಿ ಕಂಡುಬಂದಿದ್ದು ಇಂತಹ ಪಂಥಗಳು ಇಂದಿಗೂ ಚಿಕ್ಕ ರೂಪವಾಗಿದ್ದರು, ವಿಷಯದ ಸಮಗ್ರತೆಯನ್ನು ಅತ್ಯಂತ ಸರಳ ಹಾಗೂ ಅರ್ಥವಾಗುವ ನಿಟ್ಟಿನಲ್ಲಿ ಲೇಖಕರು ನಮ್ಮ ಮುಂದಿಟ್ಟಿರುವುದು ಶ್ಲಾಘನೀಯವಾಗಿದೆ. ಮುಖ್ಯವಾದ ಅಂಶವೆಂದರೆ ಕಲಾವಿದ್ಯಾರ್ಥಿಗಳಿಗೆ, ಕಲಾವಿದರಿಗೆ ಒಂದು ಉತ್ತಮ ಮಾದರಿಯ ಕೃತಿಯಾಗಿದೆ ಎನ್ನಬಹುದು.

**೫.೩. ಕಲಾ ಸಂವೇದನೆಯ ಒಳನೋಟಗಳು**

ಪ್ರಸ್ತುತ ಕೃತಿ 'ಕಲಾ ಸಂವೇದನೆಯ ಒಳನೋಟಗಳು' ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ೧೯೯೭ರಲ್ಲಿ ಮುದ್ರಣಗೊಂಡಿದೆ. ಕೆ.ವಿ.ಸುಬ್ರಹ್ಮಣ್ಯಂ ಅವರು ಒಬ್ಬರೇ ವಿವಿಧ ಸಂದರ್ಭದಲ್ಲಿ ಅವರ ಚಿಂತನೆಗಳನ್ನು ಅಭಿವ್ಯಕ್ತಪಡಿಸಿರುವುದನ್ನು ಇಲ್ಲಿ ಒಟ್ಟುಗೂಡಿಸಿ ಕಲಾಸಕ್ತರಿಗೆ, ಕಲಾ ವಿದ್ಯಾರ್ಥಿಗಳೀಗೆ ಈ ವಿಷಯಗಳ ಬಗ್ಗೆ ಮುಕ್ತ ಚರ್ಚೆ ನಡೆಯಬೇಕೆಂಬ ನೈಜ ಉದ್ದೇಶದಡಿಯಲ್ಲಿ ಈ ಕೃತಿಯನ್ನು ಹೊರತರಲಾಗಿದ್ದು ಇದೊಂದು ಕಲಾಸಾಹಿತ್ಯ ಕ್ಷೇತ್ರಕ್ಕೆ ಒಂದು ಅಮೂಲ್ಯ ಕೊಡುಗೆ ಎನ್ನಬಹುದು.

ಈ ಕೃತಿಯಲ್ಲಿ ಕಲೆಯ ಕುರಿತು ಒಟ್ಟು ೧೮ ಕಲಾ ಬರಹಗಳನ್ನು ಹೊಂದಿದ್ದು, ಅವು 'ರಾಜಾರವಿವರ್ಮ ಮತ್ತು ಭಾರತೀಯ ಕಲೆ', 'ಕನ್ನಡ ಕಲಾಸಾಹಿತ್ಯ: ಒಂದು ಪಕ್ಷಿನೋಟ', 'ಕಲಾಸೃಷ್ಟಿ: ಬದಲಾದ ಆಶಯಗಳು', 'ಚಿತ್ರಕಲೆಯಲ್ಲಿ ಸಮಕಾಲೀನ ಪ್ರಸ್ತುತತೆ', 'ಕಲಾಸೃಷ್ಟಿ: ಒಂದು ಟಿಪ್ಪಣಿ', 'ಕಲೆ ಮತ್ತು ಕಲಿಕೆ', ಕರ್ನಾಟಕದ ಕಲಾವಿದರು: ಸಂವೇದನೆಯ ಹೊಳಹುಗಳು',

'ಭಾರತೀಯ ಚಿತ್ರ ಮತ್ತು ಶಿಲ್ಪಕಲೆಗಳಲ್ಲಿ ಪಾಶ್ಚಾತ್ಯ ಪ್ರಭಾವ', 'ಸ್ವಚ್ಛಂದ ಕಾವ್ಯದೊಂದಿಗೆ ಹರಿದ ಸ್ವಚ್ಛಂದ ರೇಖೆಗಳು', 'ಅಭಿವ್ಯಕ್ತಿಯ ಮಾಧ್ಯಮವಾಗಿ ಭೂಮಿ', 'ಸಮಕಾಲೀನ ಸಂಬಂಧಗಳ ರೇಖಾ ಗ್ರಹಿಕೆಗಳು', 'ಆರ್.ಎಂ.ಹಡಪದರ ಶಿಲ್ಪ ಮತ್ತು ಪ್ರಿಂಟ್‌ಗಳು: ಕೆಲವು ಟಿಪ್ಪಣಿ', 'ಜಾಮಿನಿರಾಯ್: ಕಲೆಯಲ್ಲಿ ಮಣ್ಣಿನ ವಾಸನೆಯ ಸೊಬಗು', 'ಎಂ.ಟಿ.ವಿ: ಅಚಾರ್ಯರ ಅಭಿವ್ಯಕ್ತಿ', 'ಜಿ.ಎಸ್.ಶೆಣೈ ಕಲಾಕೃತಿಗಳು: ಕೆಲವು ಒಳನೋಟಗಳು', 'ಕಲೆ ಮತ್ತು ಸಾಹಿತ್ಯ', 'ಯುಸೂಫ್ ಅರಕ್ಕಲ್: ನಿಲ್ಲದ ಅಭಿವ್ಯಕ್ತಿಯ ಅನ್ವೇಷಣೆಯತ್ತ', 'ಕೆ.ಟಿ.ಶಿವಪ್ರಸಾದ್: ಜೀವನ ಸೌಂದರ್ಯದ ಮಣ್ಣಿನ ವಾಸನೆ', 'ಕರ್ನಾಟಕದಲ್ಲಿ ಪ್ರಿಂಟ್ ಮಾಧ್ಯಮ' ಎಂಬ ಲೇಖನಗಳಾಗಿವೆ. ಈ ಪ್ರತಿಯೊಂದು ಲೇಖನದಲ್ಲಿ ಉಪಯುಕ್ತವಾದ ವಿಷಯಗಳನ್ನು ಚರ್ಚಿಸಲಾಗಿದೆ. ಕೆಲವು ಕಲೆಯ ಅಭಿವ್ಯಕ್ತಿ ಕುರಿತಂತೆ ಬರಹಗಳಿದ್ದರೆ, ಮತ್ತೆ ಕೆಲವು ಕಲಾವಿದರ ಜೀವನ ಮತ್ತು ಅವರ ಕಲಾಬದುಕು, ಕಲಾಕೃತಿಗಳ ವೈಶಿಷ್ಟ್ಯತೆ, ರೇಖೆ, ಬಣ್ಣ, ಮೈವಳಿಕೆ, ವರ್ಣ ಸಂಯೋಜನೆ ಇತ್ಯಾದಿ ಮಾಧ್ಯಮಗಳನ್ನು ದುಡಿಸಿಕೊಂಡ ಅಂಶಗಳನ್ನು ಸೀಮಿತ ಪದಗಳಿಂದ ವಿವರಣೆಯನ್ನು ನೀಡಲಾಗಿದೆ. ಪ್ರತಿಯೊಂದು ಲೇಖನಕ್ಕೂ ತನ್ನದೇ ಆದ ಪೂರ್ವ ಪೀಠಿಕೆಯ ಅಂಶವನ್ನು ಲೇಖಕರು ನೀಡಿರುವುದು ಒಂದು ವಿಶೇಷವೇ ಸರಿ.

ನಮ್ಮ ಕಲಾವಿದರ ಕೃತಿಗಳು ನ್ಯೂಯಾರ್ಕ್, ಪ್ಯಾರಿಸ್, ಲಂಡನ್, ಜರ್ಮನಿಯ ಕಲೋನ್, ಟೋಕಿಯೋಗಳಲ್ಲಿ ಕಾಲಕಾಲಕ್ಕೆ ಪ್ರದರ್ಶಿತವಾಗುತ್ತಿದ್ದು ಸದ್‌ಬಿ, ಕ್ರಿಸ್ಟೀಸ್ ಕಲಾ ಹರಾಜುಗಳಿಗೂ ನಮ್ಮವರ ಕಲಾಕೃತಿಗಳು ಆಹ್ವಾನಿಸಲ್ಪಡುತ್ತಿವೆ. ವೆಂಕಟಪ್ಪ ಹೆಬ್ಬಾರ್, ರಾಜಾರವಿವರ್ಮನನ್ನು ಕಂಡ ನಮ್ಮ ಕಲಾರಂಗವು ಪಶ್ಚಿಮದ ಕಲಾ ಕೇಂದ್ರಗಳಲ್ಲಿ ಕಲಿತ ಕೆಲವರು ಅಲ್ಲಿ ಸುತ್ತಾಡಿ ಬಂದಿರುವ ಹಲವರು ನಮ್ಮ ನಡುವೆ ಸೃಷ್ಟಿಸುತ್ತಿರುವುದನ್ನು ಕಾಣುತ್ತೇವೆ. ಇಂತಹ ಹತ್ತು ಹಲವು, ಮಾಧ್ಯಮ ಶೈಲಿಗಳನ್ನು ತಮ್ಮದೇ ಆದ ರೀತಿಯಲ್ಲಿ ದುಡಿಸಿಕೊಂಡಿರುವ ವಿವಿಧ ಸಂವೇದನೆಗಳ ನೂರಾರು ಕಲಾವಿದರು ಇಂದು ಸಮಕಾಲೀನ ಪ್ರಜ್ಞೆಯಿಂದ ಅಭಿವ್ಯಕ್ತಿಸುತ್ತಿದ್ದಾರೆ. ಇಂತಹ ವಿಶಿಷ್ಟ ಸಂವೇದನೆಗಳ ಕುರಿತು ಲೇಖಕರು ಇಲ್ಲಿ ಪರಿಚಯಿಸಿಕೊಟ್ಟಿದ್ದಾರೆ.

**೫.೪. ಮುಖಗಳೊಂದಿಗೆ ಮುಖಾಮುಖಿ**

ಈ ಕೃತಿಯು ೨೦೦೪ರಲ್ಲಿ ಕರ್ನಾಟಕ ಲಲತಕಲಾ ಅಕಾಡೆಮಿಯಿಂದ ಪ್ರಕಟಗೊಂಡಿದ್ದು, ೯೬ ಪುಟಗಳನ್ನು ಹೊಂದಿದೆ. ಪ್ರಸ್ತುತ ಕೃತಿಯಲ್ಲಿ ಭಾವಚಿತ್ರ ಪರಂಪರೆಯ ಇತಿಹಾಸ ಪೂರ್ವದಿಂದ ಸಮಕಾಲೀನ ಸಂದರ್ಭದವರೆಗೆ ಬೆಳೆದು ಬಂದ ರೀತಿಯನ್ನು ಲೇಖಕರು ಚರ್ಚಿಸಿದ್ದಾರೆ.

ಲೇಖಕರು ಭಾರತದ ಬಹುತೇಕ ಇತಿಹಾಸಪೂರ್ವ ಶಿಲಾಶ್ರಯ, ಗುಹೆಗಳ ಚಿತ್ರಕಲೆಯನ್ನು ಗುಹಾಲಯ, ದೇವಾಲಯ, ಅರಮನೆಗಳ ಭಿತ್ತಿ ಚಿತ್ರಗಳನ್ನು ನೋಡಿ ಬಂದಿರುವ ಅನುಭವದಿಂದಾಗಿ

ಈ ಕೃತಿಯ ರಚನೆಗೆ ನೆರವಾಗಿದೆ ಎನ್ನುವ ಲೇಖಕರು ಮುಂದುವರೆದು ಭಾವಚಿತ್ರಗಳನ್ನು ಏಕೆ ತೂಗುಹಾಕುತ್ತೇವೆ? ಈ ಭಾವ ಚಿತ್ರರಚನೆಯ ಪ್ರಕಾರಕ್ಕೆ ಪರಂಪರೆಗೆ ೨೮೦೦ ವರ್ಷಗಳ ಇತಿಹಾಸ ಏಕಿದೆ? ಎಂಬ ಪ್ರಶ್ನೆಗಳನ್ನು ಎತ್ತಿಕೊಂಡು ಕಪ್ಪು ಬಿಳುಪು ಕಲಾಕೃತಿಗಳನ್ನು ಪೂರಕ ವಾಗಿಟ್ಟುಕೊಂಟು ವಿವರಣೆ ನೀಡಿದ್ದು ಈ ಕೃತಿಯಲ್ಲಿನ ಪ್ರಮುಖ ಅಂಶವಾಗಿದೆ.

ಇತಿಹಾಸಪೂರ್ವದಲ್ಲಿನ ಮಾಧ್ಯಮ ಕೃತಿಗಳನ್ನು ಇಲ್ಲಿ ಪ್ರಸ್ತಾಪಿಸುತ್ತ ಈ ಬೆಳವಣಿಗೆಯ ನಂತರ ೧೧ ಮತ್ತು ೧೨ನೇ ಶತಮಾನದ ಹೊಯ್ಸಳರ ಕಾಲದಲ್ಲಿ ಭಾವಚಿತ್ರ ಪ್ರಕಾರ ಶ್ರೀಮಂತವಾಗಿದ್ದು, ಹಾಗಾಗಿಯೇ ಸಮಕಾಲೀನ ಕನ್ನಡ ಸಾಹಿತ್ಯದಲ್ಲಿ ಭಾವಚಿತ್ರಗಳ ಉಲ್ಲೇಖ ಸಾಕಷ್ಟು ಕಾಣಬಹುದು ಎಂದಿದ್ದಾರೆ. ನಂತರ ಗ್ರೀಸ್ ದೇಶದಲ್ಲಿ ನಾಣ್ಯಗಳ ಮೇಲೆ ಭಾವಚಿತ್ರ ರಚನೆ ಕಂಡುಬಂದಿದ್ದುದಾಗಿದೆ. ನಮ್ಮಲ್ಲಿ ಎರಡು ರೀತಿಯ ಭಾವಚಿತ್ರ ಪ್ರಕಾರವನ್ನು ಗುರುತಿಸಲಾಗಿದ್ದು ಒಂದು ಮರಣದ ನಂತರ, ಪುರೋಹಿತ ಸಂಪ್ರದಾಯ ಮತ್ತು ಉದಾತ್ತ ಭಾವನೆಗಳನ್ನು ಹೊಂದಿ ಮೂಡಿಬರುವ ಭಾವಚಿತ್ರಗಳು ಒಂದು ಬಗೆಯಾದರೆ, ಜೀವ ಪರವಾದ ಮತ ಧರ್ಮಗಳಿಗೆ ಸಂಬಂಧಿಸಿದ ರಸಭಾವಾತಿರೇಕದ ಭಾವಚಿತ್ರಗಳು ಮತ್ತೊಂದು ಬಗೆಯವು ಎಂದಿರುವರು.

ಮುಂದೆ ಭಾವಚಿತ್ರ ಎಂದರೇನು? ಎಂಬುದಕ್ಕೆ ನಿಜವಾದ ಅಥವಾ ಕಾಲ್ಪನಿಕ ಜೀವಂತ ಅಥವಾ ಸತ್ತ ವ್ಯಕ್ತಿಯೊಂದರ ಶಿಲ್ಪ, ಚಿತ್ರ ಅಥವಾ ರೇಖಾಚಿತ್ರ, ಛಾಯಾಚಿತ್ರ ಮಾಧ್ಯಮ ಮೂಡಿ ಬರುವ ಪ್ರತಿಬಿಂಬ ಇಲ್ಲಿ ಆ ವ್ಯಕ್ತಿತ್ವದ ದೈಹಿಕ ಅಥವಾ ನೈಜ ವಿಶೇಷ ಲಕ್ಷಣಗಳು ಅಥವಾ ಎರಡನ್ನು ಬಿಂಬಿಸುವಿಕೆ ಹೊಂದಿರಬಹುದು. ಭಾವಚಿತ್ರಣ ಪ್ರಕ್ರಿಯೆಯ ಸಂದರ್ಭದಲ್ಲಿ ರೂಪದರ್ಶಿಯ ಒಳ ಹೊರ ನೋಟಗಳು ಅಲ್ಲದೆ ಕಲಾವಿದನ ಗುರುತು ಸಹ ಇಲ್ಲಿ ಅತೀ ಪ್ರಾಮುಖ್ಯತೆಯ ಅಂಶಗಳನ್ನು ನಮ್ಮ ಮುಂದಿಟ್ಟಿದ್ದಾರೆ. ಹಾಗೆ ಕುಳಿತುಕೊಂಡಿರುವ 'ವಸ್ತು' ಸಮಕಾಲೀನತೆಯ ತನ್ನ ಕಾಲದ ಬುದಕಿನ ಶೈಲಿಯನ್ನು ಪ್ರತಿಬಿಂಬಿತವಾಗಿರುತ್ತವೆ. ಅಲ್ಲದೆ ಮಾಡೆಲ್‌ನ ವ್ಯಕ್ತಿತ್ವದಲ್ಲಿನ ಸಾರಭೂತವಾದ ವಿಶಿಷ್ಟ ಗುಣಲಕ್ಷಣಗಳಿಗೆ ಗಮನ ನೀಡಿ ಅದರಲ್ಲಿರುವ ಅಂಶಗಳನ್ನು ಕಲಾವಿದ ಪ್ರತಿಬಿಂಬಿಸುವ ರೀತಿಯನ್ನು ಈ ಕೃತಿಯಲ್ಲಿ ಕೆ.ವಿ. ಸುಬ್ರಹ್ಮಣ್ಯಂ ಅವರು ಅರ್ಥವತ್ತಾಗಿ ಕಟ್ಟಿಕೊಟ್ಟಿದ್ದಾರೆ.

ನಂತರದಲ್ಲಿ ಈ ಭಾವಚಿತ್ರ ಎನ್ನುವ ಪದದ ಅರ್ಥ, ಬಳಕೆ ಮತ್ತು ಹುಟ್ಟುಗಳ ಬಗ್ಗೆ ತಿಳಿಸುತ್ತಾ ಲ್ಯಾಟಿನ್ ಭಾಷೆಯ ಕ್ರಿಯಾಪದ Protraho ವನ್ನು ಮಧ್ಯಯುಗದಲ್ಲಿ 'ಪುನರ್ ಸೃಷ್ಟಿಸು' ಅಥವಾ 'ನಕಲು ಮಾಡು' ಎಂಬ ಅರ್ಥವನ್ನು ಬಳಸಲಾಗುತ್ತಿತ್ತೆಂದು ನಂತರ ೧೮ನೆಯ ಶತಮಾನದಲ್ಲಿ ಫ್ರೆಂಚ್ ಭಾಷೆಯ(Pourtraire) ಪದ ಬಳಕೆಯಲ್ಲಿಲ್ಲದೆ ಹೋಯಿತು. Portrait ೧೨ ಮತ್ತು ೧೩ನೆಯ ಶತಮಾನಗಳಿಂದ ಬಳಕೆಯಲ್ಲಿದೆ. ಹೀಗಾಗಿ ಇಂಗ್ಲೀಷ್‌ನ

``Portray'' ಮತ್ತು ``Portrait ಜರ್ಮನ್ ಭಾಷೆಯ ``Portrat'' ಮತ್ತು ರಷ್ಯನ್ ಭಾಷೆಯ ``Portret'' ಎನ್ನಲಾಗುತ್ತಿದೆ ಎಂದು ಈ ರೀತಿಯ ಪದಗಳ ಪರಿಚಯ ಮಾಡಲಾಗಿದೆ.

೧೬ನೆಯ ಶತಮಾನದ ಮಧ್ಯಭಾಗದಲ್ಲಿ ದೃಶ್ಯಕಲೆಯ ಬರಹಗಾರರು 'Imitating' 'portraying'ನಡುವೆ ಅತಿ ಸೂಕ್ಷ್ಮವಾದ ವ್ಯತ್ಯಾಗಳನ್ನು ಕಂಡುಕೊಳ್ಳಲಾರಂಭಿಸಿದರು. ಆದಿಮಾನವರ ಕಾಲದಲ್ಲಿ ಈ ಭಾಚಿತ್ರಗಳ ಉದ್ದೇಶ ಮತ್ತು ಇಂಥ ಭಾವಚಿತ್ರಗಳಲ್ಲಿನ ಉದ್ದೇಶಗಳನ್ನು ಕೆಲವು ಸ್ಥಳಗಳಲ್ಲಿ ಮೂಡಿ ಬಂದಿರುವ ಭಿತ್ತಿಚಿತ್ರಗಳಲ್ಲಿನ ಕೃತಿಗಳನ್ನು ಪೂರಕವಾಗಿ ತೆಗೆದುಕೊಂಡು ಚರ್ಚಿಸಿದ್ದಾರೆ.

ಈ ಆದಿಮ ಜನರಿಗೆ ಭಾವಚಿತ್ರವೆಂದರೆ ಮಾಂತ್ರಿಕತೆ ಮತ್ತು ಧಾರ್ಮಿಕತೆಗಳ ಪರಸ್ಪರ ಸಹಸಂಬಂಧಿಕ ಸೃಷ್ಟಿಪ್ರಕ್ರಿಯೆ ಎನ್ನಲಾಗಿದೆ. ಗಬನ್, ಆದಿಮ ಕಲೆಯಲ್ಲಿನ ಚಿತ್ರಲಕ್ಷಣ, ಉದ್ದೇಶ, ಸೃಷ್ಟಿಸಿದವರ ಆಸಕ್ತಿ ಹಾಗೂ ಕುಶಲತೆಗಳನ್ನು ಇಲ್ಲಿ ಮುಖ್ಯವಾಗಿ ತಿಳಿಸಲಾಗಿದೆ. ಹಾಗೆಯೇ ಪುರಾತನ ಮಧ್ಯಪೂರ್ವ ರಾಷ್ಟ್ರಗಳ ಚಿತ್ರಗಳ ಮತ್ತು ಈಜಿಪ್ಟ್ ಹಾಗೂ ಮೆಸಪೋಟೇಮಿಯಾ, ವ್ಯತ್ಯಾಸವನ್ನು ತಿಳಿಸಿದ್ದು, ಕ್ರಿ.ಪೂ.೫ನೆಯ ಶತಮಾನದಲ್ಲಿ ಅರಿಸ್ಟಾಟಲ್ ಭಾವಚಿತ್ರ ಹೊಸ ಯುಗವನ್ನು ಹುಟ್ಟುಹಾಕಿದೆ. ನಂತರ ಕಾನ್‌ಸ್ಟಾಂಟಿನ್ ಭಾವಚಿತ್ರ, ಕಲಾಪ್ರಕಾರ ಇತರ ಪ್ರಕಾರಗಳಿಂದ ಪ್ರತ್ಯೇಕಗೊಂಡು ಧರ್ಮದ ಪ್ರಭಾವ ಬೀರಿ, ಚಕ್ರವರ್ತಿಗಳ ಭಾವಚಿತ್ರಗಳು, ಗಾಜು ಚಿತ್ರ ಹಾಗೂ ಲೋಹದ ಮಾಧ್ಯಮಗಳಲ್ಲಿ ಭಾವಚಿತ್ರ, ಭಾವಶಿಲ್ಪ ಮೂಡಿ ಬಂದಿರುವುದನ್ನು ಇಲ್ಲಿ ಸ್ಪಷ್ಟೀಕರಿಸಿದ್ದಾರೆ.

ನಂತರ ಪುನರುಜ್ಜೀವನ ಕಾಲದಲ್ಲಿ ೧೫ ಮತ್ತು ೧೬ನೇ ಶತಮಾನದಲ್ಲಿ ಕಲಾವಿದರು ರೂಪದರ್ಶಿ ಆಳಕ್ಕೆ ಹೊಕ್ಕು ಹೆಚ್ಚಿನ ತೀವ್ರತೆಯಿಂದ ನೋಡುವ ಚಿತ್ರಿಸುವ ಪ್ರಯತ್ನಗಳು, ಮುಖವನ್ನೇ ಹೆಚ್ಚಿನ ಪ್ರೌಢತೆಯಿಂದ ಅಧ್ಯಯನ ಮಾಡಿ, ಚಿತ್ರಿಸುವ ಪರಂಪರೆ ಬೆಳೆದಿದ್ದು, ಕುಳಿತ ರೂಪದರ್ಶಿಗಳ ಆಯಾಸ, ಬೇಸರ, ಕೌತುಕ ಇವೆಲ್ಲವುಗಳನ್ನು ಉದ್ದೇಶಪೂರ್ವಕ ವಾಗಿಟ್ಟುಕೊಂಡು ಡಾವಿಂಟ, ಮೈಕೆಲ್ ಎಂಜಿಲೋ, ಟೈಟನ್, ರೆಂಬ್ರಾಂಟ್ ಈ ಅನೇಕ ಪಾಶ್ಚಾತ್ಯ ಕಲಾವಿದರಲ್ಲದೆ ಭಾರತೀಯನಾದ ರವಿವರ್ಮನು ತನ್ನ ಕೃತಿಯಲ್ಲಿ ಮೂಡಿಬಂದರಿವುದಾಗಿದೆ. ೧೮ನೇ ಶತಮಾನದಲ್ಲಿ ಭಾವಚಿತ್ರದಲ್ಲಿ ಮೂರು ಪ್ರವೃತ್ತಿಗಳಿಂದ ವಿಂಗಡಿಸಿಕೊಂಡು ಚಿತ್ರ ರಚನೆಗೊಂಡಿರುವುದನ್ನು ಲೇಖಕರು ಅವುಗಳ ಕಲಾಕೃತಿಗಳೊಂದಿಗೆ ವಿವರಣೆಯನ್ನು ನೀಡಿದ್ದು ಹೆಚ್ಚು ಸಮಂಜಸವಾಗಿದೆ. ನಂತರದಲ್ಲಿ ಕ್ಯಾಮೆರಾದ ಆಗಮನದಿಂದಾಗಿ ನೈಜತೆಗೆ ಹೆಚ್ಚು ಒತ್ತು ನೀಡಲಾಗಿದ್ದು ರೂಪದರ್ಶಿಯ ಹೊರಗಿನ ದೇಹಕ್ಕಿಂತಲೂ ಅವಳ ದೈವಿಕ ಭಾವದ ಮುಖ ಕಲಾವಿದನಿಗೆ ಹೆಚ್ಚು ಮುಖ್ಯವಾಗಿ ಕಂಡು ಅನೇಕ ಕಲಾವಿದರು ಈ ನಿಟ್ಟಿನಲ್ಲಿ ತಮ್ಮ ಕಲಾಕೃತಿಗಳ ರಚನೆಗೆ ತೊಡಗಿಕೊಂಡಿದ್ದು ಒಂದು ಹೊಸ ಪರಂಪರೆಯ ಸೃಷ್ಟಿಗೆ ಕಾರಣವಾಗಿತ್ತು ಎಂದು ಹೇಳುತ್ತಾ ಮತ್ತೆ ಇತಿಹಾಸಪೂರ್ವದ ಕಲೆಯ ಕಡೆಗೆ ತಿರುಗಿ ಅಲ್ಲಿನ ಚಿತ್ರ, ಶಿಲ್ಪಗಳಲ್ಲಿನ

ವರ್ಣವೈಖರಿಯನ್ನು ವೈಶಿಷ್ಟ್ಯ, ಆಕಾರಗಳಲ್ಲಿನ ವ್ಯತ್ಯಾಸ, ಗಂಭೀರ ಕಲ್ಪನೆಗಳ ಆಯಾ ಸ್ಥಳಗಳನ್ನು ನಮೂದಿಸಿ ತಮ್ಮ ಅರಮನೆ, ದೇವಾಲಯ, ಮಸೀದಿಗಳಲ್ಲಿ ರಚನೆ ಮಾಡಿದ ಭಾವಚಿತ್ರಗಳ ಚಿತ್ರ, ಶೈಲಿ, ಬಣ್ಣಗಳ ಬಳಕೆ ಇತ್ಯಾದಿ ಅಂಶಗಳನ್ನು ಲೇಖಕರು ಒಂದೊಂದಾಗಿ ಕಾಲಾನುಕ್ರಮದಲ್ಲಿ ಹೇಳಿಕೊಂಡು ಹೋಗಿದ್ದು, ವಿವರಣೆಯ ಜೊತೆಗೆ ಆಯಾ ಕಾಲಮಾನದ ರಾಜರುಗಳ ಭಾವಚಿತ್ರಗಳನ್ನು ಕಪ್ಪು, ಬಿಳುಪು ಮಾಧ್ಯಮದಲ್ಲಿ ಮುದ್ರಿಸಿದ್ದು ಈ ಕೃತಿಗೆ ಹೆಚ್ಚಿನ ಮೆರಗನ್ನು ತಂದುಕೊಟ್ಟಿದೆ. ಸಾವಿರ ಪದಗಳನ್ನು ಹೊಂದಿ ಒಂದು ಕಲಾಕೃತಿಯಾಗಿರುತ್ತದೆ ಎಂಬ ಅಂಶ ಇಲ್ಲಿ ಗಮನಕ್ಕೆ ಬರುವಂತಿದೆ.

ಈ ನಿಟ್ಟಿನಲ್ಲಿ ಭಾವಚಿತ್ರ ಕಲೆಯ ಪ್ರಕಾರ ತನ್ನ ವ್ಯಾಪ್ತಿ, ಉದ್ದೇಶಗಳನ್ನು ಹಲವು ದಿಕ್ಕುಗಳಲ್ಲಿ ವಿಸ್ತರಿಸಿಕೊಂಡ ಬಗೆ ವ್ಯಕ್ತಿ ಭಾವಚಿತ್ರ, ಸ್ವಭಾವ ಚಿತ್ರ, ಇಬ್ಬರ ಮತ್ತು ಗುಂಪು ಭಾವಚಿತ್ರಗಳ ಪ್ರಕಾರ ಇಂದು ಕಲೆಯ ಉದ್ದೇಶ ಮೀರಿ ಪ್ರಾರಂಭದಲ್ಲಿ ಹೇಳಿರುವ ಮಾಂತ್ರಿಕ ಶಕ್ತಿಯನ್ನು ಮೀರಿ ಇಂದು ಯಾಂತ್ರಿಕರಣಗೊಂಡು ಕ್ಯಾಮೆರಾದ ಬಳಕೆಯಿಂದ ನೈಜತೆಗೆ ಹೆಚ್ಚು ಪ್ರೋತ್ಸಾಹ, ಆಕರ್ಷಣೆ ವಿಶಿಷ್ಟ ರೀತಿಯನ್ನು ಪಡೆದುಕೊಂಡಿದ್ದಾಗಿದೆ. ಕಲಾವಿದರಿಂದ ವಿಶಿಷ್ಟವಾಗಿ ಮೂಡಿ ಬರುತ್ತಿದ್ದ ರಾಜಕೀಯ ಹಾಗೂ ಸಿನಿಮಾ ತಾರೆಗಳ ಭಾವಚಿತ್ರಗಳೂ ಇಂದು ದೊಡ್ಡ ರೀತಿಯಲ್ಲಿ ಡಿಜಿಟಲ್ ಇಮೇಜಿಂಗ್ ಮೂಲಕ ಪ್ರಿಂಟ್ ಆಗುತ್ತಿರುವುದರ ಬಗ್ಗೆ ಕೂಡ ಇಲ್ಲಿ ಚರ್ಚೆಗೆ ಒಳಪಡಿಸಿದ್ದಾರೆ.

ಒಟ್ಟಾರೆ ಈ ಕೃತಿಯು ಇತಿಹಾಸಪೂರ್ವ ಆದಿಮಾನವ ಕಾಲದಲ್ಲಿನ ಭಾವಚಿತ್ರಕ್ಕೆ ಅವರ ಮಾಧ್ಯಮ, ವಸ್ತು ವಿಷಯದ ಆರಂಭ ಕುರಿತಾಗಿ ಹೇಳಿಕೊಂಡು ಆಯಾ ಕಾಲಘಟ್ಟಕ್ಕೆ ಬದಲಾವಣೆಯಲ್ಲಿನ ಶೈಲಿ, ಮಾಧ್ಯಮ, ತಂತ್ರ ಕುರಿತಾಗಿ ತಿಳಿಸುತ್ತಾ, ಭಾವಚಿತ್ರ ಪರಂಪರೆಯ ಹುಟ್ಟು, ಬೆಳೆದುಬಂದ ಹಿನ್ನೆಲೆ ಅದಕ್ಕೆ ಕಲಾವಿದರ ಅನುಭವ ಲೇಪನ, ಬದಲಾವಣೆಯ ಉನ್ನತ ದೃಷ್ಟಿಕೋನಗಳನ್ನು ತಿಳಿಸುತ್ತಾ, ಹಾಗೆ ಭಾರತೀಯರಲ್ಲಿನ ಭಾವಚಿತ್ರ ರಚನಾ ಬೆಳವಣಿಗೆ ಅದರ ಹರವು, ಸಮಕಾಲೀನ ಸಂದರ್ಭದಲ್ಲಿ ಭಾವಚಿತ್ರಕಲೆಗೆ ನೀಡಿದ ಸ್ಥಾನಮಾನ ಹೀಗೆ ಹಲವು ಅಂಶಗಳನ್ನು ಲೇಖಕರು ಇಲ್ಲಿ ವಿವರಿಸಿದ್ದು ಇದೊಂದು ಕಲಾ ವಿದ್ಯಾರ್ಥಿಗಳಿಗೆ, ಕಲಾವಿದರಿಗೆ ಉತ್ತಮ ಆಕರ ಕೃತಿಯಾಗಿದೆ ಎನ್ನಬಹುದು. ಭಾವಚಿತ್ರ ಎನ್ನುವ ಒಂದು ಪದದ ಅರ್ಥವನ್ನು ಲೇಖಕರು ೧೦೦ ಪುಟಗಳಷ್ಟು ಅದರ ಅಳ-ಹರವುಗಳನ್ನು ಉಲ್ಲೇಖ ಸಹಿತವಾಗಿ ಪರಿಚಯವನ್ನು ಮಾಡಿದ್ದು ನಿಜಕ್ಕೂ ಅಚ್ಚರಿಯ ಮತ್ತು ಶ್ಲಾಘನೀಯ ವಿಷಯವಾಗಿದೆ.

### ೫.೫. ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ

ಈ ಕೃತಿಯು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ೨೦೦೭ರಲ್ಲಿ ಆಗಿನ ಅಧ್ಯಕ್ಷರಾದ ವೆಂಕಟಾಚಲಪತಿಯವರ ನೇತೃತ್ವದಲ್ಲಿ ಪ್ರಕಟಣೆಗೊಂಡಿದ್ದು ಒಟ್ಟು ೧೬೭ ಪುಟಗಳನ್ನು ಹೊಂದಿರುವ

ಈ ಪುಸ್ತಕವು ಕರ್ನಾಟಕದ ಶಿಲ್ಪಶೈಲಿಗಳ, ಸಮಕಾಲೀನ ಶಿಲ್ಪಕಲೆಗಳಿಗೆ ಹಾಗೂ ಶಿಲ್ಪಿಗಳ ಕುರಿತಾದ ಸಮಗ್ರ ವಿಷಯವನ್ನು ಒಳಗೊಂಡಿದೆ.

ಜಾಗತೀಕರಣದ ಅಬ್ಬರದಲ್ಲಿ ಹಲವು ಆಯಾಮಗಳನ್ನು ಪಡೆದುಕೊಂಡ ಕನ್ನಡ ಶಿಲ್ಪಕಲೆಯ ಬೆಳವಣಿಗೆಗಳು ಅಚ್ಚರಿಗೊಳಿಸುತ್ತವೆ. ಲೇಖಕರ ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ ಈ ಎಳೆಗಳ ಒಳನೋಟಗಳನ್ನು ಆಸಕ್ತಿಯಿಂದ ಓದಿಸಿಕೊಂಡು ಹೋಗುವಂತೆಯೇ ಚಿಂತನೆಗೆ ತೊಡಗುವಂತೆ ಮಾಡುತ್ತದೆ. ಸ್ಥಳೀಯ ಗಡಿಗಳನ್ನು ಮೀರಿ ನಮ್ಮ ಶಿಲ್ಪಿಗಳು ಜಾಗತೀಕವಾಗಿ ಮಾನ್ಯತೆ ಪಡೆದಿದ್ದಾರೆ ಎಂಬುದರ ವಿವರಗಳು; ಐತಿಹಸಿಕ ಪ್ರಜ್ಞೆ ಹಾಗೂ ಸಮಕಾಲೀನ ಸತ್ವಗಳೆರಡನ್ನು ಅರಗಿಸಿಕೊಂಡು ಕಾಣಿಸಿಕೊಂಡಿವೆ.

ಸಂಪ್ರದಾಯ ಜಾನಪದೀಯವಲ್ಲದ ಆದಿಮ ಸತ್ವಗಳನ್ನು ಅರಗಿಸಿಕೊಂಡು ಕನ್ನಡ ಶಿಲ್ಪಕಲೆಯ ಪ್ರಕಾರ ಜಾಗತಿಕ ಪ್ರಭಾವಗಳನ್ನು ಅರಗಿಸಿಕೊಂಡು ಇನ್‌ಸ್ಟಾಲೇಷನ್ ಕಲಾಪ್ರಕಾರಕ್ಕೆ ಜಿಗಿದು ಬಹುಎತ್ತರಕ್ಕೆ ಚಿಮ್ಮಿ ವಿಖ್ಯಾತವಾಗಿರುವುದು ಇಂದಿನ ಹೊಸ ಪೀಳಿಗೆಯ ಶಿಲ್ಪಗಳ ಅಸಾಧರಣ ಸೃಷ್ಟಿಶೀಲ ಪ್ರತಿಭಾ ಪ್ರಕ್ರಿಯೆಯೇ ಕಾರಣ ಎನ್ನುತ್ತಾರೆ. ೧೯೯೦ರಲ್ಲಿ ಕಾಣಿಸಿಕೊಂಡ ಈ ಹೊಸತನ ಇನಸ್ಟಾಲೇಷನ್ ಕಲಾ ಪ್ರಕಾರದ ಟಿಸಿಲುಗಳಾದ Earth Art ಸ್ಥಳ ನಿರ್ದಿಷ್ಟ, ಕಾಲ ನಿರ್ದಿಷ್ಟ, ಬಹುಮಾಧ್ಯಮಗಳ ಅಭಿವ್ಯಕ್ತಿ ಪ್ರಕಾರಗಳಿಗೆ ಕಾರಣವಾಯಿತು. ಅಲ್ಲದೆ ವೀಡಿಯೋ ಇನ್‌ಸ್ಟಾಲೇಷನ್ ಹಾಗೂ ದೇಹವನ್ನೇ ದುಡಿಸಿಕೊಳ್ಳುವ Performanceಗಳೂ ೨೦೦೬-೦೯ರ ಹೊತ್ತಿಗೆ ಪ್ರಭಾವ ಶಾಲಿಯಾಗಿ ಕಾಣಿಸಿಕೊಂಡವು. ಸ್ತ್ರೀ ಸಂವೇದನೆಯನ್ನು ಶಕ್ತಿಯುತವಾಗಿ ಅರಗಿಸಿಕೊಂಡ ಅಭಿವ್ಯಕ್ತಿಗಳೂ ಮೂಡಿಬಂದಿವೆ.

ಕನ್ನಡ ಶಿಲ್ಪಕಲೆಯು ಇಂದು ನಿನ್ನೆ-ನಾಳೆಗಳ ಬಗೆಗೆ ದೃಶ್ಯ ಧ್ಯಾನದಂತೆ ಶಿಲ್ಪಕಲೆಯ ಮೂರು ಆಯಾಮಗಳ ಅಭಿವ್ಯಕ್ತಿ ಮೂಡಿ ಬಂದಿರುವುದನ್ನು ಶಿಲ್ಪಕಲೆಯ ಅಧ್ಯಯನ ಮಾಡುವವರಿಗೆ ಉಪಯುಕ್ತವಾಗುವಂತೆ ಶಿಲ್ಪಗಳ ಚಿತ್ರಗಳನ್ನು ನಮ್ಮ ಮುಂದೆ ಇಟ್ಟಿದ್ದಾರೆ. ಹೆಚ್ಚಾಗಿ ೧೯೮೦-೨೦೦೬ರ ನಡುವೆ ಈ ಶಿಲ್ಪ ಸೃಷ್ಟಿ ಕನ್ನಡ ಶಿಲ್ಪಕಲೆಯ ವಿಶಿಷ್ಟ ಹೊಳಹುಗಳನ್ನು ಬಿಂಬಿಸುತ್ತವೆ. ಶಿಲ್ಪಕಲೆ ತನ್ನ ಮೂರು ಆಯಾಮವನ್ನು ಮೀರಿ ಇನ್‌ಸ್ಟಾಲೇಷನ್ ಕಲೆಯಲ್ಲಿ ತನ್ನ ಅವಕಾಶದ ವ್ಯಾಪ್ತಿಯನ್ನು ವಿಸ್ತರಿಸಿಕೊಂಡು ನೋಡುಗರನ್ನು ತನ್ನ ಅತಿಮುಖ್ಯ ಅಂಗವನ್ನಾಗಿಸಿಕೊಂಡು ಅಂತರರಾಷ್ಟ್ರೀಯ ಮಾನ್ಯತೆಯ ಜೊತೆ ಜೊತೆಗೇ ಭಾರತದಲ್ಲಿ ಹೆಚ್ಚು ಶಕ್ತಿಯುತವಾಗಿ ಕಾಣಿಸಿಕೊಂಡಿದ್ದು ಕರ್ನಾಟಕದಲ್ಲಿ ಎಂಬ ಅಂಶ ಹೆಚ್ಚು ಪ್ರಸ್ತುತ ಎಂಬುದನ್ನು ಲೇಖಕರು ಸ್ಪಷ್ಟವಾಗಿ ಸಾಧಿಸಿದ್ದಾರೆ.

ಕಲಾವಿದ/ಕಲಾವಿದೆಯರು ಆ ಸಂದರ್ಭದ ವಿಶಿಷ್ಟ ದೃಷ್ಟಿಧೋರಣೆಗಳಿಗೆ, ದೃಶ್ಯ ಪಲ್ಲಟಗಳ ಸಮಕ್ಷಮತೆಗೆ ಸಾಕ್ಷಿಭೂತರಾಗಿ ಅವೆಲ್ಲವುಗಳನ್ನು ಅರಗಿಸಿಕೊಂಡು ಅಭಿವ್ಯಕ್ತಿಸುತ್ತಾರೆ. ಹಾಗಾಗಿ ಅವರ ಅಭಿವ್ಯಕ್ತಿ ಬಗ್ಗೆ ಅವರ ಹೇಳಿಕೆಗಳು ಗಣನೀಯ ಹೊಳಹುಗಳನ್ನು ನೀಡಬಲ್ಲವು. ಈ

ಪುಸ್ತಕದಲ್ಲಿ ಹಲವಾರು ಕಲಾವಿದ/ಕಲಾವಿದೆಯ ಹೇಳಿಕೆಗಳನ್ನು ಅಂತಿಮ ಪುಟಗಳಲ್ಲಿ ಕೊಡಲಾಗಿದೆ. ಪಠ್ಯವನ್ನು ಬಿಟ್ಟು ಒಟ್ಟು ಚಿತ್ರಗಳನ್ನು ಓದುಗರು ಗಮನಿಸಿದರೂ ಅವರಿಗೆ ನಮ್ಮ ಶಿಲ್ಪಕಲೆಯ ಒಟ್ಟಾರೆ ಚಿತ್ರ ಮೂಡಿಬರುವಂತೆ ದೃಶ್ಯಾತ್ಮಕವಾಗಿದ್ದು ಕನ್ನಡ ಸಮಕಾಲೀನ ಶಿಲ್ಪಕಲೆ ಯಾವ ದಿಕ್ಕಿನಲ್ಲಿ ಇಂದು ಸಾಗುತ್ತಿದೆ. ಈ ಬಗ್ಗೆ ವಿಮರ್ಶಾತ್ಮಕವಾಗಿ, ವಿವರವಾಗಿ ಬರೆದ ಈ ಪುಸ್ತಕ ದೃಶ್ಯಕಲಾ ಇತಿಹಾಸಕಾರರಿಗೆ, ಮುಂದಿನ ಯುವ ಶಿಲ್ಪಿಗಳಿಗೆ ಕಲಾವಿದರಿಗೆ ಅತ್ಯಂತ ಮಾಹಿತಿಪೂರ್ಣ ಗ್ರಂಥವಾಗಿದೆ.

ಈ ಪುಸ್ತಕವು ಆರು ಅಧ್ಯಾಯಗಳನ್ನು ಒಳಗೊಂಡಿದ್ದು, ಕನ್ನಡ ಶಿಲ್ಪ ನಿನ್ನೆಯ ಇಂದು ಎಂಬ ಅಧ್ಯಾಯದಲ್ಲಿ ಮೇಲೆ ತಿಳಿಸಿರುವಂತೆ ಶಿಲ್ಪ:ಕನ್ನಡ ಶಿಲ್ಪ ಇತಿಹಾಸ ಪೂರ್ವಕಾಲದಿಂದ ಇತಿಹಾಸ ಹಾಗೂ ನಮ್ಮ ಸಮಕಾಲೀನ ಕಾಲದಲ್ಲಿ ನಡೆದು ಬಂದ ಹಾದಿ, ಪಡೆದುಕೊಂಡ ಟಿಸಿಲುಗಳು ನೂರಾರು ಶಿಲ್ಪಗಳು ಹಲವು ಶೈಲಿಗಳಲ್ಲಿ ವೈವಿಧ್ಯಮಯ ನೆಲೆಗಳನ್ನು ಅಭಿವ್ಯಕ್ತಿಸುತ್ತಿದ್ದು ಕನ್ನಡ ಶಿಲ್ಪಕಲೆ ಸ್ಥಳೀಯ ಗಡಿಗಳನ್ನು ಮೀರಿ ಭಾರತೀಯ ಶಿಲ್ಪಕಲೆಯ ಸಂಪ್ರದಾಯ ಸೊಗಸಿನ ಜೊತೆ ಜೊತೆಗೇ ಬೆಳೆದು ಉಳಿದು ಹೊಸ ಆಯಾಮಗಳನ್ನು ಕಾಲಾಕಾಲಕ್ಕೆ ಪಡೆದುಕೊಂಡಿರುವ ಸ್ವರೂಪ, ಪಶ್ಚಿಮ ಹಾಗೂ ಯುರೋಪು ರಾಷ್ಟ್ರಗಳ ಶಿಲ್ಪಗಳ ಸ್ವಯಂ ವೈಭವದ ವೈಯಕ್ತಿಕ ಅಭಿವ್ಯಕ್ತಿಯ ದೃಷ್ಟಿಯೊಂದಿಗೆ ಸ್ಪರ್ಧಿಸುವಂತೆಯೇ ಏಕೆ ತಮ್ಮದೇ ಆದ ಅನನ್ಯ ಗ್ರಹಿಕೆಗಳಿಂದ ಅಭಿವ್ಯಕ್ತಿಸಿರುವ ಅನೇಕ ಶಿಲ್ಪಗಳ ಕಲಾಕೃತಿಗಳನ್ನಿಟ್ಟುಕೊಂಡು ವಿವರಣೆ ನೀಡಿದ್ದಾರೆ.

ಆದಿಮಸತ್ವದಿಂದಲೇ ಹುಟ್ಟಿದ ನಮ್ಮ ಶಿಲ್ಪಕಲಾ ಇತಿಹಾಸ ನಂತರದಲ್ಲಿ ಜಾನಪದ ಶಿಲ್ಪಕಲೆಗೆ ಹೆಚ್ಚಿನ ಮನ್ನಣೆ ನೀಡಿ ಪ್ರದರ್ಶನ ಮಾರಾಟಗಳು ಸಿಕ್ಕು ನಮ್ಮ ಶಿಲ್ಪಗಳೂ ಕೂಡ ನಮ್ಮ ಪರಂಪರೆಯ ಚಿತ್ರ ಶಿಲ್ಪಗಳಲ್ಲಿ ಸಂಪ್ರದಾಯದ ಬೇರುಗಳನ್ನು ಬಳಸಿಕೊಂಡು ಸಮಕಾಲೀನ ಜೀವಧ್ವನಿಗೆ ಪೂರಕವಾಗಿ ಹೊಸ ಹೊಸ ಸೃಷ್ಟಿಗಳು ಹೊಸ ಹೊಸ ಶೈಲಿಗಳು ಕಾಲಕಾಲಕ್ಕೆ ಅರಗಿಸಿಕೊಂಡು, ಅಭಿವ್ಯಕ್ತಿಗೆ ಮುಂದಾಗಿರುವ ವಿಶೇಷಗಳನ್ನು ತಿಳಿಸುತ್ತಾ ಇದಕ್ಕೆ ಕಾರಣವಾದ ತನ್ನ ಕಾಲದ ಧ್ವನಿ ಹೊಂದುವ, ತನ್ನ ಕಾಲದ ಶೈಲಿಗೆ ಹೊಂದುವ ಹೊಸ ಮಾಧ್ಯಮ ಸಾಮಗ್ರಿಗಳನ್ನು ರೂಪಿಸಿಕೊಂಡಿದ್ದಾಗಿದೆ ಎನ್ನುತ್ತಾರೆ. ಪ್ರಾರಂಭದಲ್ಲಿ 'ಇತಿಹಾಸಪೂರ್ವಕಾಲದ ಪ್ರಾಣಿಗಳ ರಕ್ತ, ಕೊಬ್ಬು, ಮಣ್ಣಿನ ಬಣ್ಣಗಳಿಂದ ಪ್ರಾರಂಭವಾಗಿದ್ದು ಹಲವು ಸಾವಿರ ವರ್ಷಗಳ ನಂತರ ಆಕ್ರೆಲಿಕ್ ಫೈಬರ್‌ಗಾಜು(Multimedia), ಶಬ್ದ ಬೆಳಕು ಇತ್ಯಾದಿಗಳೆಲ್ಲಾ ನಮ್ಮ ಶಿಲ್ಪಗಳ ಅಭಿವ್ಯಕ್ತಿಗೆ ಪೂರಕವಾಗಿ ದಕ್ಕಿರುವುದರಿಂದಲೇ ಯಾವುದೋ ಒಂದು ಶೈಲಿ, ಮಾಧ್ಯಮ, ಪರಂಪರೆ ಇತ್ಯಾದಿಗಳು ಉಳಿದುಕೊಳ್ಳಲು ಸಾಧ್ಯವಾಗುವುದು. ಇಂತಹ ಹೊಸ ಅನ್ವೇಷಣೆಗಳಿಂದ ಹೊಸ ಹೊಸ ನೋಟ-ಆಟ-ಮಾಟಗಳಿಗೆ ದೃಷ್ಟಿದೋರಣೆಗಳಿಗೆ ಕಾರಣವಾಗಿರುವ ರೀತಿಯನ್ನು ಅಲ್ಲದೆ ಅದರ ಹುಟ್ಟು ಬೆಳವಣಿಗೆ, ಪಶ್ಚಿಮ ಹಾಗೂ ಯುರೋಪಿನ ಕಲಾಪ್ರಭಾವ ನಂತರ ಬ್ರಿಟೀಷ್ ಕಲಾಶಾಲೆಗಳಲ್ಲಿನ ಪಾಶ್ಚಾತ್ಯ ಅಕಾಡೆಮಿಕ್ ಕಲಾಶಿಕ್ಷಣದಿಂದ ಇತರ ರಾಷ್ಟ್ರಗಳ

ಕಲಾವಿದ ಸಾಹಿತಿಗಳ ಸ್ಫೂರ್ತಿಗೆ ಮನ್ನಣೆಗೊಂಡು ಪ್ರಭಾವಿಸಿ(Modern)ಶೈಲಿಗಳಲ್ಲಿ ರಚನೆಯನ್ನು ಕಂಡುಕೊಂಡರೂ ಅವುಗಳಲ್ಲಿ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಆಗಸ್ಟರೋಡಿನ್, ಮೇಡಾಮೋ ರೊಸ್ಸೋ ಮತ್ತಿತರರು ಪ್ರಭಾವಿಸಿಕೊಂಡು ಆಧುನಿಕತೆಯ ಮಾಧ್ಯಮಗಳನ್ನು ಉಪಯೋಗಿಸಿಕೊಂಡು ಕಲಾಭಿವ್ಯಕ್ತಿಗೆ ಮುಂದಾದರು. ಈ ಹೊಸದರ ಅನುಭವ ಹಿಂದಿಗಿಂತಲೂ ವಿಭಿನ್ನವಾಗಿ ಅಭಿವ್ಯಕ್ತಿಸಬೇಕೆಂಬ ಮನಸ್ಸು ಯಾರಿಗೆ, ಯಾವ ಸಂದರ್ಭದಲ್ಲಿ ಯಾವ ರೀತಿಯಲ್ಲಿ ಉಂಟಾಯಿತೆಂಬುದೂ ಕುತೂಹಲಕರ ಅಂಶಗಳನ್ನು ಒಳಗೊಂಡಿದ್ದಾಗಿದೆ ಎಂಬ ಅಸ್ಪಷ್ಟತೆಯನ್ನು ಸೂಚಿಸಿದ್ದಾರೆ.

ಬ್ರಿಟೀಷರು ಸುಮಾರು ೧೫೦ ವರ್ಷಗಳ ಆಳ್ವಿಕೆಯಲ್ಲಿ ಭಾರತೀಯ ಲಲಿತ ಕಲೆಗಳನ್ನು ಅಲ್ಲೋಲ ಕಲ್ಲೋಲ ಮಾಡಿಬಿಟ್ಟಿತು. ಸಾವಿರಾರು ವರ್ಷಗಳಿಂದ ಬೆಳೆದು ಬಂದಿದ್ದ ಸಂಪ್ರದಾಯವನ್ನು ಸಂಪೂರ್ಣವಾಗಿ ಜೀರ್ಣಿಸಿಕೊಳ್ಳಲು ಅಸಮರ್ಥರಾಗಿದ್ದರು. ಬಾಬು ಅವನಿಂದ್ರನಾಥ ಠ್ಯಾಗೋರ್, ಭಾರತೀಯ ಲಲಿತಕಲೆಗಳ ಆಧುನಿಕ ಅವಶ್ಯಕತೆಗಳಿಗೆ ಹೊಂದಿಸಿಕೊಳ್ಳುವ ನಿಟ್ಟಿನಲ್ಲಿ ಅನೇಕ ಚಿತ್ರಕಾರರಿಗೆ, ಶಿಲ್ಪಿಗಳಿಗೆ ಮಾರ್ಗವಾದರು, ೧೯೩೦ರಲ್ಲಿ ಪ್ರಥಮವಾಗಿ ಪ್ರದೋಷ್ ದಾಸಗುಪ್ತ, ಚಿಂತಾಮಣಿಕರ್, ಶಂಖು ಚೌದರಿಯರುಗಳು ಹೊಸ ಗಾಳಿಗೆ ಹಾಯೆಂದು ಮೈಚಾಚಿ ಪ್ಯಾರಿಸ್, ಲಂಡನ್‌ಗಳಿಗೆ ಹೋಗಿ ಶಿಲ್ಪಕಲೆಯ ಸಮಕಾಲೀನ ಸತ್ವಗಳನ್ನು ಕಲಿತು ಬಂದರು. ಹಾಗೇ ನಮ್ಮಲ್ಲಿಯೇ ಕಲಿತು ಬೆಳೆದವರಲ್ಲಿ ಎನ್.ಎಚ್.ಕುಲಕರ್ಣಿ, ಧನಂಜಯಶಿಲ್ಪಿ, ಶಾಂತಲಿಂಗಪ್ಪ ಪಾಣೀಲ, ಶರಣಪ್ಪ ವೀರಪ್ಪ ಹೀಗೆ ಅನೇಕರು ಸಂಪ್ರದಾಯ ಶಿಲ್ಪಕಲೆಯನ್ನು ಮೈಗೂಡಿಸಿಕೊಂಡಿರುವುದು ಇಲ್ಲಿ ಕಾಣಬಹುದು.

ಇನ್ನೂ ಅನೇಕರು ತಮ್ಮ ಚಿತ್ರ ಇತರ ಮಾಧ್ಯಮ ತಂತ್ರಗಳ ಜೊತೆಗೆ ಶಿಲ್ಪ ಸೃಷ್ಟಿಯಲ್ಲಿ ತೊಡಗಿಸಿದವರನ್ನು ಲೇಖಕರು ಅವರು ಬಳಸಿಕೊಂಡ ಮಾಧ್ಯಮ ತಂತ್ರ, ಶೈಲಿಯ ನಿರೂಪಣೆಯನ್ನು ಇಲ್ಲಿ ಪರಿಚಯಿಸಿದ್ದಾರೆ. ಅಂತವರಲ್ಲಿ ಆರ್.ಎಸ್.ನಾಯ್ಡುರರ ಪ್ಲಾಸ್ಟರ್ ಆಫ್ ಪ್ಯಾರಿಸ್ ಶಿಲ್ಪಗಳು, ಆರ್.ಎಂ.ಹಡಪದರ 'WE FOUR' ಗುಂಪು ಪ್ರದರ್ಶನದಲ್ಲಿನ ಅಭಿವ್ಯಕ್ತಿಗಳು, ಕೆ.ಜಿ.ಸುಬ್ರಹ್ಮಣ್ಯರವರ ಟೆರಾಟೋಕಾ ಮಾಧ್ಯಮದ ಶಿಲ್ಪಗಳು, ಕೆ.ವೆಂಕಟಪ್ಪ ಮೊದಲಾದವರನ್ನು ಇಲ್ಲಿ ಹೆಸರಿಸಬಹುದಾಗಿದೆ.

ಸಿ.ಪಿ.ರಾಜಾರಾಮ್‌ರವರು ಕರ್ನಾಟಕದ ಆಧುನಿಕ ಶಿಲ್ಪಕಲೆಗೆ ನಾಂದಿಹಾಕಿದರೆನ್ನಾಲಾಗಿದೆ. ನಂತರದಲ್ಲಿ ೬೦ರ ದಶಕದಲ್ಲಿ ಕಾಣಿಸಿಕೊಂಡ ಜಿ.ವೆಂಕಟಾಚಲಂ ಮತ್ತಿತರರು ಮಿಶ್ರ ಮಾಧ್ಯಮದಲ್ಲಿ ಶಿಲ್ಪ ಸರಣಿಯನ್ನು ಸೃಷ್ಟಿಸುತ್ತಾ ಉಸಿರುಗಟ್ಟಿಸುವಂತಹ ಇನಸ್ಟಾಲೇಷನ್ ಸೃಷ್ಟಿಗಳು, ಪ್ರಿಂಟ್, ವರ್ಣಚಿತ್ರ ಶಿಲ್ಪ ಹೀಗೆ Multi Mediaಗಳಲ್ಲಿನ ಅಭಿವ್ಯಕ್ತಿಗಳನ್ನು ಲೇಖಕರು ಇಲ್ಲಿ ಪರಿಚಯಿಸಿದ್ದಾರೆ. ೨೦೦೬ರಲ್ಲಿ ಮರಳು, ಕಂಚು, ಟೆರಾಕೋಟಾ ಮಾಧ್ಯಮದಲ್ಲಿ ಮೂಡಿಬಂದಿರುವ ಸೃಷ್ಟಿಗಳು ಮಹಿಳಾ ಕಲಾವಿದರೂ ಇಲ್ಲಿ ತಮ್ಮನ್ನು ದುಡಿಸಿಕೊಂಡಿರುವುದು ವಿಶೇಷ.

ಕನ್ನಡ ಶಿಲ್ಪ: ನಾಳೆಯ ಇಂದು ಎಂಬ ಶೀರ್ಷಿಕೆಯಡಿಯಲ್ಲಿ ನಮ್ಮ ಕಲಾವಿದರು ಶಿಲ್ಪಗಳಲ್ಲಿ ಶಿಲ್ಪದ ಅವಕಾಶದಲ್ಲಿ ತಮ್ಮ ಗ್ರಹಿಕೆ ರೂಪಗಳನ್ನು ವಿಸ್ತರಿಸಿರುವ ಹಲವು ಸಾಧ್ಯತೆಗಳನ್ನು ಅರಸಿ ಹೊರಟವರು ಹಲವರಾದರೆ, ಅವೆಲ್ಲವನ್ನು ಜೊತೆಗೆ ಗ್ಯಾಲರಿಯ ಅವಕಾಶ ರಾಜಕಾರಣಗಳನ್ನು ಮೀರಿ ಅಭಿವ್ಯಕ್ತಿಸಲು ಹೊರಟರು. ಕೆಲವರು ಇದ್ದು ಚಿತ್ರಿಸುವ ಮಾಧ್ಯಮವನ್ನು ಬಿಟ್ಟು ಇನ್‌ಸ್ಟಾಲೇಷನ್ ಕಲಾ ಪ್ರಕಾರದಲ್ಲಿಯ ಅಭಿವ್ಯಕ್ತಿಯನ್ನು ದುಡಿಸಿಕೊಂಡಿರುವ ಕಲಾವಿದರನ್ನು ಮತ್ತು ಅವರ ಅಭಿವ್ಯಕ್ತಿಗಳನ್ನು ಅಧ್ಯಾಯದಲ್ಲಿ ಪ್ರಸ್ತಾಪಿಸಿದ್ದಾರೆ. ಹಾಗೇ ಕಲಾ ಪ್ರದರ್ಶನಗಳನ್ನು ಏರ್ಪಡಿಸಿರುವ ಕಲಾವಿದರ ಅಭಿವ್ಯಕ್ತಿಗಳ ಕುರಿತಾಗಿ ಬಂದಿರುವ ಅನೇಕ ಪತ್ರಿಕಾ ಬರಹಗಳನ್ನು ಇಲ್ಲಿ ಕಟ್ಟಿಕೊಡಲಾಗಿದ್ದು, ಒಂದೆಡೆ ಸಂಗ್ರಹಿಸುವಂತೆ ಮಾಡಿರುವುದು ಸಹಾಯಕವಾದ ವಿಷಯವಾಗಿದೆ.

ಈ ನಿಟ್ಟಿನಲ್ಲಿ ಬರೆದಿರುವ ಕಲಾವಿದ/ಕಲಾವಿದೆಯರ ಕುರಿತಾದ ಲೇಖನಗಳ ಜೊತೆಗೆ ಸ್ವ ಅಭಿವ್ಯಕ್ತಿಯ್ನನು ಕುರಿತು ಹೇಳಿಕೊಂಡಿರುವ ಕೆಲವು ಮುಖ್ಯ ಅಂಶಗಳನ್ನು ಲೇಖಕರು ನಮ್ಮ ಮುಂದಿಡಲು ಪ್ರಯತ್ನಿಸಿದ್ದಾರೆ. ಒಟ್ಟಾರೆ ಈ ಕೃತಿಯು ನಮ್ಮ ಕನ್ನಡ ಸಮಕಾಲೀನ ಶಿಲ್ಪಕಲೆ ಯಾವ ದಿಕ್ಕಿನಲ್ಲಿ ಸಾಗುತ್ತಿದೆ. ಇದಕ್ಕೆ ಪೂರಕವಾಗಿ ಬೆಳೆದುಕೊಂಡು ಬರುತ್ತಿರುವ ಇನ್‌ಸ್ಟಾಲೇಷನ್ ಅಭಿವ್ಯಕ್ತಿಯು ಅನೇಕ ಕಲಾವಿದರು ದುಡಿಸಿಕೊಂಡಿದ್ದು, ಅದರ ಹುಟ್ಟು, ಬೆಳವಣಿಗೆ, ಮಾಧ್ಯಮ ವಿಮರ್ಶಾತ್ಮಕ ಬರಹಗಳು, ಪ್ರದರ್ಶನಗಳು ಈ ಬಗ್ಗೆ ಎಲ್ಲ ವಿವರಣೆಗಳನ್ನು ಈ ಕೃತಿಯಲ್ಲಿ ಲೇಖಕರು ಸಮಗ್ರ ರೀತಿಯಲ್ಲಿ ವಿಮರ್ಶಾತ್ಮಕವಾಗಿ, ವಿವರಣಾತ್ಮಕವಾಗಿ ದೃಶ್ಯಕಲಾ ಇತಿಹಾಸ ಓದುಗರಿಗೆ ಹೆಚ್ಚಿನ ಅನುಕೂಲವಾಗುವಂತೆ ಕಟ್ಟಿಕೊಟ್ಟಿದ್ದು ಉಪಯುಕ್ತ ಗ್ರಂಥವಾಗಿದೆ.

**೫.೬. ಇನ್‌ಸ್ಟಾಲೇಷನ್ ಕಲಾಪ್ರಪಂಚ**

ಪ್ರಸ್ತುತ ಕೃತಿ 'ಇನಸ್ಟಾಲೇಷನ್ ಕಲಾಪ್ರಪಂಚ'ಎಂಬುದು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾದ ವಿ.ಟಿ.ಕಾಳೆಯವರ ನೇತೃತ್ವದಲ್ಲಿ ೨೦೦೮ರಲ್ಲಿ ಮುದ್ರಣಗೊಂಡಿದ್ದು ಒಟ್ಟು ೧೮೫ ಪುಟಗಳನ್ನು ಹೊಂದಿರುವ ಈ ಕೃತಿಯಲ್ಲಿ ಏಳು ಅಧ್ಯಾಯಗಳನ್ನು ಒಳಗೊಂಡಿದೆ.

ಇನ್‌ಸ್ಟಾಲೇಷನ್ ಕಲೆಯ ಹಿಂದೆ ಮುಂದೆ..., ವೀಕ್ಷಕರು ಅಭಿವ್ಯಕ್ತಿಯ ಅವಿಭಾಜ್ಯ ಅಂಗವಾಗಿ... ವೀಕ್ಷಕರ ಸುತ್ತಮುತ್ತ ಕಾಣಿಸಿಕೊಂಡ ಕೆಲವು ಆಯ್ದ ಇನಸ್ಟಾಲೇಷನ್ ಅಭಿವ್ಯಕ್ತಿಗಳು.., ಇನ್‌ಸ್ಟಾಲೇಷನ್ ಕಲಾಪ್ರದರ್ಶನಗಳ ಕೆಲವು ಆಯ್ದ ಹೇಳಿಕೆಗಳು...ಟಿಪ್ಪಣಿಗಳು, ಗ್ರಂಥಋಣ, ವಿಷಯ ಸೂಚಿಕೆಗಳೆಂಬ ಅಂಶಗಳನ್ನು ಹೊಂದಿದ್ದು ಅದರಲ್ಲಿ ಮೊದಲಿನ ೪ ಅಧ್ಯಾಯಗಳು ಇನ್‌ಸ್ಟಾಲೇಷನ್ ವಿಷಯವನ್ನು ಕುರಿತಾದ ವಿವರಣೆಗಳನ್ನು ನೀಡಲಾಗಿದೆ. ಇವುಗಳಿಗೆ ಸಹಾಯಕ ಅಂಶಗಳ ಹೇಳಿಕೆಗಳನ್ನು ಇನ್ನುಳಿದ ೨ ಅಧ್ಯಾಯಗಳಲ್ಲಿ ತಿಳಿಸಲಾಗಿದೆ.

ಮೊದಲ ಅಧ್ಯಾಯದಲ್ಲಿ ಇನ್‌ಸ್ಟಾಲೇಷನ್ ಕಲೆಯ ಹಿಂದೆ–ಮುಂದೆ ವಿಷಯವಾಗಿ ಚರ್ಚಿಸಿದ್ದು ನಾವು ಇಲ್ಲಿ ಮನಗಾಣಬಹುದು. ಜಾಗತಿಕವಾಗಿ ಹಲವು ಬೆಳವಣಿಗೆಗಳ ನಡುವೆ

Revenge of the intellect uopon artನಂತೆ ಬಳಕೆಯಲ್ಲಿ ತರುವ ಹಲವು ಮಹತ್ವದ ಪ್ರಯತ್ನಗಳೂ ವಿಶ್ವದ ಎಲ್ಲೆಡೆ ನಡೆದಿವೆ. ಈ ಹಿನ್ನೆಲೆಯಲ್ಲಿ ಸಮಕಾಲೀನ ಅಭಿವ್ಯಕ್ತಿಯು ಚಿತ್ರ, ಶಿಲ್ಪ, ಪ್ರಿಂಟ್ ಮಾಧ್ಯಮಗಳ ಸಾಧ್ಯತೆಗಳನ್ನು ಮೀರಿ ಇನ್‌ಸ್ಟಾಲೇಷನ್ ಕಲೆಯ ಪ್ರಕಾರವನ್ನೂ ಅರಗಿಸಿಕೊಳ್ಳಲು ಇತ್ತೀಚೆಗೆ ಹೆಚ್ಚು ಗಂಭೀರವಾಗಿ ಕಾಣಿಸಿಕೊಂಡಿದ್ದು ಶಿಲ್ಪಕಲೆಯ ಪ್ರಥಮ ಪಲ್ಲಟ ಎಂದು ಹೇಳುತ್ತಾರೆ.

ಕನ್ನಡದ ಕಲಾವಿದರು ಈ ಹೊಸ ಪುಟಗಳಲ್ಲಿ ಕಾಣಿಸಿಕೊಂಡ ರೀತಿಯು ಉದ್ದೇಶಪೂರ್ವಕ ವಾದವು. ಆಕಸ್ಮಿಕ ಬೆಳವಣಿಗೆಗಳಲ್ಲ ಎಂಬ ಅಂಶವು ಇಲ್ಲಿ ಪ್ರಮುಖವಾಗಿದೆ. ಈ ಹಿನ್ನೆಲೆ ಯಲ್ಲಿ ನಮ್ಮಲ್ಲಿ ಅನೇಕ ಕಲಾವಿದರು ಕಲಾವಿದೆಯರು ಪಾಶ್ಚಾತ್ಯರ ಅಕಾಡೆಮಿಕ್ ಶಿಕ್ಷಣದ ಪ್ರಭಾವದಿಂದ ಸ್ಫೂರ್ತಿಗೊಂಡು ಹೊಸ ಸೃಷ್ಟಿಗೆ ಭೂಮಿಕೆಯನ್ನು ಹುಟ್ಟು ಹಾಕಿದರು.

೧೯೬೦ರಲ್ಲಿ ಬಾಲ್ಯಾವಸ್ಥೆಯಲ್ಲಿದ್ದ ಇನ್‌ಸ್ಟಾಲೇಷನ್ ಕಲಾಪ್ರಕಾರ, ಮಾರ್ಸೆಲ್ ಡುಷಾಂಪ್, ಕ್ಲೇಸ್, ಒಲ್ಡನ್‌ಬರ್ಗ್, ಆಂಡಿ ವಾರ್ಹೋಲ್ ಮತ್ತಿತರ ಕೊಡುಗೆ ವಿಶ್ವದ ಎಲ್ಲೆಡೆ ಪರಿಚಿತವಾಗಿದೆ. ಇನ್‌ಸ್ಟಾಲೇಷನ್ ಕಲೆಯ ಪ್ರಕಾರದ ಅಭಿವ್ಯಕ್ತಿಯ ಮುಖ್ಯಧಾತು ಮತ್ತು ಅವಕಾಶದ ಪರಿಕಲ್ಪನೆಗಳು ಬೆಳೆದು ಬಂದ ಇತಿಹಾಸದ ವಾಸ್ತುಶಿಲ್ಪ, ಚಿತ್ರ, ಶಿಲ್ಪ, ಸಂಗೀತ, ನೃತ್ಯಗಳ ಇತಿಹಾಸದಷ್ಟೇ ಅರ್ಥ ವಿಸ್ತಾರತೆಯನ್ನು ಹೊಂದಿದ್ದೆನ್ನುತ್ತಾರೆ. ಮುಂದೆ ಇವರ ಅಭಿವ್ಯಕ್ತಿ ಪ್ರಕಾರಗಳನ್ನು ತಿಳಿಸಲಾಗಿದೆ. ಕಲಾವಿದರು ಮೊದಲು ಸ್ಥಳವೊಂದರ ಸಹಜ ಮೇಲ್ಮೈ ಗುಣಲಕ್ಷಣಗಳು, ದೃಶ್ಯಧ್ಯಾನದ ವಾಸ್ತು ಶಿಲ್ಪಿಯ ಲಕ್ಷಣಗಳು, ಮುಖ್ಯವಾಗಿ ಕಲಾಕೃತಿಯನ್ನು ಪ್ರದರ್ಶಿಸುವಾಗ ಸುತ್ತಲೂ ಗೋಡೆಗಳಿರುವ ಹಾಗೂ ಸುತ್ತಲೂ ಗೋಡೆಗಳಲ್ಲದ ಅವಕಾಶದ(Space)ನಡುವೆ ವೀಕ್ಷಕರನ್ನಿಟ್ಟು ಕಲ್ಪಿಸಿಕೊಂಡು 'ನಿರ್ದಿಷ್ಟ', 'ಅನಿರ್ದಿಷ್ಟ' ಸ್ಥಳಗಳ ನಡುವೆ ಅಭಿವ್ಯಕ್ತಿಸುವ ಪ್ರಕ್ರಿಯೆಯನ್ನು ಸೃಷ್ಟಿಸಿಕೊಳ್ಳತೊಡಗಿದರು. ಇದಕ್ಕೆ ಕಾರಣ ನಮ್ಮ ಕಲಾವಿದರು ಹಣ, ಗ್ಯಾಲರಿ, ಮಾರಾಟ ಇತ್ಯಾದಿಗಳ ರಾಜಕಾರಣದಿಂದ ರೋಸಿಹೋಗಿ ಸರಕು ಸಂಸ್ಕೃತಿಯಿಂದ ಕಲೆಯನ್ನು ಬಿಡುಗಡೆಗೊಳಿಸಲು ತಮ್ಮ ದೃಷ್ಟಿಯನ್ನು ಇನ್‌ಸ್ಟಾಲೇಷನ್ ಕಲೆಯತ್ತ ಬೀರಿದರು. ಮುಂದೆ ಈ ಅಭಿವ್ಯಕ್ತಿಯ ಕುರಿತಾಗಿ ಅನೇಕರು ತಮ್ಮ ತಮ್ಮ ವ್ಯಾಖ್ಯಾನಗಳನ್ನು ನೀಡಿರುವ ಕೆಲವು ಅಂಶಗಳನ್ನು ಲೇಖಕರು ನಮ್ಮ ಮುಂದಿಟ್ಟಿದ್ದಾರೆ. ಇವುಗಳೆಲ್ಲದರ ಒಟ್ಟು ಅಂಶ Ultimate defination ಎಂದು ಸ್ಪಷ್ಟವಾಗಿ ಹೇಳಲು ಸಾಧ್ಯವಿಲ್ಲ.

೨೦ನೇ ಶತಮಾನದಲ್ಲಿ ಬಹುಮುಖ್ಯ ಕಲಾಪ್ರಕಾರಗಳಲ್ಲಿ ಒಂದಾಗಿ ಬೆಳೆದು, ಪಾಶ್ಚಾತ್ಯ ಕಲಾವಿದರನೇಕರು ತಮ್ಮ ಅಭಿವ್ಯಕ್ತಿಗಳಿಗೆ ಈ ಕಲೆಯನ್ನು ದುಡಿಸಿಕೊಂಡರು. ಅಭಿವ್ಯಕ್ತಿ ಪ್ರಕಾರಗಳೊಂದಿಗೆ, ೧೯೬೦ರಲ್ಲಿ ಈ ಕಲೆ ತನ್ನ ಬೇರುಗಳನ್ನು ಭದ್ರಪಡಿಸಿಕೊಂಡಿತು. ನಂತರದಲ್ಲಿ ವೀಡಿಯೋ ಕಲೆಗಳು ಇದರಲ್ಲಿ ಹೊಸ ಸೃಷ್ಟಿಗಳು ಕಾಣತೊಡಗಿದವು. ಸ್ತ್ರೀಸಂವೇದನೆಯ ಹಲವು ಮುಖಗಳು ತೆರೆದುಕೊಂಡು ವೀಕ್ಷಕರನ್ನು ಬೆರಗುಗೊಳಿಸಿದವು. ವೀಕ್ಷಕರು ಇದರಲ್ಲಿ ವಿಶಿಷ್ಟ ರೀತಿಯಾಗಿ ಪಾಲ್ಗೊಳ್ಳುವುದು ಒಂದು ವಿಶೇಷವೇ ಸರಿ. ಈ ಪ್ರಕಾರದಲ್ಲಿ ಕಲಾಭಿವ್ಯಕ್ತಿಯ ಪ್ರಸ್ತುತ

ಸಂದರ್ಭದಲ್ಲಿ ಕಲೆ ಮತ್ತು ಬದುಕು ಇವೆರಡರ ನಡುವಿನ ಅಡ್ಡರೇಖೆಯನ್ನು ಇಲ್ಲವಾಗಿಸುವತ್ತ ಸಾಗುತ್ತಿದೆ ಎಂಬ ಅಂಶಗಳನ್ನು ಲೇಖಕರು ಮುಂದಿಟ್ಟಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ ಇದರ ಮುಂದುವರೆದ ರೂಪವಾದ ವೀಕ್ಷಕರು ಅಭಿವ್ಯಕ್ತಿಯ ಅವಿಭಾಜ್ಯ ಅಂಶವಾಗಿ ಎಂಬ ಅಂಶಗಳನ್ನು ಲೇಖಕರು ಸ್ಪಷ್ಟಪಡಿಸುತ್ತಾರೆ. ನಾಟಕ ಹಾಗೂ ಇನ್‌ಸ್ಟಾಲೇಷನ್‌ಗಳ ನಡುವೆ ಒಂದು ಶಕ್ತಿಯುತ ಸಮಾನತೆ ಇದೆ. ಅದು ವೀಕ್ಷಕನ ಅವಲಂಬನೆ ಅಲ್ಲಿ ವೀಕ್ಷಕ ತನ್ನನ್ನು ಅರ್ಪಿಸಿಕೊಂಡುಬಿಡುತ್ತಾನೆ. ಆದರೆ ಇನ್‌ಸ್ಟಾಲೇಷನ್ ಕಲೆಯ ವೀಕ್ಷಕ 'ಕುತೂಹಲ', 'ಕಾತರ' ಎಲ್ಲವುಗಳನ್ನು ಒಳಗೊಂಡು ಅನುಭವದಲ್ಲಿ ತನ್ನನ್ನು ಸಂಪೂರ್ಣವಾಗಿ ಸಮರ್ಪಿಸಿಕೊಂಡು ತಾನು ಪ್ರದರ್ಶನದಲ್ಲಿ ಪಾಲ್ಗೊಂಡಿದ್ದೇನೆ ಎಂಬ ಎಚ್ಚರ ಹೊಂದಿರುತ್ತಾನೆಂದು ಅವನನ್ನು ದೃಷ್ಟಿಯಲ್ಲಿಟ್ಟುಕೊಂಡೇ ಆ ನಿರ್ದಿಷ್ಟ ದೃಶ್ಯಲೋಕ ನಿರ್ಮಿತಗೊಂಡಿರುತ್ತದೆ.

ನಂತರ ಈ ಇನ್‌ಸ್ಟಾಲೇಷನ್ ಪದದ ಅರ್ಥವನ್ನು ಸ್ಪಷ್ಟಪಡಿಸುತ್ತ ವೀಕ್ಷಕನು ಆ ಅಭಿವ್ಯಕ್ತಿಯ್ಲಲಿ ತೊಡಗಿಕೊಂಡ ಅನುಭವಗಳು, ಅದರಲ್ಲಿಯೇ ತಾವೂ ಒಂದು ಮಾಧ್ಯಮವಾಗಿ ವಹಿಸಿಕೊಂಡು ನಡೆದಾಡುವ ಮಾದರಿ ಒಟ್ಟಾರೆ ಅಂಶಗಳನ್ನು ತಿಳಿಸಿಕೊಂಡು ಹೋಗಿದ್ದಾರೆ. ಅಲ್ಲದೆ ಇದರ ಬೆಳವಣೀಗೆಯಲ್ಲಿನ ಮಹತ್ವಪೂರ್ಣವಾದ ಮಾಧ್ಯಮಗಳ ಒಳಗೆ, ಕಲಾಪಂಥಗಳ ಪ್ರಭಾವ ಈ ಎಲ್ಲ ಅಂಶಗಳೆನ್ನಿಟ್ಟುಕೊಂಡು ಕಲಾವಿದ ರೂಪಿಸುವ ಇನ್‌ಸ್ಟಾಲೇಷನ್ ಕಲಾ ಪ್ರಕಾರವು ವಿಶೇಷತೆಯನ್ನು ಹೆಚ್ಚಿಸಿಕೊಳ್ಳುತ್ತಾ ಹೋಗುತ್ತದೆ. ಈ ನಿಟ್ಟಿನಲ್ಲಿ ನಮ್ಮ ಭಾರತೀಯ ಕಲಾವಿದರೂ ದೊಡ್ಡ ದೊಡ್ಡ ರೀತಿಯಲ್ಲಿ ಅಭಿವ್ಯಕ್ತಿಗಳನ್ನು ಪ್ರದರ್ಶಿಸಿದ್ದಾರೆ. ಈ ಪ್ರದರ್ಶನಗಳಲ್ಲಿ ಜಾಗತಿಕ, ಹೊಸತನದ ಒತ್ತಡಗಳಲ್ಲಿ ಅಭಿವ್ಯಕ್ತಿಸುತ್ತಿರುವುದು ಪ್ರಮುಖ ಅಂಶವಾಗಿದೆ. ಈ ಕಲೆಯ ಸ್ಪಷ್ಟತೆ ಹಾಗೂ ಸಾಧ್ಯತೆಗಳನ್ನು ಬಿಂಬಿಸಲು ದೊಡ್ಡ ರೀತಿಯಲ್ಲಿ ಅಭಿವ್ಯಕ್ತಿಸಿದ, ರಾಬರ್ಟ್ ಸ್ಮಿತ್, ಮೈಖೇಲ್ ಹೈಝೆರ್, ನ್ಯಾನ್ಸಿಹಾಲ್, ಜೇಮ್ಸ್, ಟುರೆಲ್, ವಾಲ್ಟರ್‌ಡಿ ಮಾರಿಯಾ, ಕ್ರಿಸ್ಟೊ, ಬಿಟನ್ನಿನ ಟ್ರಾಸಿ ಎಮಿನ್, ಮೊರ್ಕ್ ಘೋವೆಲ್, ಮೈಖೇಲ್ ಲ್ಯಾಂಡಿ ಇನ್ನು ಅನೇಕರು ತಮ್ಮ ಅಭಿವ್ಯಕ್ತಿಗಳಲ್ಲಿ ತಮ್ಮನ್ನು ವಿಸರ್ಜಿಸಿಕೊಂಡು ವಿಶಿಷ್ಟ ಅನುಭವ ಲೋಕದಲ್ಲಿ ಪ್ರೇಕ್ಷಕರೊಂದಿಗೆ ಆನಂದಿಸುವ ಕಲಾವಿದರು ವಿಶಿಷ್ಟ ಸೃಷ್ಟಿಗೆ ಕಾರಣರಾಗುತ್ತಿದ್ದಾರೆ. ಇದೇ ನಿಟ್ಟಿನಲ್ಲಿ ೧೯೬೦ರಲ್ಲಿ ಭೂಪೇನ್ ಖಾಕರ್, ವಿವ್ಯಾನ್‌ಸುಂದರಂ 'Pop'ಕಲೆಗೆ ಹತ್ತಿರವಾಗಿ ಬರೋಡಾದಲ್ಲಿ ಕೈಗೊಂಡ ಹಲವು ಪ್ರಯೋಗಗಳನ್ನು ಮಾಡಿದ್ದು ಇದಕ್ಕೆ ಎಂ.ಎಫ್.ಹುಸೇನ್ 'Six days of creation' ಶೀರ್ಷಿಕೆಯ 'Performance'ಗಳನ್ನು ಕೊಡಲಾರಂಭಿಸಿದನು. ಪ್ರಾರಂಭದಲ್ಲಿ ಕನ್ನಡದ ಪುಷ್ಪಮಾಲಾ, ವಿವಾನ್ ಸುಂದರಂ ತಮ್ಮ ಏಕವ್ಯಕ್ತಿ ಪ್ರದರ್ಶನವನ್ನು ಮಾಡಿದರು. ನಂತರ ಎನ್.ಪುಷ್ಪ ಮಾಲಾ, ಶೀಲಾಗೌಡ, ಲಲಿತಾಶಂಕರ್, ರವಿಕುಮಾರ್ ಕಾಶಿ, ಶಾಂತಮಣಿ, ರವಿಶಂಕರರಾವ್, ರಮೇಶಚಂದ್ರ ಹೀಗೆ ಅನೇಕರು ಇನ್‌ಸ್ಟಾಲೇಷನ್ ಕಲೆಯ ಮೂಲಕ ಮಾತ್ರ ಅಭಿವ್ಯಕ್ತಿಸುವ ಧೋರಣೆಯನ್ನು ಅರಗಿಸಿಕೊಂಡಿರುವುದನ್ನು ಲೇಖಕರು ಪ್ರಸ್ತಾಪಿಸಿದ್ದಾರೆ. ಇತ್ತೀಚೆಗೆ ಬೆಂಗಳೂರಿನ ಹೊರವಲಯದಲ್ಲಿ

ತಮ್ಮ ಅಭಿವ್ಯಕ್ತಿಯನ್ನು ಪ್ರಸ್ತುತಪಡಿಸಿದ ಉಮೇಶ್‌ರವರು ಹೆಚ್ಚಿನ ಜನರ ಮನ್ನಣೆಯನ್ನು ಪಡೆದುದ್ದಾಗಿದೆ. ಹೀಗೆ ನಮ್ಮ ನಡುವೆ ಹಲವು ವೈವಿಧ್ಯಮಯ ಅನುಭವಲೋಕವನ್ನು ವೀಕ್ಷಕರಿಗೆ ಸೃಷ್ಟಿಸಿಕೊಟ್ಟ ಹಲವರು ಇನ್ನು ಹೊಸ ಹೊಸ ಸಾಧ್ಯತೆಗಳತ್ತ ಇನ್‌ಸ್ಟಾಲೇಷನ್ ಕಲೆಯನ್ನು ಕೊಂಡೊಯ್ಯುವ ಪ್ರಯತ್ನದಲ್ಲಿದ್ದಾರೆ. ದೃಶ್ಯಕಲೆ ಇನ್ನು ಹತ್ತು ಹಲವು ಪ್ರಕಾರಗಳ ನಡುವೆ ಇನ್‌ಸ್ಟಾಲೇಷನ್ ಕಲೆ ಹಲವು ರೀತಿಗಳಲ್ಲಿ ವಿಸ್ತರಿಸಿಕೊಳ್ಳುವ ಆಶಯಗಳು ಹಲವರ ದೃಷ್ಟಿ ಧೋರಣೆಗಳನ್ನು ಲೇಖಕರು ಇಲ್ಲಿ ನೀಡಿದ್ದಾರೆ.

ಮೂರನೆಯ ಅಧ್ಯಾಯ 'ವೀಕ್ಷಕರ ಸುತ್ತಮುತ್ತ ಕಾಣಿಸಿಕೊಂಡ ಕೆಲವು ಆಯ್ದ ಇನ್‌ಸ್ಟಾಲೇಷನ್ ಅಭಿವ್ಯಕ್ತಿಗಳು' ಎಂಬ ಶೀರ್ಷಿಕೆಯಡಿ ಕಲಾವಿದರು ಅಭಿವ್ಯಕ್ತಿಸಿದ ಇನ್‌ಸ್ಟಾಲೇಷನ್ ಕಲಾಪ್ರದರ್ಶನಗಳ ಕುರಿತಾಗಿ ಬಂದಿರುವ ಲೇಖನಗಳನ್ನು ಇಲ್ಲಿ ಕಟ್ಟಿ ಕೊಡಲಾಗಿದೆ. ಅವುಗಳಲ್ಲಿ 'ಬಹುಮಾಧ್ಯಮದಲ್ಲಿ ಸಮಕಾಲೀನ ಹಿಂಸೆ' ಎಂಬ ಲೇಖನದಲ್ಲಿ ಉಮೇಶರವರ ವ್ಯಕ್ತಿತ್ವ, ಕಲಾಕೌಶಲ್ಯ ಜೊತೆಗೆ ಅವರ ಕಲಾಭಿವ್ಯಕ್ತಿಯನ್ನು ಬಿಂಬಿಸುವ ವಿಷಯಗಳನ್ನು ಇಲ್ಲಿ ನೆನಪಿಸುತ್ತಾರೆ. ಇದು Rights Rots ಕಾಲ ನಿರ್ದಿಷ್ಟ ವೀಡಿಯೊ, ಶಿಲ್ಪ, ಶಬ್ದ, ದೃಶ್ಯ, ಬಹುಮಾಧ್ಯಮವನ್ನು ದುಡಿಸಿಕೊಂಡ ಅಭಿವ್ಯಕ್ತಿಯ ಪ್ರದರ್ಶನವಾಗಿದೆ. ಸುಶಾಂತ್ ಮಂಡಲ್‌ರವರ ಒಂದು ಇನ್‌ಸ್ಟಾಲೇಷನ್ ಕಲೆಯ ನೋಟ ೨೦೦೭ ಎಂಬ ಲೇಖನದಲ್ಲಿ 'It Doesn't Bite' ಎಂಬ ಶೀರ್ಷಿಕೆಯನ್ನೊಳಗೊಂಡ ಪ್ರದರ್ಶನದಲ್ಲಿ ಸೋಪು ನೀರಿನ ಗುಳ್ಳೆಗಳ ಸುತ್ತ ಹರಿದ ದೃಶ್ಯಕಲಾ ಲಹರಿ ಚಲನಶೀಲ ಅಭಿವ್ಯಕ್ತಿ ವೀಕ್ಷಕರನ್ನು ಆಕರ್ಷಿಸಿ ಬಹುಮಾಧ್ಯಮದ ಅಭಿವ್ಯಕ್ತಿ ಎನ್ನಲಾಗಿದೆ. ಬಹುಮುಖಿ ಸಂಸ್ಕೃತಿಗಳ ನಡುವಿನ ಅಭಿವ್ಯಕ್ತಿ ಎಂಬ ಲೇಖನದಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ನಡೆದ ಕಲಾವಿದರ ಕಾರ್ಯಾಗಾರವಾಗಿದ್ದು ಇನ್‌ಸ್ಟಾಲೇಷನ್ ಕಲೆ ಹಾಗೂ ಹ್ಯಾಪನಿಂಗ್ಸ್ ಎಂಬ ವಿಷಯವಾಗಿ ನಡೆದುದ್ದಾಗಿದೆ. ವಿವಿಧ ದೇಶಗಳಿಂದ ಆಗಮಿಸಿದ ಕಲಾವಿದರಿಂದ ಅಲ್ಲಿನ ನೆಲ, ಗಿಡಮರ, ಕಟ್ಟಡ, ಕಟ್ಟಡದ ನೆಲ, ಗೋಡೆ, ಸೂರು, ಕಲ್ಲು ಇತ್ಯಾದಿಗಳೇ ಅಲ್ಲದೆ ಭೂಮಿಯಿಂದ ಮೊಳಕೆಯೊಡೆದ ರಾಗಿಯ ಪೈರನ್ನು ಸಹ ಕಲಾವಿದನು ತಮ್ಮ ಅಭಿವ್ಯಕ್ತಿಗೆ ದುಡಿಸಿಕೊಂಡು ರಚನೆಯಾಗಿದೆ ಎನ್ನುತ್ತಾರೆ. ಇಂತಹ ಅನೇಕ ಮಾಧ್ಯಮಗಳನ್ನು ತಮ್ಮ ವಸ್ತುಗಳನ್ನಾಗಿಸಿಕೊಂಡು ಪ್ರದರ್ಶಿಸಿದಂತಹ ಅಭಿವ್ಯಕ್ತಿಗಳ ಕುರಿತಾಗಿ ಬಂದಿರುವ **"ಮನಸ್ಸು ದೇಹ ಧ್ಯಾನ, ಯೋಗ, ಪ್ರಜ್ಞಾ ಪ್ರವಾಹ", "ದೃಶ್ಯಭಾಷೆಯಲ್ಲಿ ಹೊಸತನ", ವೀಕ್ಷಕರೂ ಅಭಿವ್ಯಕ್ತಿಯ ಅಂಶವಾದಾಗ, ಖೋಜ್ ೨೦೧೩, "ವಾಸ್ತು ಶಿಲ್ಪಿಯ ಅಭಿವ್ಯಕ್ತಿ", "ಸಮಕಾಲೀನ ಕಲಾ ರಾಜಕಾರಣ ಮತ್ತು ಅಭಿವ್ಯಕ್ತಿ", "ಮಹತ್ವಾಕಾಂಕ್ಷೆಯ ಅಭಿವ್ಯಕ್ತಿ", 'ನಗರೀಕರಣದ ಕಪ್ಪು ಕಲೆ", "ಗುಜರಿಯ ನಡುವೆ ಮಹಾಬಜಾರು", "ಕಾಂಚನ್ ಚಂದರ್ ಹಾಗೂ ಹೆಲನ್ ಗೈಲುರ್‌ರವರ ಕರೋಲ್ ಬಾಗ್‌ನಿಂದ ಟಾಸ್‌ಕಾಟ್‌ವರೆಗೆ** ಇನ್‌ಸ್ಟಾಲೇಷನ್ ಕಲೆ' 'ದೃಶ್ಯ ಸಂಸ್ಕೃತಿ ಶಬ್ದ ಮಾಧ್ಯಮ', 'ಕಾಗದ/paper traits', 'ಕಲಾಭಿವ್ಯಕ್ತಿಯಲ್ಲಿ ದೇಶೀ ಸೊಗಡು' 'ನಗರ ಸಂಸ್ಕೃತಿಯ ರಾಜಕಾರಣ, 'ಹೊದಿಯುವ ಕವುದಿ ಮತ್ತು ಅನುಭವದ

**ಪದಗಳು, 'ವೀಕ್ಷಕನ ಪಾರಮ್ಯ ಸಾಧಿಸುವ ಇನ್‌ಸ್ಟಾಲೇಷನ್ ಅಭಿವ್ಯಕ್ತಿ', ಕೃಷ್ಣಾಮಚಾರಿ ಭೋಸ್‌ರವರ 'ಲಾವಾ.... ಬೆಂಗಳೂರಿನ ಬೀದಿಯಲ್ಲಿ ನಿದ್ರಿಸಿದ ಬರ್ಲಿನ್ ಕಲಾವಿದೆ'** ಎಂಬ ಲೇಖನಗಳ ವಿವರಣೆಯನ್ನು ಇಲ್ಲಿ ಕಟ್ಟಿಕೊಡಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಇನ್‌ಸ್ಟಾಲೇಷನ್ ಕಲಾಪ್ರದರ್ಶನಗಳ ಕುರಿತಾಗಿ ಕಲಾವಿದರೇ ತಮ್ಮ ಸ್ವ ಅಭಿವ್ಯಕ್ತಿಯನ್ನು ಹೇಳಿಕೊಂಡಿರುವ ಕೆಲವು ಪ್ರಮುಖ ಕಲಾವಿದರ ಅಭಿಪ್ರಾಯಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಅಂತವರಲ್ಲಿ ಪುಷ್ಪಮಾಲಾ, ನವೀನ ಥಾಮಸ್, ಸುನೋಜ್, ಎನ್, ರಾಜಕುಮಾರ್ ಮಜಂದಾರ್, ಪುರುಷೋತ್ತಮ ಅಡ್ವೆ, ಭವಾನಿ ಜಿ.ಎಸ್., ಗೋಪಾಲ್ ಕುಮ್ಮರ, ವೆಂಕಟಾಚಲಪತಿ ಈ ಪುಸ್ತಕದ ಲೇಖಕರು ಆದ ಕೆ.ವಿ.ಸುಬ್ರಹ್ಮಣ್ಯಂ ಇನ್ನೂ ಅನೇಕರ ಹೇಳಿಕೆ ಗಳಿದ್ದು ಹೆಚ್ಚಾಗಿ ಇಂಗ್ಲೀಷ್ ಬರಹಗಳನ್ನು ಇಲ್ಲಿ ಕಾಣಬಹುದಾಗಿದೆ.

ಒಟ್ಟಾರೆ ಇನ್‌ಸ್ಟಾಲೇಷನ್ ಕಲಾಪ್ರಪಂಚ ಎಂಬ ಕೃತಿಯು ಹೆಸರೇ ಸೂಚಿಸುವಂತೆ ಇನ್‌ಸ್ಟಾಲೇಷನ್ ಎಂಬ ಕಲಾಪ್ರಕಾರದ ಅಭಿವ್ಯಕ್ತಿಗೆ ಒಳಗೊಳ್ಳುವ ಪ್ರದರ್ಶನಗಳು, ಕಲಾವಿದರ ಅಭಿವ್ಯಕ್ತಿಗಳನ್ನಿಟ್ಟುಕೊಂಡು ಪೂರಕವಾದ ಕಪ್ಪು ಬಿಳುಪು ಛಾಯಾಚಿತ್ರಗಳು, ಬಣ್ಣದ ಛಾಯಾಚಿತರಗಳು ಇಲ್ಲಿ ಕಾಣಿಸಿಕೊಂಡಿದ್ದು ಓದುಗರಿಗೆ ಬರವಣಿಗೆಯ ಮೂಲಕವಲ್ಲದ ಚಿತ್ರದ ಮುಲಕವೇ ಒಟ್ಟು ಸಾರಂಶವನ್ನು ಅರ್ಥ ಮಾಡಿಕೊಡುವ ನಿಟ್ಟಿನಲ್ಲಿ ಲೇಖಕರು ವಿವರಣೆಗಳನ್ನು ನೀಡಿದ್ದು, ಸಂಕ್ಷಿಪ್ತತೆಯನ್ನು ಕಾಯ್ದುಕೊಂಡು ಹೆಚ್ಚು ವಿಷಯದ ಆಳವನ್ನು ಒಳಗೊಂಡಂತಹ ಕೃತಿಯಾಗಿದೆ. ಯುವ ಕಲಾವಿದರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕೊಡುವ ನಿಟ್ಟಿನಲ್ಲಿ ಅರ್ಥಮಾಡಿಸುವಂತೆ ಉತ್ತಮ ಕೃತಿಯಾಗಿದ್ದು,

**ಟಿಪ್ಪಣಿಗಳು**

೧. ಸುಬ್ರಹ್ಮಣ್ಯಂ ಕೆ.ವಿ., **ಮಧ್ಯಪ್ರದೇಶದ ಕಲೆ,** ೧೯೯೫

೨. ಸುಬ್ರಹ್ಮಣ್ಯಂ ಕೆ.ವಿ., **ಫೋಟೋರಿಯಲಿಸಂ,** ೧೯೯೫

೩. ಸುಬ್ರಹ್ಮಣ್ಯಂ ಕೆ.ವಿ., **ಕಲಾಸಂವೇದನೆಯ ಒಳನೋಟಗಳು,** ೧೯೯೭

೪. ಸುಬ್ರಹ್ಮಣ್ಯಂ ಕೆ.ವಿ., **ಮುಖಗಳೊಂದಿಗೆ ಮುಖಾಮುಖಿ,** ೨೦೦೪

೫. ಸುಬ್ರಹ್ಮಣ್ಯಂ ಕೆ.ವಿ., **ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ,** ೨೦೦೭

೬. ಸುಬ್ರಹ್ಮಣ್ಯಂ ಕೆ.ವಿ., **ಇನ್‌ಸ್ಟಾಲೇಷನ್ ಕಲಾಪ್ರಪಂಚ,** ೨೦೦೮

## ಅಧ್ಯಾಯ ಆರು

# ಕ್ಯಾಟಲಾಗ್ ದೃಶ್ಯಕಲಾ ಸಾಹಿತ್ಯ

ಈಚಿನ ಎರಡು ಮೂರು ದಶಕಗಳಲ್ಲಿ ಕ್ಯಾಟಲಾಗ್ ಸಾಹಿತ್ಯವೂ ತಕ್ಕಮಟ್ಟಿಗೆ ಬೆಳೆದಿದೆ. ದೃಶ್ಯಕಲಾವಿದರು ತಮ್ಮ ಕಲಾಕೃತಿಗಳ ಏಕವ್ಯಕ್ತಿ ಪ್ರದರ್ಶನ ಇಲ್ಲವೆ ಒಬ್ಬರಿಗಿಂತ ಹೆಚ್ಚು ಕಲಾವಿದರು ಸೇರಿ ಗುಂಪು ಕಲಾಪ್ರದರ್ಶನ ಮಾಡುವ ಸಂದರ್ಭಗಳಲ್ಲಿ ಕಲಾವಿದರ ಹಾಗೂ ಅವರ ಕಲಾಕೃತಿಗಳ ಸಂಕ್ಷಿಪ್ತ ಮಾಹಿತಿಯನ್ನೊಳಗೊಂಡು 'ವಿವರಣ ಪತ್ರ'ವನ್ನು ಮುದ್ರಿಸುವುದುಂಟು. ಇದನ್ನೇ ಇಂಗ್ಲೀಷ್‌ನಲ್ಲಿ 'ಕ್ಯಾಟಲಾಗ್' ಎನ್ನುವರು.

ಆರಂಭದಲ್ಲಿ ತೀರ ಸರಳವಾಗಿ ಇರುತ್ತಿದ್ದ ಕ್ಯಾಟಲಾಗ್‌ಗಳನ್ನು ಈಚೆಗೆ ಹಲವು ಕಲಾವಿದರು ತುಂಬ ಆಕರ್ಷಕವಾಗಿ, ವರ್ಣರಂಜಿತವಾಗಿ ಮುದ್ರಿಸುವುದು ಕಂಡುಬರುತ್ತದೆ. ಒಂದು ಆಕರ್ಷಕ ಮತ್ತು ಪರಿಪೂರ್ಣವಾದ ಕ್ಯಾಟಲಾಗ್ ಗರಿಷ್ಟ ಎಂದರೆ ಕಲಾವಿದರ ಕಲಾಕೃತಿಗಳ ಮುದ್ರಿತ ಛಾಯಾಚಿತ್ರಗಳು, ಅವುಗಳ ವಿವರ, ಕಲಾವಿದರ ಪರಿಚಯ ಲೇಖ(BIO-DATA), ಭಾವಚಿತ್ರ, ಇವುಗಳೊಂದಿಗೆ ಅಪರೂಪಕ್ಕೆ ಕಲಾವಿಮರ್ಶೆ ಇರುತ್ತದೆ.

ಹಲವು ಕಲಾವಿದರು ಈ ತರಹದ ಕ್ಯಾಟಲಾಗ್‌ಗಳಿಗೆ ತಜ್ಞರಾದ ವಿಮರ್ಶಕರು/ಕಲಾ ಇತಿಹಾಸಕಾರರಿಂದ ವಿಮರ್ಶೆ ಬರೆಯಿಸಿ ಮುದ್ರಿಸಿರುವುದುಂಟು. ಈ ತರಹದ ಕ್ಯಾಟಲಾಗ್‌ಗಳಿಂದ ಕಲಾಪ್ರದರ್ಶನ ನೋಡಲು ಬಂದ ಸಹೃದಯರಿಗೆ ಕಲಾಕೃತಿಗಳ ವೀಕ್ಷಣೆ–ಅರ್ಥ ಮಾಡಿಕೊಳ್ಳುವುದಕ್ಕೆ ಸಹಕಾರಿಯಾಗುತ್ತವೆ. ಅಲ್ಲದೆ ಕಲಾವಿದರಿಗೆ, ಕಲಾ ಚರಿತ್ರೆಗೆ ದಾಖಲೆಯಾಗಿಯೂ ಉಳಿಯುತ್ತದೆ.

ಕರ್ನಾಟಕದಲ್ಲಿ ಕೆಲವೇ ಕೆಲವು ವಿಮರ್ಶಕರು ಕ್ಯಾಟಲಾಗ್‌ಗಳನ್ನು ಬರೆದಿದ್ದಾರೆ. ಎಸ್.ಎನ್.ಚಂದ್ರಶೇಖರ್, ಬಿ.ವಿ.ಕೆ.ಶಾಸ್ತ್ರಿ, ಚಿ.ಸು.ಕೃಷ್ಣಶೆಟ್ಟಿ, ಅಶೋಕ ಶೆಟ್ಟರ್, ಪ್ರಮಿಳಾಲೋಚನ, ಡಾ.ಶಿವಾನಂದ ಬಂಟನೂರ ಮೊದಲಾದವರಿದ್ದಾರೆ. ಈ ಪಟ್ಟಿಯಲ್ಲಿ ಹಿರಿಯ ಕಲಾವಿಮರ್ಶಕರಲ್ಲಿ ಪ್ರಮುಖರಾಗಿ ಎದ್ದು ಕಾಣುವ ಹೆಸರು ಕೆ.ವಿ.ಸುಬ್ರಹ್ಮಣ್ಯಂ ಅವರದು.

ಕೆ.ವಿ.ಸುಬ್ರಹ್ಮಣ್ಯಂ ಅವರು ಹಲವಾರು ಕ್ಯಾಟಲಾಗ್‌ಗಳನ್ನು ಬರೆದಿರುವರು.[7] ಕಲಾ ಇತಿಹಾಸಕಾರ ಮತ್ತು ವಿಮರ್ಶಕರಗಿರುವ ಇವರಿಂದ ಕನ್ನಡ ಮತ್ತು ಇಂಗ್ಲೀಷ್ ಭಾಷೆಗಳೆರಡರಲ್ಲೂ

ಕ್ಯಾಟಲಾಗ್ ಬರಹಗಳು ಪ್ರಕಟಗೊಂಡಿವೆ. ಅರ್ಥವತ್ತಾದ ಪದಗಳು, ಸಂಕ್ಷಿಪ್ತವಾಗಿದ್ದರೂ ಪರಿಪೂರ್ಣವೆನಿಸುವ ವಿಷಯದ ಹರವು, ಕಲಾಕೃತಿಗಳನ್ನು ಆಳವಾಗಿ ಬೆದಕಿ ನಿರೂಪಿಸುವ ಕ್ರಮ ಮೊದಲಾದ ಗುಣಗಳಿಂದ ಇವರ ಕ್ಯಾಟಲಾಗ್ ಬರಹಗಳಿಗೆ ದೃಶ್ಯಕಲಾ ವಲಯದಲ್ಲಿ ಒಂದು ಗಂಭೀರ ಅಭಿಪ್ರಾಯವಿದೆ.

ಇವರು ಬರೆದ ಮೌಖಿಕವಾದ ಕೆಲವು ಕ್ಯಾಟಲಾಗ್‌ಗಳು ಉದಾಹರಣೆಯಾಗಿ ಇಲ್ಲಿ ನೋಡಬಹುದು.

**೩೨ನೇ ವಾರ್ಷಿಕ ಕಲಾಪ್ರದರ್ಶನ (ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು)**[೧]

ಕರ್ನಾಟಕ ಲಲಿತಕಲಾ ಅಕಾಡೆಮಿ ಮಾರ್ಚ್ ೨೦೦೩ರಲ್ಲಿ ತನ್ನ ೩೨ನೇ ವಾರ್ಷಿಕ ಕಲಾಪ್ರದರ್ಶನವನ್ನು ಹೊನ್ನಾವರದಲ್ಲಿ ಏರ್ಪಡಿಸಿತ್ತು. ಈ ಪ್ರದರ್ಶನಕ್ಕೆ ಆಯ್ಕೆಯಾದ ಕಲಾವಿದರ ಅಭಿವ್ಯಕ್ತಿ ಕೃತಿಗಳ ಕುರಿತಾಗಿ ಕೆ.ವಿ.ಸುಬ್ರಹ್ಮಣ್ಯಂರವರು ಈ ಕ್ಯಾಟಲಾಗ್ ಬರಹದಲ್ಲಿ ಪರಿಚಯಿಸಿದ್ದಾರೆ. "ಸರಕು ಸಂಸ್ಕೃತಿಯ ಸಹಿ ಹಾಕಿಸಿಕೊಂಡ ಅಭಿವ್ಯಕ್ತಿ" ಎಂಬ ಶೀರ್ಷಿಕೆಯಡಿಯಲ್ಲಿ ಈ ಕೆಳಗಿನ ವಿಷಯಗಳು ಒಳಗೊಂಡಿರುವುದು ಕಾಣಬಹುದಾಗಿದೆ.

ಜಾಗತೀಕರಣದ ಫಲವೆಂಬಂತೆ ನಮ್ಮ ನಡುವೆ ಬೆಳೆದು ಹೆಮ್ಮರವಾಗಿರುವ Information technologyಯ ಜತೆ ಜತೆಗೇ ಹೆಜ್ಜೆ ಹಾಕುತ್ತಿರುವ ನಮ್ಮ ಯುವ ಪ್ರತಿಭೆಗಳ ಅಭಿವ್ಯಕ್ತಿಗಳಲ್ಲಿ ಸ್ಥಳೀಯ ಸೊಗಡಿನ ಪ್ರೀತಿ ಶಕ್ತಿಯುತವಾಗಿ ಕಾಣಿಸಿಕೊಂಡಿದೆ.

ಇಮ್ಯಾನ್ಯುಯಲ್ ಕಾಂಟ್ 'Beaut Feminine and the Sublime masculine' ಎಂದು ಹೇಳಿರುವುದು ಇಲ್ಲಿ ನೆನಪಾಗುತ್ತಿದೆ. ಆದರೂ ಸ್ತ್ರೀವಾದಿತತ್ವ ಬದುಕಿನ ಅನುಭವದಿಂದ ವಂಚಿತವಾಗಿ ಸ್ತ್ರೀಲಿಂಗದ ವೈಭವೀಕರಣವನ್ನೇ ಉದ್ದೇಶವಾಗಿಟ್ಟುಕೊಳ್ಳುತ್ತಿರುವ ಇಂದಿನ ದಿನಗಳಲ್ಲಿ ಬಂಡುಕೋರ ಸ್ತ್ರೀವಾದವನ್ನೂ ನಾವು ನೋಡುತ್ತಿದ್ದೇವೆ. ಸ್ವಲ್ಪ ವಿಭಿನ್ನವೆಂಬಂತೆ ಗಂಭೀರವಾಗಿ ನಮ್ಮ ಕಲಾವಿದೆಯರು ಅಭಿವ್ಯಕ್ತಿಸುತ್ತಿರುವುದು ಗಮನಾರ್ಹ. ತಮ್ಮ ವಿಶಿಷ್ಟ ಅನುಭವ ಗ್ರಹಿಕೆಗಳಿಂದ ಪ್ರಸ್ತುತ ಪ್ರದರ್ಶನದ ರೇಣುಕಾ ಮಾರ್ಕಂಡೆ. ಸುಧಾಕುಮಾರಿ, ಸುಪ್ರಿಯಾವರ್ಮ, ರೂಪ ಬಿ.ಆರ್., ಪ್ರತಿಭಾ ಎ. ಗಮನ ಸೆಳೆಯುತ್ತಾರೆ.

ಸಮಕಾಲೀನ 'ಭವ್ಯತೆ' ಮನುಚಕ್ರವರ್ತಿ ಹಾಗೂ ರಾಜ ತೆರದಾಳರ ಅಭಿವ್ಯಕ್ತಿಗಳಲ್ಲಿ ಕಾಣಿಸಿಕೊಂಡಿರುವ ರೀತಿ ಕೌತುಕವನ್ನುಂಟು ಮಾಡುತ್ತದೆ. ಕರಕುಶಲತೆ, ಪುರಾಣ ಪ್ರಜ್ಞೆಗೆ ಉತ್ತಮ ಉದಾಹರಣೆಗಳಂತೆ ಮಂಜುನಾಥ್ ಎಂ. ಗೌಡರ, ಆನಂದ ಬೆದ್ರಾಳ ಕೃತಿಗಳು ಮೂಡಿ ಬಂದಿದ್ದರೆ, ಸುರಪುರ ಸಂಪ್ರದಾಯ ಶೈಲಿಯಲ್ಲಿ ಸಮಕಾಲೀನ ಜ್ವಲಂತ ರೈತರ ಸಮಸ್ಯೆಗಳ ಅನುಭವ ಗ್ರಹಿಕೆಗಳು ಕೆ.ನಾಗರಾಜುರವರ ಕೃತಿಯೊಂದರಲ್ಲಿ ಮೂಡಿಬಂದಿವೆ ಎನ್ನುತ್ತಾರೆ.

ಹಾಗೆ ಎಂ.ಜಿ. ರಾಮಗಿರಿ ಪೋಲೀಸ್ ಪಾಟೀಲ್, ಸಿ.ಚಿಕ್ಕಣ್ಣ, ಡಿ.ಹೆಚ್.ಸುರೇಶ್, ರಾಜೇಶ, ಮಂಜುನಾಥ್ ವಿ., ಕಲ್ಲೇದೇವರ, ಪ್ರಭು ಆಚಾರ್ಯ, ಜಿ.ಪಿ.ಗೋಪಿನಾಥರವರುಗಳ ಅಭಿವ್ಯಕ್ತಿಗಳು ವಿಶ್ವಾತ್ಮಕ(Universal) ದೃಷ್ಟಿಯವು. ನೂರಾರು ಕಲಾವಿದರು ದಲಿತ ಪ್ರಜ್ಞೆಯ ಸೃಷ್ಟಿ ಪ್ರಕ್ರಿಯೆಯೆಯಲ್ಲಿ ತೊಡಗಿದ್ದಾರೆ. ಅವರಲ್ಲೊಬ್ಬರಾದ ಎಂ.ಜಿ.ದೊಡ್ಡಮನಿಯವರ ಕೃತಿಗಳು ಬುದ್ಧನ ಬದುಕಿನ ಗ್ರಹಿಕೆಗಳನ್ನು ಆಕರವಾಗಿ ತಂದುಕೊಂಡಂತಿವೆ ಎನ್ನುವ ಅಂಶಗಳು ಇಲ್ಲಿ ಗಮನಾರ್ಹವಾಗಿದೆ.

**ಕಾಗದ**

೧೯೯೯ರಲ್ಲಿ ನಡೆದ 'ಕಾಗದ' ಎಂಬ ಕಾರ್ಯಗಾರದಲ್ಲಿ ಮಣ್ಣಿಗೆ ಹತ್ತಿರವಾದ ಮಣ್ಣಿನ ಮಾಧ್ಯಮವನ್ನೇ ಅಭಿವ್ಯಕ್ತಿಗೆ ದುಡಿಸಿಕೊಂಡ ಕಲಾವಿದರ ಅಭಿವ್ಯಕ್ತಿಯ ಹೊಳಹುಗಳನ್ನು ವಿಮರ್ಶಕರಾದ ಕೆ.ವಿ.ಸುಬ್ರಹ್ಮಣ್ಯಂರವರು 'ಕಾಗದ' ಕ್ಯಾಟಲಾಗ್‌ನಲ್ಲಿ ಪರಿಚಯಿಸಲಾಗಿದೆ.

ಯುಸೋಫ್ ಅರಕ್ಕಲ್(Homage to madia series)ಆಂಟೋನಿ ಯೋ–ಎ–ಕಾಸ್ಟಾ, ಸಿಎಫ್.ಜಾನ್, ರಾಘವೇಂದ್ರರಾವ್, ಸುರೇಖರವರುಗಳು ಕಾಗದದ ವಿವಿಧ ನೆಲೆಯ ಅವಕಾಶವನ್ನು ಸಮಕಾಲೀನ ಗ್ರಹಿಕೆಯ ಸಂವೇದನೆಗೆ ದುಡಿಸಿಕೊಂಡಿದ್ದಾರೆ. ಹಣ್ಣು, ಕಾಯಿ ಬಿಡುವ ವೃಕ್ಷಗಳ, ಇನ್ನು ಕಲುಷಿತಗೊಳ್ಳುದ ಮಣ್ಣೀನ, ವಿಸ್ತಾರ್ ತೋಟದ, ಭಾರತೀಯ ಪರಂಪರೆ ಮತ್ತು ಸಮಕಾಲೀನತೆಗಳನ್ನು ಸಮೀಪಕರಿಸಿಕೊಂಡು ವಾಸ್ತು ಶಿಲ್ಪಗಳ ನಡುವೆ ನಡೆದ Closely bound like word and meaning are paper and art ಆಶಯದ, ಕಾಗದವನ್ನು ತಮ್ಮ ಕಲೆಗಾಗಿ ದುಡಿಸಿಕೊಳ್ಳಲಾಗಿತ್ತು. ಅಲ್ಲದೆ ಸುತ್ತಲಿನ ಪರಿಸರದಲ್ಲಿನ ವಸ್ತುಗಳನ್ನು ಇಲ್ಲಿ ಮುಖ್ಯವಾಗಿ ಕಾಣಬಹುದು.

ಬಣ್ಣಗಳಿಲ್ಲದ, ಬಣ್ಣಗಳನ್ನು ಮೀರಿದ ಆದರೇ ಎಲ್ಲ ಬಣ್ಣಗಳನ್ನು, ತನ್ನೊಳಗೆ ಹೊಂದಿರುವ ಬಿಳಿಯ ಕಾಗದ ವಿಶಿಷ್ಟವಾದ ಜೈವಿಕ ಬಣ್ಣಗಳೊಂದಿಗೆ ಜೈವೀಕವಲ್ಲವಾದರೂ ಹೆಚ್ಚು ಗೌರವಾನ್ವಿತ ರೀತಿಯಲ್ಲಿ ವೈಭವೀಕರಿಸುವಂತ ಅಭಿವ್ಯಕ್ತಿಗಳು. ಈ ಕಾರ್ಯಗಾರದಲ್ಲಿ ಮೂಡಿದ್ದು ಈ ಕುರಿತು ಗಮನಾರ್ಹ ವಿಚಾರಗಳನ್ನು ವಿಮರ್ಶಕರು ಇಲ್ಲಿ ಅಭಿವ್ಯಕ್ತಿಸಿದ್ದಾರೆ.

**TIME-LINES (The young talented Artist of Karnataka)**

ನೆಹರು ಆರ್ಟ್ ಸೆಂಟರ್ ಮುಂಬೈನಲ್ಲಿ ಜನವರಿ ೨೪, ೨೦೦೬ರಿಂದ ಜನವರಿ ೨೦ ರವರೆಗೆ ನಡೆದ ಎಂಬ TIME-LINES (The young talented Artist of Karnataka) ಶೀರ್ಷಿಕೆಯಡಿ ಪ್ರದರ್ಶಿಸಲಾಗಿತ್ತು. ಕರ್ನಾಟಕ ಲಲಿತಕಲಾ ಅಕಾಡೆಮಿಯ ಅನುದಾನದಲ್ಲಿ ನಡೆದ ಈ ಸಮೂಹ ಕಲಾಪ್ರದರ್ಶನವು ಅನೇಕ ಹಿರಿಯ ಮತ್ತು ಕಿರಿಯ ಕಲಾವಿದರ ಕಲಾಕೃತಿಗಳು ಇಲ್ಲಿದ್ದವು. ಈ ಹಿನ್ನೆಲೆಯಲ್ಲಿ ಕಲಾವಿದರ ಕಲಾಕೃತಿಗಳನ್ನು ಒಂದೆಡೆ ಕ್ಯಾಟಲಾಗ್

ರೂಪದಲ್ಲಿ ಸಂಗ್ರಹಿಸಿದ್ದು ಅವುಗಳಲ್ಲಿನ ಅಭಿವ್ಯಕ್ತಿಯ ಕುರಿತಾಗಿ ಒಟ್ಟಾರೆ ಅನುಭುವಿಕೆಯನ್ನು ಕೆ.ವಿ.ಸುಬ್ರಹ್ಮಣ್ಯಂರವರು ವಿಮರ್ಶೆಯ ಜೊತೆಗೆ ಒಳಾಂಶವನ್ನು TIME-LINES : INTERACTION OF FEELINS AND PERCEPTION[5] ಎಂಬ ಶೀರ್ಷಿಕೆಯಡಿ ಕಟ್ಟಿ ಕೊಟ್ಟಿದ್ದಾರೆ.

Art Can expand our Knowledge of the Land and its people. Bangalore the Capital city of Karnataka looks Like metophore of Indian Information techno-culture. Contempory artists of the state has one `way are the other influenced by metomorphic faces of urban culture. The vrban pleasurable aestheticized new middele class-living environment to day instantly accessible `global show case' of branded goods, Though notions of beauty prominent in consumer culture, some of these new urban life styles point to a decentring of identity and a greater capacity to engage in a de-control of the emotions and aestheticized play.

To day we are witnessing the end of the dominence of a few Indian metro cities over artistic and intellectual life. Two or three metro centres of visual art. fashion, entertainment industries like television, Publishing. and music are now Facing greater compition from a variety of directions. The changing urban landscaps of Karnataka has aestheticized and enchanted through the globalized, multinational, NRI'S architecture, Bill boards, Shop displays, advertisements package, street signs, departmental stores, Shopping centres, arcades, malls and fashionable branded clothing.

Techno-intelligence' of our younger generations is (loosing innocence) heading towords Techno-cooly' culture. Techno literacy is marching a head of culfural literacy. Hence in many overt and subtle ways middle class also transmit aesthetic dispositions and sensibilities, and the notions of the artist as hero' and the importance of the 'stylization of life' to wider publics.

To day most of our intellectuals converse more globly than locally. one can feel the tention and crisis of the life around in their interactions and expressions. similar to the artists of other parts of country, Karnatak's Kannadigas also absorbed the context of the post-coloniat experience and transgressed the post-modern to liberate from colonal experience. Now we are facing the neocolonial globalization.

Abiviously this leads to powerful perception of local cultural sensibility. we can feel this in the works of Dr.siddaling swamy Hiremath (the disturbed state of rural mind scape), Mohan M. Sitnoor(`Flow') Ashok Kumar G. Hiremath, Pratap Bahuroopi, S.P.Kademani (Baby and bull', `Return to house') Ramachandra hegade

(Nature Peculier-IX) Mallikarjun Shetty, K.Krishnappa Kote Kumar, K.S.Parameshwar, M.G.Hegade, Veeraiah Hiremath, Dr.Lakshmi Dew, Dayanand K. Kamkar and suresh R.Arkasali.

The human intence in sightful perceptions of muralidhar Rathod(Buddha in my view), Suraj Kumar, Pundaleeka Kalliganuru(Highway), Renuka Kesarmadu, Basavaraj L. Jane, Supriya varma (Helping hand), Chennamma Patil (Women in the love with nature) are perceived conttemporancoury, the element of sublime in the works of B.V.Badigeru, G.M.Jangalagi (Divya-yoga), N.Revana Siddappa (dark to light) is a pleasent surprisel we can feel the disturbed, Meterialistic urban distorted life in the work of A.M.Prakash(Metamorphosis), Dr.shivananda Bantanoora(untitled), Supriya verma (Bad times don't last for ever), Renuka markande(Nothing Immortal), and Gayathri M. Desai.

S.Vishnu Kumar's `dialled number-I', `Don't fell me who I am' and Varna sindhu's `disturbance' and `city life' are powerfully perceived I.T. curtured, disturbed urban sensibility, we can feel the absorption of global character of visual cultural sensibility.

The interaction of feeling and perception, the range of personal statements in these works of art are enormous.

### ಏಕವ್ಯಕ್ತಿ ಡ್ರಾಯಿಂಗ್ಸ್ ಮತ್ತು ಕೋಲಾಜ್ ಪ್ರದರ್ಶನ ಕೆ.ಜಿ.ಲಿಂಗದೇವರು

ಅಕ್ಟೋಬರ್ ೨೦೦೯ರಲ್ಲಿ ಕೆ.ಜಿ.ಲಿಂಗದೇವರು ಅವರ ಏಕವ್ಯಕ್ತಿ ಕಲಾ ಪ್ರದರ್ಶನದಲ್ಲಿ ಡ್ರಾಯಿಂಗ್ಸ್ ಮತ್ತು ಕೋಲಾಜ್ ಕಲಾಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಇವರ ಅಭಿವ್ಯಕ್ತಿಯಲ್ಲಿ ಮೂಡಿ ಬಂದ ಗಣೇಶ ಶೀರ್ಷಿಕೆಯ ಅನೇಕ ಕಲಾಕೃತಿಗಳು ನೋಡುಗರಿಗೆ ಆಕರ್ಷಿಸುವಂತಿದ್ದವು. ಕೋಲ್ಯಾಜ್ ಕೃತಿಗಳಲ್ಲಿ ಹಳೇ Magzin paper ಗಳನ್ನು ಅಂಟಿಸಿ, ರಚನೆ ಮಾಡಿದ್ದು ವಿಶೇಷ ರೀತಿಯದ್ದಾಗಿವೆ. ಈ ಹಿನ್ನಲೆಯಲ್ಲಿ ಕಲಾಕೃತಿಗಳನ್ನು ಇತರರಿಗೆ ಪರಿಚಯಿಸುವ ನಿಟ್ಟಿನಲ್ಲಿ ಕ್ಯಾಟಲಾಗ್ ರೂಪದಲ್ಲಿ ತರಲಾಗಿದ್ದು, ಈ ಅಭಿವ್ಯಕ್ತಿಗಳನ್ನು ಕುರಿತಾಗಿ ಕೆ.ವಿ.ಸುಬ್ರಹ್ಮಣ್ಯಂರವರು ವಿಮರ್ಶೆಯದೊಂದಿಗೆ ಪರಿಚಯವನ್ನು ಮಾಡಿಕೊಟ್ಟಿದ್ದಾರೆ.

Oh Ganesh!<br>Are you not<br>The Metaphor of everything?<br>What not?<br>Any thing!<br>Your are constructed,

And deconstructed
At time and space, oh!
Are you not obstracted,
And articulated in vivid dimensions?
Point-line,
Life-line,
With hunbreds of hues and colours fine!
You are involving in hundreds of
Avataras,
And over taken dashavataras!
The mystical Mysterious
Sense of illusions
Presents themselves
As vision
You can`t say that I can!
The pictorial representations
Of K.G.Lingadevaru
Are abbreviated
Compositions of stimulating
Contemporaneous spontanicty

**"MAHA BODHHI"**

ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಮನೀಶ್ ವರ್ಮರವರ ಕಲಾಕೃತಿಗಳನ್ನು **ಮಹಾಬೋಧಿ** ಶೀರ್ಷಿಕೆಯಡಿ ಪ್ರದರ್ಶಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ಮನೀಶ್‌ವರ್ಮರವರ ಪ್ರದರ್ಶಿತ ಕೃತಿಗಳನ್ನು ಇತರರಿಗೆ ಪರಿಚಯಿಸುವುದಾಗಿ ಕ್ಯಾಟಲಾಗ್ ರೂಪದಲ್ಲಿ ತರಲಾಗಿದ್ದು, ಇದರಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಅವರು ಕೃತಿಗಳಲ್ಲಿನ ಒಟ್ಟಾಂಶವಾದ ಅಭಿವ್ಯಕ್ತಿಯನ್ನು ಮತ್ತು ಅದರ ಹಿನ್ನೆಲೆಯನ್ನು ಕುರಿತಾಗಿ ಸುಂದರವಾಗಿ ಮೂಡಿಸಿಕೊಟ್ಟಿದ್ದಾರೆ.

Manish verma's present show consists of vivid divine face of Buddha. we can call as a universal ground of spiritual life - source. manish verma's who is stemmed from Buddhist Bihar, looks like the promoter of Buddhist aesthetics. He articulated the essence of Buddhist divinity. ‘Nirvana’(extinction) a state of deliverance is divinely perceived. Some other paintings like ‘Buddham sharanam’, ‘Dhyana’, ‘Vajrapradama`, `Dharmachakra’, ‘Samarpana` and ‘vitraka` are also articulated skill fally ಎಂಬ ಅಂಶಗಳನ್ನು ನಾವು ಇಲ್ಲಿ ಕಾಣಬಹುದು.

## THE BULL AN AESTHETICS OF ANXIETY

The Bull An Aesthetice of Anxiety ಎಂಬ ಶೀರ್ಷಿಕೆಯಡಿ ಪ್ರದರ್ಶನಗೊಂಡ ಸುಜಿತ್ ಕುಮಾರ್ ಜಿ.ಎಸ್.ಮಂಡ್ಯಾರವರ ಕೃತಿಗಳು ಕರ್ನಾಟಕ ಚಿತ್ರಕಲಾ ಪರಿಷತ್ತು, ಬೆಂಗಳೂರಿನಲ್ಲಿ ಅಕ್ಟೋಬರ್ ೨೭, ೨೦೧೩ ರಿಂದ ನವೆಂಬರ್ ೪ರವರೆಗೆ ಮತ್ತು ನೆಹರು ಸೆಂಟರ್ ಮುಂಬೈನಲ್ಲಿ ಮಾರ್ಚ್ ೨೫, ೨೦೧೪ ರಿಂದ ೩೧ರವರೆಗೆ ನಡೆಸಲಾಗಿತ್ತು. ಈ ಪ್ರದರ್ಶನದಲ್ಲಿನ ಕಲಾಕೃತಿಗಳನ್ನು ಒಂದು ವ್ಯವಸ್ಥಿತ ಕ್ಯಾಟಲಾಗ್ ರೂಪದಲ್ಲಿ ತರಲಾಗಿದ್ದು, ಅದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಒಟ್ಟು ಕಲಾಕೃತಿಗಳಲ್ಲಿನ ಆಂತರ್ಯದ ಅನುಭವಿಕೆಯಲ್ಲಿ ಮೂಡಿದ ವಿವಿದೋದ್ದೇಶಗಳನ್ನು ಇದರಲ್ಲಿ ಪರಿಚಯಿಸಿ ಕೊಡಲಾಗಿದೆ.

The bull is the universal image, one can see the bull perceived visually since pre-historic period. The puranic visual literality also illustate the glory of the bull 1. we can find the imagery of bull in an European and Indian context of rack tradition of bull in an European and Indian context of rock tradition 2. we Know that the cave paintings were all about 'sympathetic migic' 3. In the earlier days of ancient ritualistic sensibility the never ending deadly confrontation of 'man and bull' continued even today. Most of the artists perceived this sensibility vividly through the ages. The psychological context of motivations also nervated their perceptions. we can feel this in the bulls of primitive painters to picasso to Sujith Kumar Mandhya. Hence an anxiety of in fluence is always there.

The bulls of Sujith Kumar express the inner anguish of contemporary techno human mind. Here the bull is perceived as metaphorical aesthetics of an anxious mind. These my sterious paintings are a spectacle of hurt, shocked, violent, revolting bulli's. artistry and symbolism.

The focused images of 'The Bull' that sparks Sujithkumar's paintings absorbed the human characteristics surrealistically. The bull; the beast of power and ardor is charged with abundant feelings dramatically articulated in the deconstructed frame. sujith kumar's anxious bull multiplied with an amalgamation of the primitive and contemporaneous sensibitionies ಎಂಬ ಅಂಶಗಳನ್ನು ಕಾಣಬಹುದು.

**ಟಿಪ್ಪಣಿಗಳು**

೧. ಸುಬ್ರಹ್ಮಣ್ಯಂ ಕೆ.ವಿ.ಅವರು ಹಲವಾರು ಸಣ್ಣಪುಟ್ಟ ಕ್ಯಾಟ್‌ಲಾಗ್‌ಗಳನ್ನು ಬರೆದಿರುವುದು ಈ ಪ್ರಬಂಧದ ಮಿತಿಯಲ್ಲಿ ಕೆಲವನ್ನು ಮಾತ್ರ ಪರಿಚಯಿಸಲಾಗಿದೆ.

೨. ಹಲವು ಕ್ಯಾಟ್‌ಲಾಗ್‌ಗಳನ್ನು ಇಂಗ್ಲೀಷ್‌ನಲ್ಲಿ ಬರೆದಿರುವರು. ಇವುಗಳನ್ನು ಒಂದೆರಡನ್ನು ಮಾತ್ರ ಇಂಗ್ಲೀಷ್‌ನಲ್ಲೇ ಯಥಾವತ್ತಾಗಿ ಇಲ್ಲಿ ಬಳಸಿಕೊಳ್ಳಲಾಗಿದೆ.

# ಅಧ್ಯಾಯ ಏಳು

## ಸಂಶೋಧನಾತ್ಮಕ ದೃಶ್ಯಕಲಾ ಸಾಹಿತ್ಯ

೭.೧. ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ(೨೦೧೧)

೭.೨. ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ
(ಹೊಸಅನ್ವೇಷಣೆ ೨೦೧೧)

ಅಧ್ಯಾಯ ಏಳು

# ಸಂಶೋಧನಾತ್ಮಕ ದೃಶ್ಯಕಲಾ ಸಾಹಿತ್ಯ

ಚಿತ್ರಕಲೆ ಎಂದೊಡನೆ ಭಾರತೀಯ ಇತಿಹಾಸದ ಪರಿಚಯವುಳ್ಳವರಿಗೆ ಈಗಾಗಲೇ ಜಗತ್ಪ್ರಸಿದ್ಧವಾಗಿರುವ ಅಜಂತಾ, ಎಲ್ಲೋರ, ಬಾಗ್, ಬಾದಾಮಿ, ಶಿತ್ತಲ್ ವಾಸಲ್ ಮೊದಲಾದೆಡೆಗಳಲ್ಲಿಯ ಶ್ರೇಷ್ಠ ವರ್ಣಚಿತ್ರಗಳು ಸ್ಮೃತಿ ಪಟಲದಲ್ಲಿ ಬರುವುದು ಸಹಜ. ಈ ಪೂರ್ವದಲ್ಲಿಯೇ ಚಿತ್ರಕಲೆ ಇರುವಿಕೆಗೆ ಆಧಾರವಾದ ಅನೇಕ ಆದಿಮ ನೆಲೆಗಳು ಶೋಧನೆಗೊಂಡಿರುವುದು ಒಂದು ಆಕಸ್ಮಿಕವೇ.

೧೮೩೭ರಲ್ಲಿ ಸರ್ ಜಾರ್ಜರೇ(Sir George ray) ಅವರಿಂದ ಸಿಡ್ನಿ ವರ್ಣಚಿತ್ರ ಗವಿಗಳ ಶೋಧ ಪ್ರಪ್ರಥಮವಾದುದ್ದು ಎಂದು ಹೇಳಲಾಗುತ್ತದೆ. ೧೯೭೫ರಲ್ಲಿ ಸ್ಪೇನ್ ದೇಶಧ ಅಲ್ತಮೀರ್ ಪ್ರದೇಶದ ಭೂ ಒಡೆಯನು ಮತ್ತು ಹವ್ಯಾಸಿ ಪುರಾತತ್ವ ಶೋಧಕನು ಆದ ಡಾಸೆ ಮಾರ್ಸೆಲಿನೂವ ಸೌತ್‌ಪೊಲ ಎಂಬುವವನು ಅಲಮೀರ್ ಗವಿಯಲ್ಲಿ ಕಪ್ಪುವರ್ಣ ಅಂಚಿನ ಚಿತ್ರಶೋಧನೆಯನ್ನು ಮಾಡಿದನು. ನಂತರದಲ್ಲಿ ಡಾರ್ಡೋನ್ ಪ್ರದೇಶದ ಲಾಮಾತ್ ಗುಹಾಚಿತ್ರಗಳನ್ನು ಕ್ರಿ.ಶ.೧೯೫ರಲ್ಲಿ ಇ-ರೈವರ್ ಎಂಬಾತನು ಶೋಧಿಸಿದನು. ಈ ರೀತಿಯಲ್ಲಿ ನಡೆದ ಶೋಧವು ಭಾರತದಲ್ಲಿ ಕ್ರಿ.ಶ.೧೮೮೦ರಲ್ಲಿ ಹೊಬರ್ಟ ನಾಕ್ಸ, ಮೊದಲಿನವನಾಗಿದ್ದು, ಬಳ್ಳಾರಿಯ ಸಮೀಪದಲ್ಲಿರುವ ಕುಪ್ಪಗಲ್ಲು ಗ್ರಾಮದಲ್ಲಿಯ ಗುಡ್ಡಗಳಲ್ಲಿ ದೊಡ್ಡ ದೊಡ್ಡ ಗುಂಡು ಕಲ್ಲುಗಳ ಮೇಲೆ ಕುಟ್ಟು-ಗೀರು ವರ್ಣಚಿತ್ರಗಳನ್ನು ಶೋಧಿಸಿದನು. ನಂತರ ೧೮೮೩ರಲ್ಲಿ ಕಾಕ್‌ಬರ್ಗ್ ಎಂಬುವವರು ಮಿರ್ಜಾಪುರ ಬಳಿಯಲ್ಲಿನ ಗುಹಾಚಿತ್ರಗಳನ್ನು ಪತ್ತೆ ಮಾಡಿದನು. ಕರ್ನಾಟಕಕ್ಕೆ ಬಂದರೆ ೧೯೩೫ರಲ್ಲಿ ಲಿಯೋನಾರ್ಡಮನ್ ಅವರು ಪ್ರಥಮವಾಗಿ ಗಂಗಾವತಿ ತಾಲ್ಲೂಕು, ರಾಯಚೂರು ಜಿಲ್ಲೆಯ ಹಿರೇಬೆನಕಲ್ಲಿನಲ್ಲಿ ಸ್ವಾರಸ್ಯಕರವಾದ ಮೂರು ಗವಿ ವರ್ಣಚಿತ್ರಗಳನ್ನು ಅದೇ ಸಮಯದಲ್ಲಿ ಭಿಲ್ಲಮರಾಯನಗುಡ್ಡದಲ್ಲಿ ಕುಟ್ಟಿದ ಮತ್ತು ಗೀರು ಚಿತ್ರಗಳನ್ನು(Bruisings and Engravings)ಕಂಡು ಹಿಡಿದನು. ಇಂತಹ ಚಿತ್ರಗಳ ಶೋಧನೆಯಲ್ಲಿ ೧೯೫೭ ಒಂದು ಮಹತ್ವದ ವರ್ಷವೆಂದು ಹೇಳಬಹುದು. ಉಜ್ಜಯಿನಿಯ(ಮಧ್ಯಪ್ರದೇಶ) ಡಾ.ವಿಷ್ಣು ಎಸ್.ವಾಕಣಕರ್ ಆಕಸ್ಮಿಕವಾಗಿ

ಭೋಪಾಲ್ ನಿಂದ ಸುಮಾರು ೧೫ ಕಿ.ಮೀ.ಆಗ್ನೇಯಕ್ಕಿರುವ ಭೀಂಭೆಟ್ಕಾ ಗುಡ್ಡಗಾಡುಗಳಲ್ಲಿನ ಅಪರೂಪದ ಗವಿ ವರ್ಣಚಿತ್ರಗಳ ಶೋಧನೆಗಳನ್ನು ಕಾಣಬಹುದು. ಈ ರೀತಿಯಲ್ಲಿ ನಡೆದ ಶೋಧನೆ ಅಪರೂಪವಾಗಿ ಅಲ್ಲೊಂದು ಇಲ್ಲೊಂದು ಅವಶೇಷಗಳು ಮೊದಮೊದಲು ಆಕಸ್ಮಿವಾಗಿದ್ದು ಕ್ರಮೇಣ ಕ್ರಮಬದ್ಧ ವೈಜ್ಞಾನಿಕ ಅನ್ವೇಷಣೆ, ಅವಶೇಷಗಳು ಶೋಧವಾದವು. ತತ್ಪರಿಣಾಮವಾಗಿ ಆಫ್ರಿಕಾ, ಯುರೋಪ, ಏಷ್ಯಾ ಹಾಗೂ ಸ್ವಲ್ಪಮಟ್ಟಿಗೆ ಆಸ್ಟ್ರೇಲಿಯಾ ಖಂಡಗಳ ನೂರಾರು ಪ್ರದೇಶಗಳಲ್ಲಿ ಇಂಥ ಕಲಾಕೃತಿಗಳ ನೆಲೆಯಲ್ಲಿರುವುದು ತಿಳಿಯಿತು. ಇನ್ನು ಶೋಧವಾಗುತ್ತಲೇ ಇವೆ. ವಿಶ್ವದ ಹಲವಾರು ಭಾಗಗಳಲ್ಲಿ ಇವುಗಳ ಅಧ್ಯಯನ ನಡೆಯುತ್ತಿದ್ದು ನೂರಾರು ಉಗ್ರಂಥಗಳು, ಲೇಖನಗಳು ಪ್ರಕಟವಾಗುತ್ತಿವೆ. ಈ ರೀತಿಯ ಆದಿಮಾನವ ಕಾಲದ ಚಿತ್ರಕಲೆ, ಶಿಲ್ಪಕಲೆ(ಸಂಕ್ಷಿಪ್ತವಾಗಿ) ಕುರಿತು ಶಿಲಾಶ್ರಯ ಚಿತ್ರಗಳು, ಗುಹಾಚಿತ್ರಗಳು ಕುರಿತು ಬಂದಿರುವ ಸಾಹಿತ್ಯವನ್ನು ಸಂಶೋಧನಾತ್ಮಕ ದೃಶ್ಯಕಲಾ ಸಾಹಿತ್ಯ ಎಂದು ಕರೆಯಲಾಗುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕದ ಅ.ಸುಂದರ, ಅ.ಲ.ನರಸಿಂಹನ್, ಎಸ್.ಎನ್.ಚಂದ್ರಶೇಖರ್ ಬೆರಳೆಣಿಕೆಯಷ್ಟು ಲೇಖಕರು ಮಾತ್ರ ಎನ್ನಬಹುದು. ಈ ಸಾಲಿಗೆ ಸೇರುವ ಕೆ.ವಿ.ಸುಬ್ರಹ್ಮಣ್ಯಂರವರು ಒಬ್ಬರಾಗಿದ್ದಾರೆ. ಡಾ.ವಿಷ್ಣು ಎಸ್.ವಾಕಣಕರ್ ರವರ ಆಕಸ್ಮಿಕ ಭೇಟಿಯಿಂದ ಅವರು ಶೋಧಿಸಿದ ಭೀಂಬೇಟ್ಕಾ ಆದಿಮ ನೆಲೆಗಳ ಛಾಯಾಚಿತ್ರಗಳನ್ನು ಪಡೆದು ಉತ್ಸಕರಾಗಿ ಆ ನೆಲೆಗೆ ಹೋಗುವ ಅವಕಾಶವನ್ನು ಕಲ್ಪಿಸಿಕೊಂಡು ಭಿಂಬೇಟ್ಕಾದಲ್ಲಿಯೇ(ಮಧ್ಯಪ್ರದೇಶ) ವರ್ಣಚಿತ್ರ ಗವಿಗಳನ್ನು ಶೋಧನೆಗೈದರು. ಅವರ ಈ ಶೋಧನಾ ಕಾರ್ಯದ ಕುರಿತಾಗಿ ಅನೇಕ ಆದಿಮ ನೆಲೆಯ ಲೇಖನ ಬರಹಗಳನ್ನು, ಪತ್ರಿಕೆಗಳಲ್ಲಿ ಬರೆದಿದ್ದಾರೆ. 'ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ' ಮತ್ತು 'ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ ಕೃತಿಗಳು" ಪ್ರಕಟಗೊಂಡವು. ಪ್ರಸ್ತುತ ಅಧ್ಯಯನದಲ್ಲಿ ಕೆ.ವಿ.ಸುಬ್ರಹ್ಮಣ್ಯಂ ರವರ ಈ ಎರಡು ಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೭.೧. ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ

ಕನ್ನಡ ವಿಶ್ವವಿದ್ಯಾಲಯ ಹಂಪಿಯಿಂದ ಪ್ರಕಟಗೊಂಡ 'ಶಿಲಾಶ್ರಯ ಚಿತ್ರಕಲೆಯ ದೃಶ್ಯಧಾನ್ಯ ಕೃತಿ'ಯು ೨೦೧೧ರಲ್ಲಿ ಮಂಟಪಮಾಲೆಯಿಂದ ಪ್ರಕಟಗೊಂಡಿದೆ. ಅಂದಿನ ಕುಲಪತಿಗಳಾದ ಡಾ.ಎ.ಮುರಿಗೆಪ್ಪ ಅವರ ಅವಧಿಯಲ್ಲಿ ಪ್ರಸಾರಾಂಗದ ನಿರ್ದೇಶಕರಾದ ಡಾ.ಎ.ಸುಬ್ಬಣ್ಣ ರೈ ಹಾಗೂ ಸಹಾಯಕ ನಿರ್ದೇಶಕರಾದ ಶ್ರೀ ಸುಜ್ಞಾನಮೂರ್ತಿಯವರ ಮುಖಾಂತರ ಪ್ರಕಟಗೊಂಡ ಒಂದು ಕೃತಿಯಾಗಿದೆ.

'ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ' ಹೆಸರೇ ವಿಶೇಷವಾಗಿದೆ. ಇಲ್ಲಿ ದೃಶ್ಯ(ದೃಷ್ಟಿ)ವೇ ಧ್ಯಾನಗೈಯುವಂತೆ ಅಂದರೆ ಕಲೆಯ ನಿಗೂಢತೆಯನ್ನು ಅದರ ಅಚಲವಾದ ಆಂತರ್ಯವನ್ನು ತೋರಿಸುತ್ತದೆ. ಶಿಲಾಶ್ರಯದಲ್ಲಿ ಲೇಖಕರು ತಮಗಾದ ಅನುಭವವನ್ನು ತಮ್ಮ ಸಾಹಿತ್ಯ ಸಾಲುಗಳಲ್ಲಿ ಕಂಡರಿಸಿದ್ದಾರೆ. ಶಿಲಾಶ್ರಯದ ಚಿತ್ರ ವೈವಿಧ್ಯ, ಆದಿಸತ್ವ, ಮಣ್ಣಿನ ಪಾತ್ರೆ, ಪಗಡಗಳ

ಚಿತ್ರ ಮುಂತಾದ ಶೀರ್ಷಿಕೆಯಡಿಯಲ್ಲಿ ಅಗಮ್ಯವಾದ, ಆಳವಾದ ಸಾಮಾನ್ಯ ಓದುಗನಿಗೆ ಅಥವಾ ಸಾಮಾನ್ಯ ವಿಚಾರವಾದಿಗಳಿಗೆ ಎಟುಕದ, ಗಹನವಾದ ತತ್ವಗಳನ್ನು ಲೇಖನ ಸಂಗ್ರಹ(ಪುಸ್ತಕ) ದಲ್ಲಿ ಹೆಣೆದುಕೊಟ್ಟಿದ್ದಾರೆ. ದೃಷ್ಟಿಗೆ ಸಂಬಂಧಿಸಿದ ಕಲೆ ಹಾಗೂ ಪ್ರಕೃತಿಯ ನಡುವಿನ ಅವಿನಾಭವತೆಯನ್ನು ಅದ್ಭುತವಾಗಿಯೂ, ಆಶ್ಚರ್ಯವಾಗಿಯೂ ಕಂಡು ನೋಡುಗನಿಗೂ ಅವರ ದೃಷ್ಟಿಯಂತೆಯೇ ಹೊಸದೊಂದು ಲೋಕವನ್ನು ಹೊಸ ಬಗೆಯಲ್ಲಿ ನೋಡುವಂತೆ ಮಾಡುವ ಪ್ರಯತ್ನ ನಿಜಕ್ಕೂ ಅದ್ಭುತವೇ ಸರಿ.

ಕಣ್ಣಿಗೆ ಕಾಣುವ ವಾಸ್ತವಿಕ ಅಂಶಗಳ ಹಿಂದಿರುವ ಕಲ್ಪನಾತೀತವಾದ ಭಾವನೆಗಳನ್ನು ಹಿಡಿದಿಡುವ ಮಹತ್ತರ ಹೆಜ್ಜೆ ಅವಪರೂಪವಾದದ್ದು, ಅಮೂಲ್ಯವಾದುದ್ದು. ಕಾಣದಿರುವ ಕಲ್ಪನೆಯನ್ನು ಹೇಳುವುದು ಕಷ್ಟ ಸಾಧ್ಯವೇ. ಅಂತಹ ಆಂತರ್ಯದ ಭಾವನೆಗಳನ್ನು ಸಂಪೂರ್ಣವಾಗಿ ಹೇಳುವುದರಲ್ಲಿ ಲೇಖಕರು ಸಮರ್ಥರಾಗಿದ್ದಾರೆ.

ಭಾರತದ ಹಲವಾರು ಪ್ರದೇಶಗಳನ್ನು ಬೆಟ್ಟ-ಗುಡ್ಡಗಳನ್ನು ತಿರುಗಾಡಿ, ಸಂದರ್ಶಿಸಿ ಸ್ವತಃ ಸೌಂದರ್ಯವನ್ನು ಅನುಭವಿಸಿ ಶಿಲಾಬಂಡೆಗಳನ್ನು ಅದರ ಅಪೂರ್ವ ಸೌಂದರ್ಯವನ್ನು ಓದುಗನಿಗೆ ಉಣಬಡಿಸಿದ್ದಾರೆ. ಉತ್ತರ ಭಾರತದ ಭೀಂಬೇಟ್ಕಾ, ದಕ್ಷಿಣದ ಬಾದಾಮಿ, ಗಂಗಾವತಿ, ಹಂಪಿ, ಕೇರಳದ ಸುಲ್ತಾನ ಭತೇರಿ, ತಮಿಳುನಾಡಿನ ಪಾಂಡಿಚೇರಿ ಹತ್ತಿರದ ಕೇಳ್‌ವಾಳ್ಳೈ, ಕೂಡಲಗಿ ಹೀಗೆ ಬೇರೆ ಬೇರೆ ಪ್ರದೇಶಗಳ ಶಿಲಾಶ್ರಯಗಳ ಆದಿಮ ಚಿತ್ರಗಳನ್ನು ತಮ್ಮದೇ ಆದ ದೃಷ್ಟಿಯಿಂದ ನೋಡಿದ ಕಲಾವಿದರು ಅದರ ಭೌತಿಕ ಅಂಶಗಳನ್ನು ಮಾತ್ರವೇ ಹೇಳದೆ ಅದರಾಚೆಗಿನ ಕಲ್ಪನಾತೀತ ಕಲ್ಪನೆಗೂ ಮೀರಿದ ಸೌಂದರ್ಯದ ಆಂತರ್ಯದ ವೈವಿಧ್ಯಮವಾದ ಹೊಸ ಮುಖ, ಹೊಸ ದೃಷ್ಟಿಯ ನೆಲೆಯನ್ನು ಕಂಡಿರಿಸಿದ್ದಾರೆ.

ಸಮಕಾಲೀನ ಸಂದರ್ಭವನ್ನು ಹಾಗೂ ಆದಿಮ ಕಾಲದ ಕಲೆಯನ್ನು ತೂಗಿ ನೋಡಿ ಇಂದಿನ ಅಭಿವ್ಯಕ್ತಿಯ ಮುಖವಾದ ಇನ್‌ಸ್ಟಾಲೇಷನ್ ಕಲೆಯ ನಡುವೆಯೂ ಅಚ್ಚರಿಗೊಳಿಸುವಂತಹ ಪ್ರಾಗೈತಿಹಾಸದ ಕಾಲದ ದೃಶ್ಯಕಲೆಯ ಹಲವಾರು ನೆಲೆಗಳು ಇವೆ. ಇತಿಹಾಸದ ಜೊತೆ ಜೊತೆಗೆ ಜನಪದ ಸಂಪ್ರದಾಯ ಪ್ರಕಾರ ಶಿಲ್ಪ-ಚಿತ್ರಗಳಿವೆ. ಇಂತಹ ಚಿತ್ರಗಳು ನೂರಾರು ವರ್ಷಗಳ ಹಿಂದಿನ ಇತಿಹಾಸ ಪೂರ್ವಕಾಲದಲ್ಲೂ ಇದ್ದವು. ಇಂದೂ ನಮ್ಮ ನಡುವೆ ಇವೆ ಎಂಬುದೇ ಒಂದು ಅಚ್ಚರಿಯ ಸಂಭ್ರಮದ ಸಂದರ್ಭ ಎಂದು ಹೇಳುವಲ್ಲಿ ಆದಿಮ ಕಲೆಯ ಬಗ್ಗೆ ಇಂದಿನ ಕಾಲದಲ್ಲಿ ಅವು ಅಸ್ತಿತ್ವದಲ್ಲಿ ಇರುವುದನ್ನು ಕಂಡು ಹರ್ಷಿತರಾಗಿದ್ದಾರೆ.

೧೯೩೫ರಲ್ಲಿ ಲಿಯೋನಾರ್ಡ್‌ಮನ್ ಗಂಗಾವತಿ ತಾಲೂಕಿನ ಗುಡ್ಡದಲ್ಲಿ ಆಕರ್ಷಕ ಮೂರು ಗುಹೆಗಳಲ್ಲಿ ವರ್ಣಚಿತ್ರವಿರುವುದನ್ನು ಕಂಡುಹಿಡಿದನು. ಬಿಲ್ಲಮರಾಯನ ಗುಡ್ಡದಲ್ಲಿ ಕುಟ್ಟಿ ಗೀರಿ ಮೂಡಿದ ಚಿತ್ರಗಳನ್ನು ಕಂಡರು. ಭಿಂಬೇಡ್ಕಾದಲ್ಲಿ ಸುಮಾರು ೨೦೦ಕ್ಕೂ ಹೆಚ್ಚು

ಚಿತ್ರಗಳನ್ನು ಅವರು ಕಂಡುಹಿಡಿದರು. ವಾಕನ್ಕರ್ ಅವರು ೧೯೮೦ರ ದಶಕದಲ್ಲಿ ಕರ್ನಾಟಕಕ್ಕೆ ಬಂದು ಬಾದಾಮಿಯ ಪರಿಸರದಲ್ಲಿ ಮಹತ್ವದ ಚಿತ್ರಗಳನ್ನು ತೋರಿಸಿದರು. ಈ ಎಲ್ಲ ಮಹತ್ವದ ದಾಖಲೆಗಳನ್ನು ಕೆ.ವಿ.ಸುಬ್ರಹ್ಮಣ್ಯಂ ಅವರು ತಮ್ಮ ಕೃತಿಯಲ್ಲಿ ಬರೆದಿದ್ದಾರೆ.

ಕರ್ನಾಟಕದ ಗುಲಬರ್ಗಾ ಜಿಲ್ಲೆಯ ಯಾದಗಿರಿ ಬಳಿಯ ಬಳಿಚಕ್ರ ಮೊದಲಾದ ನೆಲೆಗಳು, ಅ.ಸುಂದರ್ ಅವರ ಆಸಕ್ತಿಯಲ್ಲಿ ಕಾಣಿಸಿಕೊಂಡವು. ಸೂಕ್ಷ್ಮ ಶಿಲಾಯುಗದಿಂದ ಸುಮಾರು ಕ್ರಿ.ಪೂ.(೧೦೦೦-೨೦೦೦) ಕಬ್ಬಿಣ ಯುಗದ ಬೃಹತ್ ಶಿಲಾಯುಗದ ಹಂತದ ಕೊನೆಯವರೆಗಿನ ಹಲವು ನೆಲೆಗಳು ಅಧ್ಯಯನ ಮಾಡುವ ಪಟ್ಟಿಯಲ್ಲಿವೆ. ಗುಹೆ, ಕಲ್ಲಾಸರೆಯ ವರ್ಣಚಿತ್ರಗಳು ೪೦ಕ್ಕೂ ಹೆಚ್ಚು ನೆಲೆಗಳಲ್ಲಿ ದೊರೆತಿವೆ. ಮೊಳಕಾಲ್ಮೂರು ತಾಲೂಕಿನ ನುಂಕಪ್ಪನ ಗುಡ್ಡದ ನಂತಮಲ್ಲಯ್ಯನ ಸಿದ್ದೇಶ್ವರರು ಮನುಷ್ಯ ಬೇಟೆಯಲ್ಲಿ ನಿರತ ರಾಕ್ಷಸರನ್ನು ಹೀಗೆ ಶಿಲಾಮೂರ್ತಿಗಳಾಗಿಸಿದರೆಂದು ಸ್ಥಳೀಯ ದಂತಕತೆ ಇದೆ. ಸತ್ತವರ ಕಥಾನಕವನ್ನು ಬರೆದು ನಿಲ್ಲಿಸುವ ಪರಿಪಾಠ ಅಲ್ಲಿ ಇನ್ನೂ ಕಾಣಬಹುದು. ಈ ಎಲ್ಲ ವಿಚಾರಗಳನ್ನು ಲೇಖಕರು ತಮ್ಮ ಬರವಣಿಗೆಯಲ್ಲಿ ಹೇಳಿದ್ದಾರೆ. ಅಲ್ಲದೆ ಪ್ರಾಚೀನ ಕಾಲದ ಇತಿಹಾಸದ ಮೇಲೆ ಬೆಳಕು ಚೆಲ್ಲಿದ್ದಾರೆ.

ಲೇಖಕರು ಆದಿಮ ಸತ್ವ ಕಣ್ಣು, ಕಿವಿ, ಕೈ ಎಂಬ ಶೀರ್ಷಿಕೆಯಲ್ಲಿ ಆದಿಮರಿಗೆ ದೃಶ್ಯ ಲೋಕದ ಜೊತೆಗೆ ಶಬ್ದಲೋಕವೂ ಪರಿಚಯವಿತ್ತು ಎಂದು ಅಭಿಪ್ರಾಯಪಡುತ್ತಾರೆ. ಇದರಲ್ಲೇನು ವಿಶೇಷವೆಂದು ವಿಚಾರಿಸಿದಾಗ ಅವರು ಚಿತ್ರರಚಿಸಿದ ಶಿಲಾಶ್ರಯ, ಗವಿಗಳು ಮುಂತಾದ ನಿಶ್ಶಬ್ದ ತಾಣಗಳಲ್ಲಿ ಸಿಗುವ ಆನಂದವನ್ನು ಅನುಭವಿಸುವುದರಲ್ಲಿ ಒಂದು ಆಪ್ಯಾಯಮಾನತೆ ಇದೆ ಎಂದು ಲೇಖಕರು ಆದಿಮರ ಆಸ್ವಾದನಾ ರೀತಿಯನ್ನು ತೋರಿಸಿದ್ದಾರೆ. ಭಿಂಬೇಟ್ಕಾದ ಗವಿಗಳಲ್ಲಾಗಲೀ, ಬಾದಾಮಿಯ ಸಿಡಿಲು ಪಡಿಯಲ್ಲಾಗಲೀ ಅಲ್ಲೆಲ್ಲ ನೀರವ ಮೌನವೇ ತುಂಬಿದೆ. ಮೌನವೇ ಮನೆ ಈ ನಿಶ್ಶಬ್ದದಲ್ಲಿಯೂ ಒಂದು ರೀತಿಯ ಆನಂದವನ್ನು ಆದಿಮರು ಅನುಭವಿಸುತ್ತಿದ್ದರು ಎಂದು ಹೇಳುವಲ್ಲಿ "ಶಬ್ದದೊಳಗಣ ನಿಶ್ಶಬ್ದ" ಎಂದಿದ್ದಾರೆ. ಮುಂದುವರೆದು(ಇತಿಹಾಸಪೂರ್ವ ಹಾಗೂ ನಂತರದ ಸಂದರ್ಭದಲ್ಲಿ ಶಿಲಾಯುಗ ನೆಲೆಗಳನ್ನು ಹೇಗೆಲ್ಲ ಬಳಸಲು ಪ್ರಯತ್ನಿಸಿರಬಹುದು? ಇಂದು ನೀರವ ಮೌನವಾಗಿರುವ ಹಿಂದೆಯೇ ಸತ್ತ ಈ ನೆಲೆಗಳು ಅಲ್ಲಿನ ಆತ್ಮಗಳ ಮೂಲಕ ಭೂತಕಾಲೀನವಾಗಿ ರಮ್ಯ ಅನುಭವಗಳನ್ನು ನೀಡಬಲ್ಲವು ಪ್ರಕೃತಿಯಲ್ಲಿ ನಿಶ್ಶಬ್ದವೂ ಇದೆ ಅದು ಶಬ್ದವನ್ನು ಸೃಷ್ಟಿಸಿದಂತೆ ನಿಶ್ಶಬ್ಧವನ್ನು ಸೃಷ್ಟಿಸಬಲ್ಲದು. ಆ ನಿಶ್ಶಬ್ದವನ್ನು ಒಂದು ರೀತಿಯ ಶಬ್ದವನ್ನಾಗಿಸಿಕೊಂಡು ಅದರ ಆನಂದವನ್ನು ಅನುಭವಿಸುತ್ತಿದ್ದರು. ಆಗಿನ ಆದಿಮ ಜನಾಂಗದವರು ಎಂದು ಆದಿಮಾನವರ ಅಸ್ವಾದನೆಯ ಪರಿಯನ್ನು ವಿವೇಚಿಸಿದ್ದಾರೆ.

## ೭.೨. ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ

ಚಿತ್ರ ಕಾವ್ಯ ಪ್ರಕಾಶನ ಬೆಂಗಳೂರು ಇವರಿಂದ ಪ್ರಕಟಗೊಂಡಿರುವ "ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ" ಕೃತಿಯಲ್ಲಿ ಶಿಲಾಯುಗದಲ್ಲಿ ಇದ್ದಂತಹ ರೇಖಾಚಿತ್ರಗಳು, ಆದಿಮ

ದೃಶ್ಯ ಸೌಂದರ್ಯದ ವರ್ಣನೆಯನ್ನು ಕಾಣಬಹುದು. ಲೇಖಕರು ೧೯೯೦ರ ದಶಕದಲ್ಲಿ ಬೆಂಗಳೂರಿನಲ್ಲಿ ಡಾ.ವಿಷ್ಣು ಎಸ್.ವಾಕನ್ಕರ್‌ರವರ ಭೇಟಿಯಿಂದಾಗಿ ಅವರು ತಮ್ಮ ಸಂಶೋಧನೆಯ ಹಲವು ಮುಖ್ಯ ಅಧ್ಯಾಯಗಳಿಂದ ಪಠ್ಯ ಹಾಗೂ ಚಿತ್ರಗಳನ್ನು ಜೆರಾಕ್ಸ್ ಪ್ರತಿ ನೀಡಿದ್ದು ಅವುಗಳಿಂದ ಆಕರ್ಷಕರಾಗಿ ಭೀಂಬೆಟ್ಕಾಗೆ ಹೋಗಿ ಅಧ್ಯಯನ ಮಾಡಿದರು. ಹಿಮಾಲಯ ತಪ್ಪಲನ್ನು ಹೊರತುಪಡಿಸಿ ಇಡೀ ಭಾರತದ ಬಹುತೇಕ ಗುಹೆ/ಶಿಲಾಶ್ರಯ ಚಿತ್ರನೆಲೆಗಳಿಗೆ ಭೇಟಿ ನೀಡುವ ಅವಕಾಶ ಮಾಡಿಕೊಂಡು ಲಲಿತಕಲಾ ಅಕಾಡೆಮಿಯ ಅನುದಾನದ ನೆಪದಲ್ಲಿ ಪುನಃ ಭೇಟಿ ನೀಡಿ ಬಹುಕಾಲ ಅಲೆದು ಹಲವು ಅಚ್ಚರಿಯ ಶಿಲಾಶ್ರಯ, ಚಿತ್ರಗಳನ್ನು ಕಂಡುಕೊಂಡರು. 'ಒಂಟಿಯಾಗಿರುವ ನನಗೆ ಅಲೆಮಾರಿತನ ಬಹುಪ್ರಿಯವಾಗಿರುವುದೂ ಅನುಕೂವೇ' ಎಂದು ಹೇಳುತ್ತಾರೆ. ಅದು ಸತ್ಯವೇ ಸರಿ. ಇಂತ ಅಲೆದಾಟದಲ್ಲಿ ನಮ್ಮ ರಾಜ್ಯದ ಟೇಕಲ್, ಘಟ್ಟ ಮಾದಮಂಗಲ ಹಾಗೂ ಆಂಧ್ರಪ್ರದೇಶದ ಕಂಗುಂದಿಗಳ ಹೊಸ ಶಿಲಾಶ್ರಯ ಚಿತ್ರಗಳನ್ನು ಶೋಧಿಸಿದ ಬಗ್ಗೆ ಪುಟ ವಿವರಗಳನ್ನು ಈ ಕೃತಿಯಲ್ಲಿ ಕಂಡರಿಸಲಾಗಿದೆ.

ಒಟ್ಟು ೪೮ ಪುಟಗಳನ್ನು ಹೊಂದಿದ ಈ ಕೃತಿಯಲ್ಲಿ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಗಳಲ್ಲಿದ್ದು, ೧೪ ಅಧ್ಯಾಯಗಳಾಗಿ ಬೇರ್ಪಡಿಸಿಕೊಂಡು ಒಂದೊಂದು ಪ್ರದೇಶವನ್ನು ಹೆಸರಿಸಿ, ವಿವರಣೆಗೆ ನೋಟ ೧, ೨ ಎಂಬ ಸೂಚನೆಯನ್ನು ನೀಡಿದ್ದು ವಿಶೇಷಣಿಯವಾಗಿದೆ. ೭ ಮತ್ತು ೧೪ನೇ ಅಧ್ಯಾಯದಲ್ಲಿ ಶಬ್ದಸೂಚಿಯ ವಿವರಣೆ ಮತ್ತು Index ಎಂಬ ಇಂಗ್ಲೀಷ್ ಪದಗಳ ಪರಿಚಯವನ್ನು ನೀಡಲಾಗಿದೆ.

ಅಲೆಮಾರಿ ಪ್ರವೃತ್ತಿ: ಆದಿಮ ದೃಶ್ಯ ಸೌಂದರ್ಯದ ಆದಿಪತ್ಯ ನೋಟ ೧, ಕೋಲಾರದ ಆದಿಮ ದೃಶ್ಯ: ೨ ಟೇಕಲ್ ಶಿಲಾಶ್ರಯಗಳ ಸಾಂಕೇತಿಕ ರೇಖಾ ರೂಪಗಳು, ನೋಟ ೩: ಘಟ್ಟಮಾದಮಂಗಲದ ಸಾಂಕೇತಿಕ ಚಿತ್ರಗಳು ನೋಟ: ೪, ಕಂಗುಂದಿಯಲ್ಲಿ ಕೆಂಗಾವಿ ಬಣ್ಣದ ಧಾರೆ ಧಾರೆ...., ನೋಟ ೫: ರೇಖಾ ರೂಪಗಳ ಅಲಂಕಾರ ವೈಭವ, ನೋಟ ೬: ಶಬ್ದಸೂಚಿ Power of primtive Aesctheticism View 1: The Primitive Visual world of Kolar, View :2, Coded Drawing of Tekal Rock Shelters View 3: The Painting of Ghattamada Mangala, View :4, Kangundi-Liguefied Red Ochere Poured on to... View :5, The Decorated Grandeur of line Drawings, View 6: Index ಎಂಬ ವಿಷಯಗಳನ್ನು ಕುರಿತು ವಿವರಣೆ ನೀಡಲಾಗಿದೆ. ಅದು ಈ ಕೆಳಗಿನಂತೆ ವಿಂಗಡಿಸಿಕೊಂಡು ವಿವರಿಸಿದ್ದಾರೆ.

**ನೋಟ ೧:** ಅಲೆಮಾರಿ ಪ್ರವೃತ್ತಿ ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ ಎಂಬ ಶೀರ್ಷಿಕೆಯಡಿ ಹಿಂದಿನ, ಇಂದಿನ ನೆಲೆಗಳ ನಡುವೆ ಅನೇಕ ಅಚ್ಚರಿ ಕೌತುಗಳಲ್ಲಿ, ನಮ್ಮ ದೃಶ್ಯಕಲೆಯ ಇತಿಹಾಸದಲ್ಲಿನ ಹಳೇ ಬೇರುಗಳನ್ನು ಶೋಧಿಸುವ ಚಟುವಟಿಕೆ ಕುರಿತಾಗಿ ಅದರ ಅನುಭವ ಪ್ರವೃತ್ತಿ, ಪ್ರಸ್ತುತ ತಂತ್ರಜ್ಞಾನದ ಸಂಸ್ಕೃತಿಯ ದಿನಗಳಲ್ಲಿ ಬೇರುಗಳು ಬಲಿಯಾಗುತ್ತಿರುವುದು

ಶೋಚನೀಯ ಸಂಗತಿ, ಈ ನಡುವೆ ಅವರ(ಲೇಖಕರ) ಅಲೆಮಾರಿತನದಲ್ಲಿ ೨೦೧೯ರಲ್ಲಿ ಕೋಲಾರ ಜಿಲ್ಲೆಯ ಬಂಗಾರಪೇಟೆ ತಾಲೂಕಿನ ಘಟ್ಟಮಾದಮಂಗಲ ಗ್ರಾಮದ ಕೆರೆಕೋಡಿಯ ಬಿಳಿಯ ಬೆಟ್ಟದ ಕೆಂಪು ಬಣ್ಣದ ಚಿತ್ರಗಳು, ಟೇಕಲ್ ಬೆಟ್ಟಗಳಲ್ಲಿನ ಬಿಳಿಯ ಬಣ್ಣದ ಚಿತ್ರಗಳ, ಟೇಕಲ್ಲಿನ ಶಿಲಾಶ್ರಯ ಚಿತ್ರಗಳು ಬಿಳಿ/ಹಳದಿ ಮಿಶ್ರಿತ ಬಿಳಿಯ ಬಣ್ಣದ ರೇಖೆಗಳು, ಘಟ್ಟಮಾದಮಂಗಲ, ಕಂಗುಂದಿಯ ಇತಿಹಾಸಪೂರ್ವ ಚಿತ್ರಗಳ ಶೋಧ ಈ ರೀತಿಯಾಗಿ ಅವರು ಶೋಧಿಸಿದ ಸ್ಥಳಗಳನ್ನು ಇಲ್ಲಿ ನಮೂದಿಸಿದ್ದಾರೆ.

**ನೋಟ ೨:** ರಲ್ಲಿ ಕೋಲಾರದ ಆದಿಮ ದೃಶ್ಯಲೋಕ ಕುರಿತಂತೆ ಇತಿಹಾಸ ಪರಂಪರೆಯನ್ನು ಪರಿಚಯಿಸುತ್ತಾ ಅವರು ಅನ್ವೇಷಿಸಿದ ಇತಿಹಾಸಪೂರ್ವ ಶಿಲಾಶ್ರಯಗಳು, ಕೋಲಾರ-ಬೇತಮಂಗಲ ರಸ್ತೆಯ ಹುನುಕುಂದ ಪಟ್ಟಣ ಬಳಿ ಹಲವು ಇತಿಹಾಸಪೂರ್ವ ಶಿಲಾಶ್ರಯಗಳನ್ನು ಹಾಗೆಯೇ ನರಸಾಪುರದ ಬಳಿಯ ಬೃಹತ್ ಶಿಲಯುಗದ ನೆಲೆ, ಬಂಗಾರಪೇಟೆ ಹೀಗೆ ಕೋಲಾರದ ಸುತ್ತಮುತ್ತಲಿನ ಸ್ಥಳಗಳಲ್ಲಿ ಶಿಲಾಶ್ರಯಗಳನ್ನು ಅನ್ವೇಷಿಸಿದ್ದು ಈ ಅನ್ವೇಷಣೆ ಮುಂದುವರೆದಿದೆ ಎನ್ನಲಾಗಿದೆ.

**ನೋಟ ೩:** ರಲ್ಲಿ ಟೇಕಲ್ ಶಿಲಾಶ್ರಯಗಳ ಸಾಂಕೇತಿಕ ರೇಖಾರೂಪಗಳ ಕುರಿತಂತೆ ಇಲ್ಲಿನ ಬೆಟ್ಟಗಳಲ್ಲಿ 'ಭೀಮನಗರಡಿ' ಎಂದೇ ಖ್ಯಾತವಾದ ೧೫೦ x ೭೦ ಅಡಿಗಳ ವೈಶಾಲ್ಯದ ಗುಹೆ ಮತ್ತೊಂದೆಡೆ 'ರೊಕ್ಕದ ಗವಿ' ಇದ್ದು, ಬಿಳಿಯ ಬಣ್ಣದ ಚಿತ್ರಗಳಿವೆ. ಇವು ಮಾನವ ರೂಪಗಳಂತಿದ್ದು, ಗಣಿಗಾರಿಕೆಗೆ ಕಾರಣದಿಂದ ನಾಶವಾಗಿವೆ. ಕೆಲವು ರೇಖಾಚಿತ್ರಗಳು ಮಾತ್ರ ಉಳಿದುಕೊಂಡಿವೆ ಎಂದು ಹೇಳುತ್ತಾರೆ. ಇನ್ನೊಂದೆಡೆ ೫೦ ಜನರು ಕುಳಿತು ವಿಶ್ರಾಂತಿ ಪಡೆಯಬಹುದಾದ ಶಿಲಾಶ್ರಯದ ಬಂಡೆಯಿದ್ದು ಕೊರೆದು ಮಾಡಿದ ವೃತ್ತಾಕಾರದ ರೂಪಗಳೆರಡಿವೆ. ವಿಶೇಷವೆಂದರೆ ಟೇಕಲ್ ಊರಿನ ದೇವಾಲಯ, ಮಸೀದಿಗಳ ಪಕ್ಕದಲ್ಲಿ ಎರಡು ವಿಶಿಷ್ಟ ಶಿಲಾಶ್ರಯಗಳಿದ್ದು ಒಂದರಲ್ಲಿ ಸಾಂಕೇತಿಕ ರೇಖಾ ರೂಪಗಳೇ ಅಲ್ಲದೆ ವಿಶಿಷ್ಟ ಮಾನವ ರೂಪಗಳೆರಡು ಅಮೂರ್ತ ಚಿಹ್ನೆ ವಿಶಿಷ್ಟ ವಿಚಿತ್ರ ರೂಪಗಳು(Symbolic elements ಹಾಗೂ Coded Message)ಇದ್ದು ಬೃಹತ್ ಶಿಲಾಯುಗ ಅಥವಾ ಇತಿಹಾಸ ಕಾಲದ್ದು ಆಗಿರಬಹುದು ಎನ್ನುತ್ತಾರೆ.

**ನೋಟ ೪:** ಘಟ್ಟಮಾದಮಂಗಲದ ಸಾಂಕೇತಿಕ ಚಿತ್ರಗಳು ಹೊಸ ಶಿಲಾಯುಗಕ್ಕೆ ಸೇರಿದ್ದು coded ಅಂಶಕ್ಕೆ ಪೂರಕವಾದ ಗ್ರಾನೈಟ್ ಬೆಟ್ಟದ ಶಿಲಾಶ್ರಯದ ಕೆಂಗಾವಿ(Red ochere ಕಾವಿ ಬಣ್ಣದ ಮೂಲದ ಬಣ್ಣ), ಬಣ್ಣದ ರೇಖಾಚಿತ್ರಗಳು, ಹಸ್ತದ ರೇಖಾಚಿತ್ರ ಸಂಯೋಜನೆ ಹಾಗೂ ಸಾಂಕೇತಿಕ ಆಲಂಕರಣದ ರೇಖಾ ರೂಪಗಳನ್ನು ಇಲ್ಲಿ ಪ್ರಸ್ತುತಪಡಿಸಿದ್ದು, ಅಧ್ಯಯನ ಯೋಗ್ಯವಾದ ಸ್ಥಳಗಳೆಂದು ಅಭಿಪ್ರಾಯಿಸಿದ್ದಾರೆ. ಅಲ್ಲದೆ ಕೆಲವು ಅಂಶಗಳನ್ನು ಪುರಾತತ್ವ ಸಂಶೋಧಕರಿಗೆ ಸೂಚಿಸಲಾಗಿದ್ದು ಗಮನಾರ್ಹ ವಿಷಯಗಳಿವೆ.

**ನೋಟ ೫ :** ರಲ್ಲಿ ಕಂಗುಂದಿಯಲ್ಲಿ ಸಂಶೋಧಿಸಿರುವ ಲೇಖಕರು ಕಂಗುಂದಿಯಲ್ಲಿ ಐತಿಹಾಸಿಕ ಹಿನ್ನೆಲೆ, ಅದರ ಇರುವಿಕೆಗೆ ಹೋಗಲು ಮಾರ್ಗಸೂಚನೆ, ಸ್ಥಳ ಪರಿಚಯಗಳನ್ನು ತಿಳಿಸುತ್ತಾ, ಅಲ್ಲಿರುವ ದೇವಾಲಯ ವಾಸ್ತುಶಿಲ್ಪ, ಬಂಡೆಗಳ ಮೇಲಿನ ಬೃಹತ್ ಉಬ್ಬು ಶಿಲ್ಪಗಳು, ಕಂಗುಂದಿ ಬೆಟ್ಟದ ರೂಪ ವೈಶಿಷ್ಟ್ಯತೆ ಮಣ್ಣು, ಕಲ್ಲಿನ ಕೋಟೆಯೊಂದಿದ್ದು, ಕಾಲದ ಪ್ರಭಾವಕ್ಕೆ ಸಿಲುಕಿ ಮೂಲ ಬೆಟ್ಟದ ಬಂಡೆಯ ಒಡಲಿಂದ ಜರುಗಿ ಬೇರ್ಪಟ್ಟಂತೆ ವಿಶಿಷ್ಟ ಶಿಲಾಶ್ರಯಗಳು ಉಂಟಾಗಿರುವ ರೀತಿಯನ್ನು ಲೇಖಕರು ವಿವರಣೆಯಲ್ಲಿ ನೀಡಿದ್ದಾರೆ. ಒಂದನೇ ಗುಹೆ ಎಂದು ಹೇಳಿಕೊಂಡಿರುವ ಗುಹೆಯಲ್ಲಿ ಕೆಂಗಾವಿ ಹಾಗು ಬಿಳಿಯ ಬಣ್ಣಗಳನ್ನು ದುಡಿಸಿಕೊಂಡಿದ್ದು, ಬೇಟೆಯಲ್ಲಿ ನಿರತನಾದ ಮಾನವರೂಪಗಳು ನಿಂತ ಭಂಗಿಯಲ್ಲಿದ್ದು ರೇಖಾಚಿತ್ರಗಳನ್ನೆಲಾಗಿದೆ. ಚಿತ್ರಿಸುತ್ತಿದ್ದ ಆ ಸಂದರ್ಭದಲ್ಲಿ ಶಿಲಾಶ್ರಯ/ಗುಹೆಗಳ ಬಂಡೆಗಳ ಮೈವಳಿಕೆ, ಬಿರುಕು, ಬಲ ಅಥವಾ ಇನ್ನಿತರ ಸಹಜ ಅಂಕುಡೊಂಕು, ಕೆಂಗಾವಿ ಬಣ್ಣ ಸುರಿದು ವಿಶಿಷ್ಟ ರೀತಿಯ ದೃಶ್ಯ ಸೌಂದರ್ಯ ಸೃಷ್ಟಿಯಾಗಿರುವುದನ್ನು ಇಲ್ಲಿ ಪರಿಚಯಿಸಿರುವುದು ಅರ್ಥಪೂರ್ಣವಾಗಿದೆ.

**ನೋಟ ೬:** ರಲ್ಲಿ ರೇಖಾರೂಪಗಳ ಅಲಂಕಾರ ವೈಭವ ಎಂಬ ಶೀರ್ಷಿಕೆಯಡಿ ಕಂಗುಂದಿ ಬೆಟ್ಟದ ಮಧ್ಯಭಾಗದಲ್ಲಿನ ಶಿಲಾಶ್ರಯದ ಬಂಡೆಯೊಂದರ ಮೇಲೆ ಮಳೆಯ ನೀರು ಸ್ಪರ್ಶಿಸಿದ ಅವಕಾಶದಲ್ಲಿ ಸಾಮಾನ್ಯ ಕಣ್ಣುಗಳಿಗೂ ಖುಷಿ ನೀಡುವ, ರಂಗೋಲಿಯಂತೆ ದೂರಕ್ಕೆ ಕಾಣುವ ಬಿಳಿಯ ಬಣ್ಣದ ರೇಖಾಚಿತ್ರ ಸಮೂಹ ಇದ್ದು ಅದರ ವಿಶಿಷ್ಟ ಅನಾವರಣ ರೇಖಾರೂಪ, ಅದರ ನಡುವೆ ಆದಿಮಾನವನ ಆನೆಯ ರೂಪದ ಕಲ್ಪನೆ, ಅಭಿವ್ಯಕ್ತಿಯನ್ನು ಲೇಖಕರು ಹೇಳಿದ್ದು, ಹಳದಿ ಮಿಶ್ರಿತ ಬಿಳಿಯ ಬಣ್ಣದ ಬಳಕೆ ಕಂಡುಬರುತ್ತವೆ. ಈ ರೀತಿಯಲ್ಲಿ ಆದಿಮಾವನ ಅಂತಸತ್ವವನ್ನು ಪ್ರದರ್ಶಿಸುವ ಈ ರೇಖಾ ಚಿತ್ರಗಳು ಅದ್ಭುತವೇ ಸರಿ. ನೋಡುಗರಿಗೆ ವಿಸ್ಮಯವನ್ನುಂಟು ಮಾಡಿ ಕಣ್ಮುಂದೆ ನಿಂತು ಮಂತ್ರಮುಗ್ಧರನ್ನಾಗಿಸುತ್ತವೆ. ಇನ್ನಷ್ಟು ಇಂತ ಅನ್ವೇಷಣೆಗಳು ನಡೆಯಬೇಕಾಗಿದ್ದು, ಅವುಗಳ ರಕ್ಷಣಾ ಕಾರ್ಯ ನಡೆಯಬೇಕಾಗಿರುವುದು ಮುಖ್ಯಕಾರ್ಯವಾಗಿರುವುದನ್ನು ಲೇಖಕರು ಇಲ್ಲಿ ಸೂಚಿಸಿದ್ದಾರೆ.

ಒಟ್ಟಾರೆ ಈ ಪುಸ್ತಕದಲ್ಲಿ ಇತಿಹಾಸಪೂರ್ವ ಕಾಲದ ಟೇಕಲ್ ಮತ್ತು ಘಟ್ಟಮಾದಮಂಗಲ, ಶಿಲಾಶ್ರಯಗಳನ್ನು ಲೇಖಕರು ಕಂಡುಹಿಡಿದಿರುವ ಹಲವಾರು ಸ್ಥಳಗಳ ಛಾಯಾಚಿತ್ರಗಳು ಮತ್ತು ಅವುಗಳ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದ್ದು, ಹೊಸ ಸಂಶೋಧನಾ ವಿಷಯವನ್ನು ಪುಸ್ತಕ ರೂಪದಲ್ಲಿ ಅಂದು ಕಲಾಲೋಕಕ್ಕೆ ಅರ್ಪಿಸಿದ್ದಾರೆ.

**ಟಿಪ್ಪಣಿಗಳು**

೧. ಸುಬ್ರಹ್ಮಣ್ಯಂ ಕೆ., **ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ,** ೨೦೧೧

೨. ಸುಬ್ರಹ್ಮಣ್ಯಂ ಕೆ.ಪಿ., **ಆದಿಮ ದೃಶ್ಯ ಸೌಂದರ್ಯದ ಆದಿಪತ್ಯ,** ೨೦೧೧

# ಅಧ್ಯಾಯ ಎಂಟು

## ಪತ್ರಿಕಾ ದೃಶ್ಯಕಲಾ ಸಾಹಿತ್ಯ

೮.೧. ವಿಷಯ ಕೇಂದ್ರಿತ ಬರೆಹಗಳು

೮.೨. ಕಲಾ ಪ್ರದರ್ಶನ ಕೇಂದ್ರಿತ ಬರೆಹಗಳು

೮.೩. ಕಲಾ ಶಿಬಿರ ಕೇಂದ್ರಿತ ಬರೆಹಗಳು

೮.೪. ಕಲಾ ವಿಮರ್ಶಾ ಕೇಂದ್ರಿತ ಬರೆಹಗಳು

೮.೫. ನಿಯತ ಕಾಲಿಕೆಗಳ ಬರೆಹಗಳು

೮.೬. ಇತರೆ ಬರೆಹಗಳು

## ಅಧ್ಯಾಯ ಎಂಟು

# ಪತ್ರಿಕಾ ದೃಶ್ಯಕಲಾ ಸಾಹಿತ್ಯ

ಕೆ.ವಿ.ಸುಬ್ರಹ್ಮಣ್ಯಂ ಅವರು ದೃಶ್ಯಕಲೆ ಮತ್ತು ಸಾಮಾಜಿಕ ಹೊಣೆಗಾರಿಕೆಯನ್ನು ಅರಿತವರಾಗಿದ್ದಾರೆ. ಹೀಗಾಗಿ ದೃಶ್ಯಕಲಾ ಸೇವೆಗಾಗಿ ತಮ್ಮ ಬದುಕಿನ ಅಮೂಲ್ಯ, ಸಮಯವನ್ನು ಮೀಸಲಿಟ್ಟಿರುವ ಅವರು ಜನರಿಂದ ದೂರವಾಗುತ್ತಿರುವ ದೃಶ್ಯಕಲೆಯನ್ನು ಹತ್ತಿರಕ್ಕೆ ತೆಗೆದುಕೊಂಡು ಹೋಗುವ ದೃಷ್ಟಿಯಿಂದ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯಲು ಪ್ರಾರಂಭಿಸಿದರು ಅಲ್ಲದೆ ಕೆಲವೊಂದು ಪತ್ರಿಕೆಗಳಿಗೆ ಸಂಪಾದಕರಾಗಿಯೂ ಕೆಲಸ ಮಾಡಿದ್ದಾರೆ. ಅವರ ಸಂಪಾದಕತ್ವದಲ್ಲಿ ಪ್ರಕಟಗೊಂಡ ಕರ್ನಾಟಕ ಕಲಾವರ್ತೆ ೧೯೯೯, ೨೦೦೦, ೨೦೦೧ರ ಸಂಚಿಕೆಗಳು ಮತ್ತು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ ಲಲಿತಕಲೆಯ ಸಂಪುಟ ಎಂಬುದಾಗಿವೆ. ಇವು ದೃಶ್ಯಕಲಾ ಕ್ಷೇತ್ರವನ್ನು ಮೇಲ್ಪಂಕ್ತಿಯಲ್ಲಿ ಕೊಂಡೊಯ್ಯುವ ಗುರಿಯನ್ನು ಹೊಂದಿದ್ದವು ಎಂಬುದು ಗಮನಾರ್ಹ ಅಂಶವಾಗಿದೆ.

ಪತ್ರಿಕೆಗಳು, ನಿಯತಕಾಲಿಕೆಗಳು ಕಾಲಬದ್ಧವಾದವುಗಳು, ಸಾಹಿತ್ಯ ಕೃತಿಗಳು, ಕಲಾತೀತವಾದವುಗಳು, ಎಂಬುದೊಂದು ಸಾಮಾನ್ಯವಾದ ತಿಳುವಳಿಕೆ. ಪತ್ರಿಕೆಗಳಲ್ಲಿಯೂ ಕಾಲಾತೀತವಾದದ್ದು ಇರಬಹುದು. ಹಾಗೆಯೇ ಸಾಹಿತ್ಯ ಕೃತಿಗಳೂ ಕಾಲಬದ್ಧವಾಗಿರುವುದು ಸಾಧ್ಯ ಎಂಬ ಸತ್ಯವನ್ನು ಅರಿತಿರುವವರು ಅಪರೂಪ. ಆದ್ದರಿಂದ ಪತ್ರಿಕಾ ಬರಹಗಳೆಂದರೆ ಹಲವರು ಮೂಗು ಮುರಿಯುವವರಿದ್ದಾರೆ. 'ಅವಸರದ ಸಾಹಿತ್ಯ'ವೆಂದು ನಿರ್ಲಕ್ಷಿಸುವವರೂ ಇದ್ದಾರೆ.

ಈ ತೆರನಾದ ಪೂರ್ವಗ್ರಹ ಪೀಡಿತ ದೃಷ್ಟಿಯಿಂದಲೇ ಅನೇಕರು ಪತ್ರಿಕಾ ಸಾಹಿತ್ಯದ ಕಡೆಗೆ ಗಮನ ಹರಿಸಿಲ್ಲವೆಂದು ತೋರುತ್ತದೆ. ಆದರೆ ಪತ್ರಿಕೆಯಲ್ಲಿಯ ಒಂದು ಸಣ್ಣ ವರದಿ ಹೊಸ ಇತಿಹಾಸಕ್ಕೆ ನಾಂದಿಯಾಗಬಹುದು. ಹಳೆಯದರ ಮೇಲೆ ಬೆಳಕು ಚೆಲ್ಲಬಹುದು. ಅದಕ್ಕೆ ಇತಿಹಾಸವನ್ನು ಕಟ್ಟುವ ಸಾಮರ್ಥ್ಯವು ಉಂಟು; ಕೆಡಹುವ ಸಾಮರ್ಥ್ಯ ಉಂಟು; ಆದ್ದರಿಂದ ಒಂದು ಕಾಲಘಟ್ಟದಲ್ಲಿ ಸಾಗಿ ಬಂದ ಒಂದು ಪತ್ರಿಕೆಯ ಅಭ್ಯಾಸವೆಂದರೆ ಆ ಕಾಲಘಟ್ಟದ

ಜನಾಂಗವನ್ನು ಅಭ್ಯಾಸಿಸಿದಂತೆ' ಎಂದು ಕೆಲವರು ಮಾತ್ರ ಪತ್ರಿಕೆಗಳ ಅಧ್ಯಯನ ಅಗತ್ಯವನ್ನು ಮನಗಂಡಿದ್ದಾರೆ.

ಈ ಹಿನ್ನೆಯಲ್ಲಿ ಕೆ.ವಿ.ಸುಬ್ರಹ್ಮಣ್ಯಂ ಅವರು ಸಂಯುಕ್ತ ಕರ್ನಾಟಕ, ಕಲಾವಾರ್ತೆ, ಸಂಕುಲ, ಕನ್ನಡ ಪ್ರಭ, ಉದಯವಾಣಿ, ಲೋಕವಾಣಿ, ದೃಶ್ಯಾಕ್ಷರ, ಶೂದ್ರ ಮುಂತಾದ ಪತ್ರಿಕೆಗಳಿಗೆ ಬರೆದಿರುವುದು ಕಂಡುಬರುತ್ತದೆ. ಪ್ರಸ್ತುತ ಅಧ್ಯಯನದಲ್ಲಿ ಈ ಮೇಲ್ಕಾಣಿಸಿದ ಕೆಲವು ಪತ್ರಿಕಾ ಲೇಖನಗಳು ಲಭ್ಯವಾಗಿದ್ದು, ಅದರಲ್ಲಿರುವ ವಿಷಯಗಳನ್ನು ಚಿಂತಿಸಿ ಮೆಲುಕು ಹಾಕುವಂತವಾಗಿದ್ದು, ಈ ಬಗ್ಗೆ ಕೆಳಗೆ ಸ್ಥೂಲವಾಗಿ ವಿವೇಚಿಸಲಾಗಿದೆ.

## ೮.೧. ವಿಷಯ ಕೇಂದ್ರಿತ ಬರಹಗಳು

೮.೧.೧. ಆದಿಮ ಕಲೆ

೮.೧.೨. ಗಾರೆ ಶಿಲ್ಪಗಳು

೮.೧.೩. ಐತಿಹಾಸಿಕ ನೆಲೆ

೮.೧.೪. ಉತ್ಸವಗಳು

### ೮.೧.೧. ಆದಿಮ ಕಲೆ

**ವಿಶ್ವದ ಆದಿಯ ಕಲೆಯ ಅಪೂರ್ವ ದೃಶ್ಯಗಳು:** ದಿನಾಂಕ ೦೮-೧೨-೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ವಿಶ್ವದ ಆದಿಮ ಕಲೆಯ ಅಪೂರ್ವ ದೃಶ್ಯಗಳು' ಎಂಬ ಲೇಖನದಲ್ಲಿ ಭಾರತೀಯ ಆದಿಮ ಕಲೆಗಳ ಛಾಯಾ ಚಿತ್ರಗಳ ಪ್ರದರ್ಶನದ ಉದ್ದೇಶ ಮತ್ತು ಪ್ರದರ್ಶನಗೊಂಡಿರುವ ಕಲಾಕೃತಿಗಳಲ್ಲಿನ ವಿಶೇಷತೆಯ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ.

೨೦೧೩-೧೪ರಲ್ಲಿ ನವದೆಹಲಿ ಇಂದಿರಾಗಾಂಧಿ ರಾಷ್ಟ್ರೀಯ ಕಲಾಕೇಂದ್ರ, ಬೆಂಗಳೂರಿನ ಆರ್ಕಿಯಾಲಾಜಿಕಲ್ ಸರ್ವೇ ಆಫ್ ಇಂಡಿಯಾ ಹಾಗೂ ಮಂಗಳೂರಿನ ರಾಷ್ಟ್ರೀಯ ಆಧುನಿಕ ಕಲಾ ಗ್ಯಾಲರಿಗಳ ಆಶ್ರಯದಲ್ಲಿ ನಡೆದ ವಿಶಿಷ್ಟ ಪ್ರದರ್ಶನ 'ದಿ ವರ್ಲ್ಡ್ ಆಫ್ ರಾಕ್ ಆರ್ಟ್' ಎಂಬ ಶೀರ್ಷಿಕೆಯಡಿ ನಡೆಯಿತು.

ಆದಿಮ ಸತ್ವಗಳ ಹಾಜರಿಯ ಈ ಪ್ರದರ್ಶನ ಇಡೀ ವಿಶ್ವದ ಆಯ್ದ ರಾಕ್ ಆರ್ಟ್ ಸೈಟುಗಳು ಡಿಜಿಟಲ್ ತಂತ್ರಜ್ಞಾನದ ಚಿತ್ರಗಳು ಕೆಲವು ಕೃತಕ ಶಿಲಾ ಅವಕಾಶಗಳಲ್ಲಿಯೂ ಪ್ರತಿ ಕೃತಿಯನ್ನು ಮಾಡಿಸಲಾಗಿದೆ. ಯುರೋಪಿನ ವೀನಸ್ ವಿಲ್ಲನ್ ಡ್ವಾರ್ಫನ್ ಶಿಲ್ಪ ಪ್ರತಿಕೃತಿಯೂ ಇದ್ದು ಮೂಲಕ್ಕಿಂತ ದೊಡ್ಡ ಆಕಾರದ ನಕಲು ರೂಪದಲ್ಲಿರುವುದು ನಿಗೂಢ ಉದ್ದೇಶ ಎಂದು ವಿಮರ್ಶಕರ ಮಾತಾಗಿದೆ.

ಪ್ರಸ್ತುತ ಬೆಂಗಳೂರಿನ ಈ ಪ್ರದರ್ಶನದ ವಿಶೇಷವೆಂದರೆ ನಮ್ಮ ದೇಶದ ಆದಿಮ ದೃಶ್ಯಕಲೆಯ ಪರಂಪರೆ ಮತ್ತು ವೈವಿಧ್ಯತೆಗಳು ಇಡೀ ವಿಶ್ವದ ಯಾವುದೇ ಆದಿಮ ಕಲಾಪ್ರಕಾರಗಳಿಗೂ ಸರಿಸಾಟಿಯಾಗಿ, ಕೆಲವೊಮ್ಮೆ ವಿಶಿಷ್ಟವಾಗಿ ನಿಲ್ಲುವ ಸಾಮರ್ಥ್ಯದ ದರ್ಶನ ಹಲವು ಮಿತಿಗಳ ನಡುವೆಯೂ ಈ ಮಾತು ಪ್ರಸ್ತುತವೇ ಸರಿ. ಒಟ್ಟು ೫ ಖಂಡಗಳ ಆಫ್ರಿಕಾ, ಯುರೋಪ್, ಏಷ್ಯ, ಆಷ್ಟ್ರೇಲಿಯಾ, ದಕ್ಷಿಣ ಮತ್ತು ಉತ್ತರ ಅಮೇರಿಕಾದ ಶಿಲಾ ಚಿತ್ರದರ್ಶಕಗಳಿಂದು ಅಪೂರ್ವ ಎಂದು ಅಭಿಪ್ರಾಯಿಸಿದ್ದಾರೆ.

**ಸಿಡಿಲು ಪಡಿಯ ಪ್ರಾಗಿತಿಹಾಸ ಕಾಲದ ದೃಶ್ಯ ಸ್ಮಾರಕ:** ದಿನಾಂಕ ೧೬-೧೬-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ಸಿಡಿಲುಪಡಿಯ ಪ್ರಾಗಿತಿಹಾಸ ದೃಶ್ಯ ಸ್ಮಾರಕ' ಎಂಬ ಲೇಖನದಲ್ಲಿ ಬಾದಾಮಿ ಹತ್ತಿರವಿರುವ ಆದಿಮ ಚಿತ್ರ ನೆಲೆಗಳಲ್ಲಿ ಒಂದಾದ ಸಿಡಿಲುಪಡಿ ಎಂಬ ಸ್ಥಳದ ಹಿನ್ನೆಲೆ ಮತ್ತು ಅಲ್ಲಿನ ಚಿತ್ರಗಳನ್ನು ಕುರಿತು ಇಲ್ಲಿ ವಿಮರ್ಶಕರು ಸಂಕ್ಷಿಪ್ತ ವಿವರಣೆಯನ್ನು ನೀಡಿದ್ದಾರೆ.

ಬಾದಾಮಿ ಪ್ರದೇಶದ ಹತ್ತು ಹಲವು ಕೌತುಕಗಳಲ್ಲಿ ಆಗರ ಅದು ಪ್ರಾಗಿತಿಹಾಸ, ಇತಿಹಾಸ ಹಾಗೂ ಸಮಕಾಲೀನ ದೃಶ್ಯಕಲಾ ದೃಷ್ಟಿಯಿಂದ ಬಹುಮುಖ್ಯ ತೆರೆದ, ಮ್ಯೂಸಿಯಂ ಆಗಿದೆ. ಸಿಡಿಲಪಡಿ, ಸೀತಿಡೋಣಿ, ಮಹಾಕೂಟ, ನಾಗನಾರ್ಥ ಕೊಳ, ಸಿದ್ಧನಕೊಳ್ಳ, ಬನಶಂಕರಿ, ಕುಟಕನ ಕೇರಿ, ಐಹೊಳೆ ಮೊದಲಾದೆಡೆಗಳಲ್ಲಿ ಬಾದಾಮಿಯ ಆತ್ಮವೇ ಆದಂತಹ ದೃಶ್ಯ ಸ್ಮಾರಕಗಳನ್ನು ಪರಿಶೀಲಿಸಬಹುದು.

ಸಿಡುಲುಪಡಿಗೆ ಹೋಗಬೇಕದರೆ, ಬಾದಾಮಿಯಿಂದ ಸುಮಾರು ಕೆಂಪು ಕೆಲವೊಮ್ಮೆ ಬಿಳಿಯ ಬಣ್ಣದ ಕಲ್ಲಿನ ಬೆಟ್ಟಗಳ ಮಧ್ಯದಲ್ಲಿ ನೀರಿನ ಆಸರೆಗಳಿಗೆ ಅವಕಾಶ ಎರಡೂ ತುದಿಯಲ್ಲಿ ಹಲವಾರು ಶಿಲಾಶ್ರಯಗಳನ್ನು ಕಾಣಬಹುದೆಂದು, ಶಿಲೆಯ ಕಾಲ ಸುಮಾರು ಭೀಂಭೇಡ್ಕಾ ಕಾಲಕ್ಕೆ ಹೊಂದಿಕೊಳ್ಳಬಹುದು ಎನ್ನುತ್ತಾರೆ. ನೂತನ ಶಿಲಾಯುಗಕ್ಕಿಂತಲೂ ಅಂದಿನ ಸಾವಿರಾರು ವರ್ಷಗಳ ಹಿಂದಿನ ಸಿಡಿಲು ಬಡಿದು ಕೊರಕಲಾದ ಬಂಡೆಗಳ ಸಾಲಿನಲ್ಲಿ ವಿಶಿಷ್ಟ ಶಿಲಾಶ್ರಯ ರೂಪುಗೊಂಡಿದೆ. ಅದನ್ನು ಪೂರ್ವಜರು ವಾಸಕ್ಕೆ ಪೂರಕವಾಗಿಸಿಕೊಂಡಿದ್ದರೆಂದು ಪಡಿಯ ಮೇಲ್ಭಾಗದಲ್ಲಿ ಮೂರು ರಂಧ್ರಗಳಾಗಿವೆ. ಇದು ಬೃಹತ್ ಶಿಲಾಯುಗ ಮತ್ತು ಇತಿಹಾಸ ಕಾಲಗಳಲ್ಲಿ ಮನುಷ್ಯನ ಕೈ ಚಳಕವನ್ನು ಅರಗಿಸಿಕೊಂಡಿರುವಂತಿವೆ. ಒಮ್ಮೆಗೆ ಹತ್ತು ಜನರು ಆಶ್ರಯ ಪಡೆಯಲನುವಾಗುವಂತಿದೆ. ಇದರ ಬಲ ಹಾಗೂ ಎಡಭಾಗದ ಭಿತ್ತಿಯಂತಹ ಅವಕಾಶದಲ್ಲಿ ಹಲವು ಕಾಲ ನೆಲೆಗಳ ಚಿತ್ರಗಳಿವೆ. ಸುಮಾರು ೨೦ ಅಡಿ ಎತ್ತರದ, ಸುಂದರ ಕಮಾನಿನಂತ ಚಿತ್ರಗಳು ಸಂಕೀರ್ಣವಾದವು. ಮಬ್ಬಾಗಿರುವ ಈ ಚಿತ್ರಗಳಲ್ಲಿ ಬಿಳಿ ಬಣ್ಣದ ಹಾವು, ಗುಬ್ಬಚ್ಚಿ, ಮನುಷ್ಯ ಮೊದಲಾದ ರೂಪಗಳಿವೆ. ಒರಟು ಶಿಲೆಯಾಗಿದ್ದು ಪಕ್ಕದಲ್ಲಿನ ಇನ್ನೊಂದು

ಶಿಲಾಶ್ರಯದಲ್ಲಿ ಆಟದಲ್ಲಿ ನಿರತ ಬಾಲಕ, ವೃತ್ತ-ಬಿಂದು, ಚೌಕ-ಬಿಂದುಗಳ ಬಿಳಿಯ ಬಣ್ಣದ ರೇಖಾಚಪ್ಪಟೆ ಚಿತ್ರಗಳಿವೆ.

ಒಟ್ಟಾರೆ ಐದನೆ ಶತಮಾನದಲ್ಲಿ, ಅಂದರೆ ಇತಿಹಾಸಪೂರ್ಣ ಕಾಲದಲ್ಲಿ ಮೂಡಿಬಂದಿರುವ 'ಶಂಕಲಿಪಿ'ಯ ಚಪ್ಪಟೆ ರೂಪಗಳಾಗಿದ್ದು ಇಂದಿಗೂ ನೋಡುಗರನ್ನು ಮೂಕ ವಿಸ್ಮಿತರನ್ನಾಗಿಸುತ್ತವೆಂದು ಇವರ ಅಭಿಪ್ರಾಯವಾಗಿದೆ.

**ನಾಗರಿಕರ ನಡುವೆ ಆದಿಮ ಸತ್ವಗಳ ಹಾಜರಿ!:** ದಿನಾಂಕ ೦೨-೦೯-೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ನಾಗರಿಕರ ನಡುವೆ ಆದಿಮ ಸತ್ವಗಳ ಹಾಜರಿ" ಎಂಬ ಲೇಖನದಲ್ಲಿ ಆದಿಮ ಕಾಲದಲ್ಲಿ ರಚಿಸಿದ ಚಿತ್ರಗಳು ಈ ಸಮಕಾಲೀನ ಸಂದರ್ಭದಲ್ಲಿ ಕಲಾವಿದನಿಗೆ ಅವು ತನ್ನ ಅಭಿವ್ಯಕ್ತಿಗೆ ಅತ್ಯಂತ ಮಹತ್ವದ ವಿಷಯಗಳೆನಿಸಿಕೊಂಡ ಜನಾಕರ್ಷಣೀಯವಾಗಿದ್ದು, ಇಬ್ಬರು ಕಲಾವಿದರ ಕಲಾಕೃತಿಗಳನ್ನು ಮುಂದಿಟ್ಟುಕೊಂಡು ಇಲ್ಲಿ ವಿಮರ್ಶಿಸುತ್ತಾ ಹೋಗಿದ್ದಾರೆ.

ಬ್ರಹ್ಮಾಂಡದ ಹಲವು ರೀತಿಯ ಆಗು-ಹೋಗುಗಳಲ್ಲಿ ನಮ್ಮ ಜನ ಹಾಗೂ ಇತರ ಗ್ರಹಗಳ ಸಂಪರ್ಕ ಸಾಧ್ಯತೆ ಕಾಣುತ್ತಿರುವ ಹಿನ್ನೆಲೆಯಲ್ಲಿ ಮನುಷ್ಯರೆಲ್ಲರೂ ಇತಿಹಾಸದ ಕಾಡುವಿಕೆಯ ಜತೆ ಜತೆಗೇ 'ಇಲ್ಲವೆ' ಅಥವಾ 'ಎಲ್ಲವೂ ಇಲ್ಲವಾಗುವಿಕೆಯ' ಗ್ರಹಿಕೆಯೂ ಬಂದು ಹೋಗಬಹುದು. ಇಂತವುಗಳ ಮಧ್ಯ ಆದಿಮ ಸತ್ವಗಳ ಪ್ರಾಣಿ ಸಹಜ ಸಂವೇದಿ ಅಭಿವ್ಯಕ್ತಿಗಳಲ್ಲಿ ಪ್ರಾಣಿಗಳು, ಇತಿಹಾಸ ಪೂರ್ವ ಗುಹೆ ಹಾಗೂ ಶಿಲಾಶ್ರಯ ಚಿತ್ರಗಳಲ್ಲಿ ಕಾಣಿಸಿಕೊಂಡಿರುವಂತೆ ಇಂದೂ ಕಾಣಿಸಿಕೊಳ್ಳುವುದು ಎಂದರೇನು? ಅದನ್ನು ಮೆಚ್ಚುವುದು ಎಂದರೇನು? ಲಕ್ಷಾಂತರ ಹಣ ನೀಡಿಕೊಳ್ಳುವುದರ ಹಿಂದಿನ ಮನಸ್ಸಿನ ಗತಿ ಬಿಂಬವನ್ನು ವಹಿಸಿಕೊಂಡರೆ ಅದರ ಅರ್ಥ ನಿಜವಾಗಿಯೂ ಅಚ್ಚರಿ ತರುವಂತಿದೆ.

ಈ ನಿಟ್ಟಿನಲ್ಲಿ ಬೆಂಗಳೂರಿನಲ್ಲಿ ಪ್ರದರ್ಶಿತವಾದ ಸುಜಿತ್ ಕುಮಾರ್ ಮಂಡ್ಯ ಮತ್ತು ಶೇಖರ್ ಬಳ್ಳಾರಿಯವರ ಕೃತಿಗಳಲ್ಲಿ ಆದಿಮ ಸತ್ವ ಶ್ರೀಮಂತಿಕೆ ಅನಾವಣಗೊಂಡಿದ್ದವು. ಸುಜಿತ್ ಅವರ 'ಗೂಳ' ಶೀರ್ಷಿಕೆಯ ಹಲವಾರು ರೇಖೆ ಹಾಗೂ ತೈಲವರ್ಣ ಕೃತಿಗಳು ಅದಿಮ ಅನುಭವಲೋಕದ ದರ್ಶನದಂತೆ ಅಭಿವ್ಯಕ್ತಿಸಿದ್ದು, ಆದಿಮ ಸತ್ವಯುಥ ಗಾಢ ಕೆಂಪು, ಕಪ್ಪು ಬಣ್ಣಗಳ ಸಂಯೋಜನೆ, ರೇಖಾ ಚಿತ್ರಗಳೂ ಇತಿಹಾಸ ಪೂರ್ವ ಚಿತ್ರ ಸಂವೇದನೆಯನ್ನು ಅರಗಸಿಕೊಂಡು ಸಮಕಾಲೀನವಾಗಿದ್ದವು. ಇದೇ ರೀತಿ ಅಭಿವ್ಯಕ್ತಿಯಲ್ಲಿ ಮೂಡಿಬಂದಿರುವ ಶೇಖರ್ ಬಳ್ಳಾರಿಯವರ 'ಕಂಬಳ'ದ ಶೀರ್ಷಿಕೆಯ ಕೋಣಗಳ ಚಿತ್ರಗಳಲ್ಲಿ ಒರಟು, ವಿಕೃತ ಸೌಂದರ್ಯ ಮೀಮಾಂಸೆಯನ್ನು ನೆನಪಿಸುವ ವಿಶಿಷ್ಟ ಸಂವೇದನ ಶೀಲತೆಯಿಂದ ಆದಿಮ ಸತ್ವದಿಂದ ಶ್ರೀಮಂತಗೊಳಿಸಿವೆ. ಈ ಇಬ್ಬರ ದೃಷ್ಟಿಯಲ್ಲಿನ ಆದಿಮತೆಯ ಆಯಾಮವು

ಹಲವರಿಗೆ, ಕಲಾಕೃತಿಕೊಳ್ಳುವವರಿಗೆ, ವೀಕ್ಷಕರಿಗೆ ಆದಿಮ ಪ್ರಜ್ಞೆಯನ್ನು ಎಚ್ಚರಗೊಳಿಸುವಂತಿದ್ದವು ಎನ್ನಲಾಗಿದೆ.

**ಇತಿಹಾಸ ಪೂರ್ವ ಬಲಚಕ್ರದ ಹೊಸ ಮುಖ:** ದಿನಾಂಕ ೨೪-೦೩-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಇತಿಹಾಸ ಪೂರ್ವ ಬಲಚಕ್ರದ ಹೊಸ ಮುಖ' ಎಂಬ ಲೇಖನದಲ್ಲಿ ಆದಿಮಾನವ ನೆಲೆಯಾದ ಯಾದಗಿರಿ ಬಳಿಯಿರುವ ಬಲಚಕ್ರ ಎಂಬ ಹಳ್ಳಿಯ ಬಳಿಯಿರುವ ಗುಡ್ಡದ ಮೇಲಿರುವ ಚಿತ್ರಗಳ ಕುರಿತು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಇತಿಹಾಸ ಪೂರ್ವದ ಈ ಚಿತ್ರಗಳು ಕೆಂಗಾವಿ ಬಣ್ಣದ ರೇಖಾಚಿತ್ರಗಳಾಗಿವೆ. ಸುಮಾರು ೬ ಮೀಟರ್, ೨ ಮೀಟರ್‌ಗಳಿಗಿಂತಲೂ ಹೆಚ್ಚು ವಿಸ್ತಾರದ ವಿಶಾಲ, ತೆರೆದ ಬಂಡೆಯ ಅವಕಾಶದಲ್ಲಿ ಹಲವು ಕಾಲಘಟ್ಟಗಳ ಮನುಷ್ಯ ಪ್ರಾಣಿಗಳ ವಿಶಿಷ್ಟ ರೇಖಾ ಅಧ್ಯಯನಗಳಂತಹ ಚಿತ್ರಗಳು. ವಿಶೇಷವಾಗಿ ಇಲ್ಲಿ ಕಂಡುಬಂದಿರುವುದು. ಬೃಹತ್ ಶಿಲಾಯುಗದ ಸಂದರ್ಭದಲ್ಲಿ ಈ ಶೀಲಾ ಮೇಲ್ಮೈ ಅವಕಾಶದಲ್ಲಿ ಮುಖದ ರೂಪವನ್ನು ರೂಪಿಸಿಕೊಳ್ಳಲಾಗಿದೆ. ಆದರೆ ಇದು ಪ್ರಕೃತಿ ಸಹಜ. ಆಕಸ್ಮಿಕ ಅಲ್ಲವೆಂದು, ಮನುಷ್ಯನ ಕಣ್ಣು, ಮನಸ್ಸು, ಕೈಗಳು ಕೆಲಸ ಮಾಡಿರುವ ಕಾರಣಕ್ಕಾಗಿಯೇ ಮೂಡಿಬಂದಿರುವ ಮುಖ ನಂತರ ಅದರ ಮೇಲೆಯೂ ಕೆಂಪು ಕಾವಿ ಬಣ್ಣದ ರೇಖಾಚಿತ್ರವನ್ನು ರೇಖಿಸಲಾಗಿದೆ. ಪ್ರಸ್ತುತ ಈ ಮುಖದ ಕಾರಣಕ್ಕಾಗಿ ಅಲ್ಲಿನ ರೇಖಾಚಿತ್ರಗಳು ಇನ್ನಷ್ಟು ಹೊಸ ಹೊಸ ನೋಟಗಳಿಂದ ನೋಡುವಂತೆ ವಿಶಿಷ್ಟ ಸಂದರ್ಭವನ್ನು ಸೃಷ್ಟಿಸಿಕೊಂಡಿದ್ದು ನಾವು ಕಾಣಬಹುದು.

ಒಟ್ಟಾರೆ ಇದು ಅಂದಿನ-ಇಂದಿನ-ಮುಂದಿನ ನೋಟಗಳ ಹಿಂದಿನ ಕುತೂಹಲ ಮುಗಿಯದ ದೃಶ್ಯಲೋಕದ ಒಂದು ಆಟ. ಎಂದು ವಿಮರ್ಶಕರು ಅದರ ಪ್ರಾಮುಖ್ಯತೆಯನ್ನು ಕುರಿತು ಈ ಲೇಖನದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.

### ೮.೧.೨. ಗಾರೆ ಶಿಲ್ಪಗಳು

**ಮೂಗೂರಿನ ಅಚ್ಚರಿಯ ಗಾರೆ ಶಿಲ್ಪಗಳು:** ದಿನಾಂಕ ೧೯-೦೮-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಮೂಗೂರಿನ ಅಚ್ಚರಿಯ ಗಾರೆ ಶಿಲ್ಪಗಳು" ಎಂಬ ಲೇಖನದಲ್ಲಿ ತಿರುಮಕೂಡಲು ನರಸೀಪುರ ತಾಲ್ಲೂಕಿನ ಐತಿಹಾಸಿಕ ಮೂಗೂರಿನ ತ್ರಿಪುರಸುಂದರಿ ದೇವಾಲಯದ ಐತಿಹಾಸಿಕ ಮತ್ತು ಅಲ್ಲಿನ ಗಾರೆ ಶಿಲ್ಪಗಳ ವೈಶಿಷ್ಟ್ಯತೆಯ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಮೈಸೂರು ಬಳಿಯ ತ್ರಿಪುರ ಸುಂದರಿ ದೇವಾಲಯದ ಜಾತ್ರೆಯು ಅಥವಾ ಉತ್ಸವ ಪ್ರತೀವರ್ಷ ಜನವರಿ ತಿಂಗಳಿನಲ್ಲಿ ನಡೆಯುತ್ತದೆ. ಈ ಸಂದರ್ಭದಲ್ಲಿ ಭೇಟಿ ನೀಡಿದ ಅಲ್ಲಿನ ಗಾರೆ ಶಿಲ್ಪಗಳನ್ನು ನೋಡಿ ಆಕರ್ಷನೆಗೊಂಡಿದ್ದಾರೆ. ಮೂಗೂರಿನ ತ್ರಿಪುರಸುಂದರಿ ದೇವಾಲಯ

ಸಾವಿರಾರು ಜನರನ್ನು ಆಕರ್ಷಿಸುವ ಪವಾಡಗಳ ನೆಲೆ, ಅಲ್ಲದೆ ನೃತ್ಯ ಮಂಟಪವು ಕೃಷ್ಣದೇವರಾಯನ ಕಾಲದಲ್ಲಿ ಕಟ್ಟಲಾಗಿದೆ. ಗೋಪುರವಿಲ್ಲದ ದೇವಾಲಯದ ಸುತ್ತಲೂ ದೇವ ದೇವಿಯರ ಗಾರೆ ಶಿಲ್ಪಗಳಿದ್ದು, ಮೈಸೂರಿನ ಶೈಲಿಯಲ್ಲಿ ಕಂಡುಬರುತ್ತವೆ ಎನ್ನಲಾಗಿದೆ. ಇಲ್ಲಿನ ಇನ್ನೊಂದು ಪ್ರಮುಖ ದೇವಾಲಯವಾದ ತ್ರಿಪುರ ಸುಂದರಿ ದೇವಿಯ ದೇಗುಲವು ಮೇಲ್ನೋಟಕ್ಕೆ ಶಿಲ್ಪಗಳು ಮೈಸೂರು ಶೈಲಿಯ ಶಿಲ್ಪಗಳೆನಿಸಿದರೂ ಸಂಪೂರ್ಣವಾಗಿ ಹೊಂದಿಕೊಳ್ಳಲಾರವು. ಜನಪದ ಕಲಾಶೈಲಿಯ ಒರಟುತನ ರೂಪುಗಳಾಗಿದ್ದು, ಕಾಲಾನಂತರದ ಮೈಸೂರು ಶೈಲಿಯ ಪ್ರಭಾವ ಬೀರಿದೆ. ಉಳಿದಂತೆ ಗೂಡು ಮಂಟಪಗಳ ಗಾರೆಯ ಅಲಂಕರಣ, ವಿನ್ಯಾಸ, ಕುಶಲತೆ ಇತ್ಯಾದಿಗಳು ಶ್ರವಣ ಬೆಳಗೋಳದ ಜೈನ ಮಠದ ಹೊರಗಿನ ಮಂಟಪಗಳ ಗಾರೆಗಳನ್ನು ನೆನಪಿಸುವಂತಿವೆ ಎಂದು ಸ್ಪಷ್ಟನೆ ನೀಡಿದ್ದಾನೆ.

ಒಟ್ಟಾರೆ ಇಲ್ಲಿನ ಗಾರೆ ಶಿಲ್ಪಗಳು ಐತಿಹಾಸಿಕ ಶೈಲಿಯ ಪ್ರೇರಣೆ, ಪ್ರಭಾವದಿಂದ ಕೂಡಿದ್ದ ಅತ್ಯಂತ ಕೌಶಲಕರಗಳು ಇಲ್ಲಿ ಕೆಲಸ ಮಾಡಿವೆ. ಇನ್ನು ಇಲ್ಲಿನ ಉಬ್ಬು ಅಲಂಕರಣ ವಿನ್ಯಾಸಗಳು ವಿಶಿಷ್ಟವಗಿವೆಯಲ್ಲದೆ ಹೆಚ್ಚು ವೈವಿಧ್ಯತೆಯಿಂದ ಕೂಡಿವೆ. ವಿಶೇಷವೆಂದರೆ ತಂಜಾವೂರಿನ ಚಿತ್ರಗಳಲ್ಲಿ ಬಳಸುವಂತೆ ಕತ್ತರಿಸಿದ ಗಾಜಿನ ತುಣುಕುಗಳನ್ನು ಇಲ್ಲಿನ ಗಾರೆ ಶಿಲ್ಪಗಳಲ್ಲಿ ದುಡಿಸಿಕೊಂಡಿದ್ದು ಗಮನಿಸಬಹುದು ಎಂದು ಇಲ್ಲಿ ಪರಿಚಯಿಸುತ್ತಾ ಇದೊಂದು ಅಧ್ಯಯನ ಯೋಗ್ಯ ವಿಷಯವೆಂದು ಕಂಡುಬರುತ್ತದೆ.

**ಶಿವಗಂಗೆಯ ಅಪೂರ್ವ ಶಿಲೆ ಮತ್ತು ಗಾರೆ ಶಿಲ್ಪಗಳು:** ದಿನಾಂಕ ೨೬-೦೮-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಶಿವಗಂಗೆಯ ಅಪೂರ್ವ ಶಿಲೆ ಮತ್ತು ಗಾರೆ ಶಿಲ್ಪಗಳು" ಎಂಬ ಲೇಖನದಲ್ಲಿ ಶಿವಗಂಗೆಯ ಗಂಗಾಧರೇಶ್ವರ ದೇವಾಲಯ ಶಿಲ್ಪ ಮತ್ತು ಗಾರೆಗಳ ವೈಭವೀಕತೆ ಮುಖ್ಯವಾಗಿ ಅವುಗಳ ಸಂರಕ್ಷಣೆಗೆ ಮಾಡಬೇಕಾಗಿರುವ ಕಾರ್ಯಗಳ ಬಗ್ಗೆ ಇಲ್ಲಿ ವಿಮರ್ಶಕರು ಎತ್ತಿ ತೋರಿಸಿದ್ದಾರೆ.

ಅರ್ಕಾವತಿ ನದಿ ಕಣಿವೆಯ ಪಶ್ಚಿಮಕ್ಕೆ ಕಾಣುವ ವಿಶಿಷ್ಟ ಭೂದೃಶ್ಯ ಲೋಕ ಈ ಶಿವಗಂಗೆ ಕಲಾವಿದರಿಗೆ ಬಣ್ಣಗಳ ಲೋಕ, ನಾಥಪಂಥದ ಬೌದ್ಧಸಿದ್ಧರ ಸ್ಥಳವಾಗಿತ್ತೆಂದು ಊಹಿಸಿದ್ದಾರೆ. ದ್ವೈವೀತಾಭಾವ ಕೇಂದ್ರಿತ ಹಿನ್ನೆಲೆಯ ಈ ಸ್ಥಳದಲ್ಲಿ ಇತಿಹಾಸ ಪೂರ್ವ ಸೆಲೆಗಳಾದ ಗ್ರಾನೈಟ್ ಗುಹೆಗಳನ್ನೇ ದೇವಾಲಯವನ್ನಾಗಿ ಕ್ರಿ.ಶ.೧೧೪೦ರಲ್ಲಿ ರೂಪಿಸಿದವನು ಬಟ್ಟದೇವ, ಹೊಯ್ಸಳ, ವಿಜಯನಗರ ಅರಸರು, ನಾಡಪ್ರಭು, ಕೆಂಪೇಗೌಡರಿಂದ ಈ ವಾಸ್ತುಶಿಲ್ಪವನ್ನು ವಿಸ್ತರಿಸಿದ್ದಾರೆ. ಈ ದೇವಾಲಯದ ಮಹಾಮಂಟಪದ ಪೂರ್ವದ ಅಂಚಿನಲ್ಲಿ ಪೂರ್ವ ಮಂಟಪವಿದೆ. ವಿಜಯನಗರ ದೇವಾಲಯ ವಾಸ್ತುಶಿಲ್ಪ ಶೈಲಿಯನ್ನು ನೆನಪಿಸುವಂತೆ ಮಂಟಪದ ಭಿತ್ತಿಗಳಲ್ಲಿ ಗಿರಿಜಾ ಕಲ್ಯಾಣದ ಸಂದರ್ಭದ ಸಾಲು ಸಾಲು ಉಬ್ಬು ಶಿಲ್ಪಗಳಿವೆ. ಕಂಬಗಳ ಮೇಲೆ ಉಬ್ಬು ಶಿಲ್ಪಗಳೂ ಸುಂದರ. ಈ ಮಂಟಪದ ನಿರ್ಮಾತೃಗಳ ಭಾವ ಉಬ್ಬು ಶಿಲ್ಪವೂ ಗಮನಾರ್ಹ.

ಮಂಟಪದ ಮೇಲೆ ಗಾರೆ ಶಿಲ್ಪಗಳೂ ಮೈಸೂರು ಶಿಲ್ಪ ಪರಂಪರೆಗೆ ಹತ್ತಿರವಾಗುತ್ತದೆ. ವಿಜಯನಗರದ ಮೂಲವನ್ನು ನೆನಪಿಸುವಂತಿದೆ. ವಿಶೇಷವೆಂದರೆ ಹೊನ್ನಮ್ಮ ಗವಿಮಠದ ಗಾರೆಶಿಲ್ಪಗಳು ಮತ್ತು ಹೊನ್ನದೇವಿ ದೇವಾಲಯದ ಭಿತ್ತಿಯ ಮೇಲ್ಭಾಗದ ದೇವಕೋಷ್ಠಗಳಲ್ಲಿ ರೂಪಗೊಂಡಿರುವ ಗಾರೆ ಶಿಲ್ಪಗಳು ಗಣನೀಯ ರೀತಿಯಲ್ಲಿ ಗಾರೆ ಶಿಲ್ಪ ಪರಂಪರೆಯ ಕುಶಲತೆಯನ್ನು ಅರಗಿಸಿಕೊಂಡಿವೆ. ಈ ಗಾರೆ ಶಿಲ್ಪಗಳು ಶಿಥಿಲ ಹಂತದಲ್ಲಿದ್ದು ಸಂಬಂಧಿಸಿದವರು ಸಂರಕ್ಷಿಸುವುದು ಅಗತ್ಯ. ಕರ್ನಾಟಕ ದೃಶ್ಯಕಲಾ ಇತಿಹಾಸಕ್ಕೆ ಕೊಡುಗೆಯೂ ಆಗಬಲ್ಲದು ಎಂದು ತಿಳಿಸಿದ್ದು ಮುಖ್ಯವಾದ ಅಂಶವಾಗಿದೆ.

**ಮೈಸೂರು ಪರಂಪರೆಯ ಚಿಕ್ಕಜಾಲದ ಗಾರೆಶಿಲ್ಪಗಳು:** ೨೦೧೨ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಮೈಸೂರು ಪರಂಪರೆಯ ಚಿಕ್ಕಜಾಲದ ಗಾರೆಶಿಲ್ಪಗಳು" ಎಂಬ ಲೇಖನದಲ್ಲಿ ಇತ್ತೀಚಿನ ವಿಮರ್ಶಕರ ಹುಡುಕಾಟದಲ್ಲಿ ದೊರೆತಿರುವ, ಬೆಂಗಳೂರು ಪಕ್ಕದಲ್ಲಿರುವ ಕೋಟೆಯಲ್ಲಿನ ಗಾರೆ ಶಿಲ್ಪಗಳ ಕುರಿತಾಗಿ ಇಲ್ಲಿ ಪ್ರಸ್ತುತಪಡಿಸಲಾಗಿದೆ.

ಬೆಂಗಳೂರು ದೇವನಹಳ್ಳಿಯ ನಡುವೆ ಚಿಕ್ಕಜಾಲ ಗ್ರಾಮದಲ್ಲಿ ಕೋಟೆಯೊಂದು ಕಾಣಿಸಿಕೊಂಡಿದೆ. ದೊಡ್ಡಜಾಲ-ಚಿಕ್ಕಜಾಲ ಹತ್ತಿರದ ಅಕ್ಕಯ್ಯಮ್ಮನ ಬೆಟ್ಟದ, ಆವರಣವೇ ಅಲ್ಲದೆ ಚಿಕ್ಕಜಾಲದ ಹಂಚಿಗೆ ಹೊಂದಿಕೊಂಡಿರುವ ಕಲ್ಲಿನ ಬೆಟ್ಟದಂಚಿನ ಹಲವೆಡೆಗಳಲ್ಲಿ ಹೊಸ ಹಾಗೂ ಬೃಹತ್ ಶಿಲಾಯುಗದ ಹಲವು ಶಿಲಾಶ್ರಯ/ಗುಹೆಗಳು, ಇನ್ನಿತರ ಗುರುತುಗಳು ಇಂದಿಗೂ ಕಾಣಬರುತ್ತವೆ. ಈ ಕೋಟೆಯಲ್ಲಿ ಒಳಗಡೆ ಮೈಸೂರು ಅರಸರ ಶೈಲಿಗೆ ಹತ್ತಿರವಾಗಿವೆ ಎಂದು ಸ್ಪಷ್ಟಪಡಿಸುತ್ತ ಅದಕ್ಕೇ ಹೊಂದಿಕೊಂಡಂತೆ ಮಂಟಪಗಳು, ಪೂರ್ವದಿಕ್ಕಿನಲ್ಲಿ ಪಶ್ಚಿಮಕ್ಕೆ ಮುಖಮಾಡಿದ ಆಂಜನೇಯನ ಗುಡಿ, ಕಲ್ಯಾಣಿ ಮಂಟಪ ೧೯ನೇ ಶತಮಾನದಲ್ಲಿ ಕಟ್ಟಲ್ಪಟ್ಟಿದೆ ಎನ್ನಲಾಗಿದೆ. ಗುಡಿಯ ಮೇಲಿನ ಗಾರೆಯ ಶಿಲ್ಪಗಳು, ಕಲ್ಯಾಣಿಯ ರಚನೆ ಹಾಗೂ ವಿಶಿಷ್ಟ ಉಬ್ಬು ಶಿಲ್ಪಗಳು ಆ ಸಂದರ್ಭದ ಸತ್ವವನ್ನು ಅರಗಿಸಿಕೊಂಡಿವೆ.

ಚಿಕ್ಕಜಾಲದ ಗಾರೆ ಶಿಲ್ಪಗಳಲ್ಲಿ ಶೈವ, ವೈಷ್ಣವ ಶಿಲ್ಪಗಳು ಬಣ್ಣ ಕಾಣುವ ಮುನ್ನವೇ ಕಾಲದ ಪ್ರಭಾವಕ್ಕೆ ಸಿಲುಕಿ ಶಿಥಿಲಗೊಂಡಿವೆ. ಗಾರೆ ಶಿಲ್ಪಗಳೂ ಮೂಡಿ ಬರುತ್ತಿದ್ದ ಕ್ರಮಗಳ ಅಭ್ಯಾಸಿಗಳಿಗೆ ಈ ಶಿಲ್ಪಗಳು ಉದಾಹರಣೆಯಂತಿವೆ. ಆರಾಧನೆ ಅರ್ಪಣೆಯ ಭಾವ ಬಡೆಯ/ಪಾಳೆಯಗಾರನೊಬ್ಬನ ಗಾರೆ ಶಿಲ್ಪ ಚಿಕ್ಕಜಾಲದ ಕೋಟೆಯಲ್ಲಿ ಆಕರ್ಷಕವಾಗಿ ಉಳಿದುಕೊಂಡಿವೆ ದೇವ-ದೇವಿಯರ ಅಲಂಕಾರದಲ್ಲಿ ತಂಜಾವೂರಿನ ಚಿತ್ರಗಳಲ್ಲಿ ಗಾಜನ್ನು ಬಳಸುವಂತೆ ಇಲ್ಲಿನ ಕೋಟೆಯ ಗಾರೆ ಶಿಲ್ಪಗಳಲ್ಲಿ ಹೊಳೆವ ಗಾಜುಗಳನ್ನು ಬಳಸಿರುವ ರೀತಿಯು ಅಚ್ಚರಿಯನ್ನುಂಟು ಮಾಡುತ್ತದೆ. ಕಲ್ಯಾಣಿ ಅಂಚಿನ ಕಲ್ಲಿನ ರಚನೆಗಳ ಭಿತ್ತಿಗಳಲ್ಲಿ ಹಾಗೂ ಮೆಟ್ಟಿಲುಗಳ ಮೇಲೆ ಹಲವು ವಿಶಿಷ್ಟ ಉಬ್ಬು ಶಿಲ್ಪಗಳಿವೆ. ಒಟ್ಟಾರೆ. ಅಧ್ಯಯನ ಯೋಗ್ಯ ವಿಷಯವು ಇದಾಗಿದೆ ಎಂದು ಸೂಚನೆಯನ್ನು ನೀಡುತ್ತ, ಜೊತೆಗೆ ಶಿಲ್ಪಗಳು ಶಿಥಿಲಗೊಳ್ಳುತ್ತಿದ್ದು, ಮಂಟಪಗಳನ್ನು,

ಕಲ್ಯಾಣಿಯನ್ನು ನವೀಕರಿಸುವ ಉದ್ದೇಶವನ್ನು ಸಾಧಿಸಬಹುದು, ಸಂರಕ್ಷಿಸಬಹುದು ಉಪಕಾರವಾಗುತ್ತದೆ ಎಂಬ ಮಾನವೀಯ ಮಾತುಗಳಿಂದ ಮನವಿಯನ್ನು ಈ ಮೂಲಕ ಸರ್ಕಾರದ ಮುಂದಿಟ್ಟಿದ್ದಾರೆ.

**೮.೧.೩. ಐತಿಹಾಸಿಕ ನೆಲೆಗಳು**

**ಹಳೆಬೀಡಿನ ದೈವೀಕ ದೃಶ್ಯ ಸೌಂದರ್ಯ:** ದಿನಾಂಕ ೨೩-೦೯-೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ಹಳೆಬೀಡಿನ ದೈವೀಕ ದೃಶ್ಯ ಸೌಂದರ್ಯ" ಎಂಬ ಲೇಖನದಲ್ಲಿ ಹಳೆಬೀಡು ದೇವಸ್ಥಾನದ ಶಿಲ್ಪಶೈಲಿಯ ಕುಶಲತೆ ಮತ್ತು ಅದನ್ನು ನಿರ್ಮಿಸಿದ ಕಲಾವಿದನ ಕೌಶಲ್ಯವನ್ನು ಕುರಿತು ಇಲ್ಲಿ ವಿಮರ್ಶಕರು ಪ್ರಸ್ತಾಪಿಸಿದ್ದಾರೆ.

೧೨ನೇ ಶತಮಾನದ ಹಳೆಬೀಡಿನ ಹೊಯ್ಸಳ ದೊರೆಗಳ ಪ್ರಯೋಜಿತ ದೇಗುಲಗಳ ಶಿಲ್ಪ ಶೈಲಿಯ ಕುಶಲತೆಯನ್ನು ಅತೀ ಜಾಣರೂ ಮೆಚ್ಚುತ್ತಾರೆ. ಇಂತಹ ಕುಶಲತೆಯ ಶಿಲ್ಪ ಸೃಷ್ಟಿಯಲ್ಲಿ ಕೆಲಸ ಮಾಡಿದ ಶಿಲ್ಪಿಗಳಲ್ಲಿ ಒಬ್ಬನೂ, ಬಹಳ ಪ್ರಸಿದ್ಧನೂ ಆಗಿದ್ದ 'ಮಾಬ' ಎಂಬುವವರು 'ಮಾ' ಎಂಬ ಒಂದೇ ಅಕ್ಷರವನ್ನು ತನ್ನ ಹೆಸರನ್ನು ಸೂಚಿಸಲು ಬಳಸಿದ್ದಾನೆ. ಅವನು ಭದ್ರಾವತಿಯ ಹೊಯ್ಸಳರ ಒಂದನೆಯ ನರಸಿಂಹನು ಕಟ್ಟಿಸಿದ ನರಸಿಂಹ ದೇಗುಲದಲ್ಲಿ ಹಳೆಬೀಡಿನ ಕೇದಾರೇಶ್ವರ ದೇಗುಲದಲ್ಲಿ, ಒಟ್ಟು ನಾಲ್ಕು ದೇಗುಲಗಳಲ್ಲಿ ಕೆತ್ತನೆಯ ನಿರತನಾಗಿದ್ದನು. ಹೀಗೆ ಕಾಲ-ಕೆಲಸದ ತಲ್ಲೀನತೆ ಅನುಭವಗಳು ಉತ್ತಮ ಕೌಶಲದ ಶಿಲ್ಪಗಳಿಗೆ ಕಾರಣವಾಗವೆ. ಇನ್ನೊಂದು ಮುಖ್ಯ ಅಂಶವೆಂದರೆ ಈ ನಾಲ್ಕು ದೇವಾಲಯಗಳಲ್ಲಿ ತನ್ನ 'ಮಾಬಾ ಮಾಡಿದ', 'ಮಾಬ' 'ಮಾ' ಎಂದೆಲ್ಲಾ ಆಗಲೇ ಸಹಿ ರಾಜಕಾರಣ ಇದ್ದಿತೆನ್ನುವುದಕ್ಕೆ ಸಾಕ್ಷಿಯಾಗಿದೆ.

ಇವನ ಕುಶಲತೆಯ ಸಾಕ್ಷಿಯೆಂಬಂತೆ ಈ ಅಂಕಣದಲ್ಲಿ ಕಾಣುವ ಸರಸ್ವತಿಯು ಇಂದು ನಾಳೆಗಳನ್ನು ಮೀರಿದ ದೈವೀಕಭಾವ ನೆಲೆಯ ಕಲ್ಪನಾ ಲಹರಿ, ಲೋಕೋತ್ತರ ಕಲೆಯ ಕುಸುರಿ, ಮಧ್ಯಮದ ಗುಣಧರ್ಮವನ್ನು ಆತ್ಯಂತಿಕವಾಗಿ ಶಿಲ್ಪಿಯು ದುಡಿಸಿಕೊಳ್ಳಲು ಯತ್ನಿಸಿದ್ದಾನಲ್ಲವೇ? ಈ ಶಬ್ದವು ನೋಡುಗರಿಗೆ ಸೌಂದರ್ಯದ ಸತ್ವವನ್ನು ಹುಡುಕುವಂತಿದೆ.

ಒಟ್ಟಾರೆ ಈ ಲೇಖನದ ಆಶಯ ಕಲೆಯನ್ನು ನೋಡಿ ಆಸ್ವಾದಿಸಿ ಮುನ್ನಡೆಯುವ ವೀಕ್ಷಕರೇ ಹೆಚ್ಚು ಆದರೆ ಅದನ್ನು ನಿರ್ಮಿಸಿದ, ಒಂದು ಸೌಂದರ್ಯ ರೂಪವನ್ನು ನೀಡಿದ ಕಲಾಕಾರನ ಬಗ್ಗೆ ಅಥವಾ ಶಿಲ್ಪಿಯ ಬಗ್ಗೆ ಯಾರೂ ಯೋಚನೆ ಮಾಡುತ್ತಿಲ್ಲ, ವಿಮರ್ಶಕರು ಈ ನಿಟ್ಟಿನಲ್ಲಿ ಜನ ಸಾಮಾನ್ಯರಿಗೆ ಮನದಟ್ಟಾಗಲು ಒಬ್ಬ ಕಲಾಕತೃವಿನ ಕೌಶಲ್ಯತೆ ಎಷ್ಟು ಮುಖ್ಯ ಎನ್ನುವುದನ್ನು ತಮ್ಮ ಮುಂದಿನ ದೃಶ್ಯಕಲಾ ವಿದ್ಯಾರ್ಥಿಗಳಿಗೂ ಆಗಲಿ, ವಿಚಾರ ವಿಕ್ಷಣೆ ಮಾಡುವವರಾಗಲಿ ಎಂದು ಒಂಧು ಸಣ್ಣ ಪರಿಚಯ ಅಥವಾ ಸಂದೇಶವಾಗುವಂತೆ ಅತ್ಯಂತ ಸುಂದರವಾಗಿ, ಸ್ಪಷ್ಟವಾಗಿ ವ್ಯಕ್ತಪಡಿಸಿದ್ದಾರೆ.

**ದೃಶ್ಯಕಲೆ ಮತ್ತು ಐತಿಹಾಸಿಕ ಪ್ರಜ್ಞೆ**

ದಿನಾಂಕ ೦೭-೦೬-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ದೃಶ್ಯಕಲೆ ಮತ್ತು ಐತಿಹಾಸಿಕ ಪ್ರಜ್ಞೆ" ಎಂಬ ಲೇಖನದಲ್ಲಿ ಪುರಾಣ, ಇತಿಹಾಸಗಳಿಗೆ ಸಂಬಂಧಿಸಿದಂತೆ ಚಿತ್ರಗಳನ್ನು ಇಂದಿಗೂ ನಮ್ಮ ಕಲಾವಿದರು ಬಳಸಿಕೊಳ್ಳುತ್ತಿರುವುದು ಮತ್ತು ಅದರ ಪಾರಂಪರಿಕತೆಯ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ಥಾಪಿಸಿದ್ದಾರೆ.

ಬಹು ಹಿಂದೆ ರನ್ನನ 'ಗದಾಯುದ್ಧ' ಸ್ವಲ್ಪ ಹಿಂದೆ ಎಂ.ಟಿ.ವಿ. ಆಚಾರ್ಯರ ವರ್ಣಚಿತ್ರ 'ಗದಾಯುದ್ಧ'ಗಳು ಮೂಡಿಬಂದಿದ್ದು ಭಾರತೀಯ ಸಿನಿಮಾಗಳನ್ನು ಹಲವು ಭಾಷೆಗಳಲ್ಲಿ, ಹಲವು ರೀತಿಗಳಲ್ಲಿ ಪುರಾಣ, ಇತಿಹಾಸಗಳ ಕಥಾ ಸಂದರ್ಭ ಲೋಕಗಳು ಕಾಣಿಸಿಕೊಳ್ಳುತ್ತಲೇ ಇವೆ. ಎಂ.ಟಿ.ವಿ. ಆಚಾರ್ಯರ ಮಹಾಭಾರತದ ಚಿತ್ರಗಳನ್ನು ಇಂದಿಗೂ ಬಿಟ್ಟು ಕಣ್ಣು ಬಿಟ್ಟಂತೆ ನೋಡುವುದು, ಗದಾಯುದ್ಧ ತೈಲವರ್ಣ ಕೃತಿಯ ಕಲ್ಪನಾ ಲೋಕದ ವೈಭವ ಪೂರಿತ ಭವ್ಯರೂಪಗಳು ಲೋಕದ ರೂಪಗಳಾಗಿವೆ. ಇಂದಿನ ಸಂದರ್ಭದ ಚಂದ್ರನಾಥ್, ಬಿ.ಕೆ.ಎಸ್.ವರ್ಮ, ರಘುಪತಿ ಭಟ್ಟರಂಥ ಕಲಾವಿದರು ಪ್ರತಿದಿನವೂ ಕೃತಿಗಳ ಸೃಷ್ಟಿಯಲ್ಲಿ ತೊಡಗಿದ್ದಾರೆ. ಸಾಹಿತ್ಯ, ನೃತ್ಯ, ಸಂಗೀತ ಹಾಗೂ ಸಿನಿಮಾಗಳಲ್ಲಿಯೂ ಈ ಪುರಾಣ, ಐತಿಹಾಸಿಕ, ಪ್ರಜ್ಞೆಗಳು ಹೆಚ್ಚು ಕಾಣಿಸಿಕೊಳ್ಳುತ್ತಿರುವುದು ಸಂತೋಷದ ವಿಷಯವೆಂದು ಇಲ್ಲಿ ಅಭಿವ್ಯಕ್ತಿಸಿದ್ದಾರೆ.

**೮.೧.೪. ಉತ್ಸವಗಳು**

**ದಸರಾ ಸಂಗೀತದ ಆನಂದ ಲಹರಿ:** ದಿನಾಂಕ ೧೩-೧೦-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ದಸರಾ ಸಂಗೀತದ ಆನಂದ ಲಹರಿ" ಎಂಬ ಲೇಖನದಲ್ಲಿ ಅಪರೂಪದ ಗಾಯಕ ವೆಂಕಟೇಶ್ ಕುಮಾರ ಅವರು ಹಾಡಿದ ಸಂಗೀತ ಲಹರಿಗಳ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ಥಾಪಿಸಿದ್ದರೆ.

ಶತಮಾನೋತ್ಸವ ಆಚರಿಸಿಕೊಂಡಿರುವ ಮೈಸೂರು ಅರಮನೆಯ ದಸರಾ ಉತ್ಸವದಲ್ಲಿ ನಡೆದ ಸಂಗೀತ ಕಾರ್ಯಕ್ರಮದಲ್ಲಿ ಗಾಯಕ ವೆಂಕಟೇಶ್ ಕುಮಾರ್ ಹಿಮಾಲಯದ ಎತ್ತರವೇ ಅಲ್ಲದೆ ಗೋಲ್‌ಗುಂಬಜ್‌ನ ಪಿಸುಮಾತಿನ ಕೆಳಸ್ತರದ ಗಾನ ಲಹರಿಯಲ್ಲೂ ಕೇಳುಗರನ್ನೂ ಮುಳುಗಿನಬಲ್ಲ, ಮಾರ್ವಾರಾಗದ(ಮಾಳವ ರಾಗ) ವೈಭವದಿಂದ ತಮ್ಮ ಸಂಗೀತ ಸಾಮರ್ಥ್ಯದ ಗಾಂಭೀರ್ಯಮಯ ಸೊಗಸನ್ನು ಹಲವು ಎಕರೆಗಳ ಪ್ರದೇಶಗಳಲ್ಲಿ ಕೇಳಿದ ಸಾವಿರಾರು ಕಿವಿಗಳಿಗೆ ತಲುಪಿಸಿದ್ದಾರೆ.

"ಪ್ರಾರ್ವತಿಯೇ ದೇವಿಯೇ ಗಿರಿಜೆಯೇ ಕಲ್ಯಾಣಿಯೇ...." ಆರಂಭಗೊಂಡಾಗ ಚಾಮುಂಡಿಯನ್ನೇ ತಮ್ಮಲ್ಲಿ ತುಂಬಿಕೊಂಡಿರುವಂತೆ ಪ್ರೇಕ್ಷಕರು ಕೇಳುಗರಾಗಿಯೇ ರೂಪಾಂತರ ಗೊಳ್ಳುವಂತೆ ವೆಂಕಟೇಶ್ ಕುಮಾರರು ತಮ್ಮ ಗಾಂಭೀರ್ಯಮಯ, ಪಕ್ವಗೊಂಡ ಕಂಠದಿಂದ

ಮಾತ್ರಿಕನಂತೆ ಪ್ರಸ್ತುತಪಡಿಸಿದರು. ಹೊಸ ಲೋಕವೇ ಕಂಡಂತಿತ್ತು ಎನ್ನುತ್ತಾರೆ. ಸ್ವರ ಸಂಚಾರಿ ಏರಿಳಿತ, ಮೊರೆತ, ಜಿಗಿತ, ಮೌನ, ಮಾತು ಮೊರೆತಗಳ ವಿಶಿಷ್ಟ್ಯ ಸಾಂಗತ್ಯದ ಈ ಸಂಗೀತ ರಸಯಾತ್ರೆಯಲ್ಲಿ ಮಿಂದವರಿಗೆ ಇದೊಂದು ಜೀವಮಾನದಲ್ಲಿ ಚಿರಸ್ಮರಣಿಯವಾಗಿ ಉಳಿಯಬಲ್ಲ. ಅನುಭವ, ಅನುಭಾವವಾಗಿ ಕಾಡಬಲ್ಲದು. ಬಸವಣ್ಣ, ಅಲ್ಲಮ ಪ್ರಭುಗಳ ವಚನಗಳು, ಕನಕದಾಸರ ಕೀರ್ತನೆಗಳು, ಹಾಡಿದಾಗ 'ಸರ್ವವನ್ನೂ ಸಮರ್ಪಿಸಿಕೊಂಡೆ' ಒಪ್ಪಿಸಿಕೊಂಡತ್ತಿದ್ದು, ಒಟ್ಟಾರೆ ವೈವೀಧ್ಯಮಯ ರಾಗಗಳ ವೈಭವಯುತ ಯೋಗವಾಗಿ ಕಾಡಿದ ವಿಶಿಷ್ಟ ಸಂಗೀತ ಅಂದಾಗಿತ್ತೆಂದು ಅದರಲ್ಲಿಮಿಂದೆದ್ದ ವಿಮರ್ಶಕರ ನುಡಿಗಳಿಂದ ನಮಗೂ ಅದರ ವೈಭವೀಕತೆಯನ್ನು ಈ ಮೂಲಕ ತೋರ್ಪಡಿಸಿದ್ದಾರೆ.

**ಸುಂದರವಾಗಿ ಕಾಣಿಸಿಕೊಂಡ ಕಲೋತ್ಸವ:** ದಿನಾಂಕ ೨೯-೧೨-೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಸುಂದರವಾಗಿ ಕಾಣಿಸಿಕೊಂಡ ಕಲೋತ್ಸವ" ಎಂಬ ಲೇಖನದಲ್ಲಿ ಎಂ.ಮೂರ್ತಿಯವರ ನೇತೃತ್ವದಲ್ಲಿ ವಿವಿಧ ರಂಗದ ಕಲಾವಿದರುಗಳು ಸೇರಿಕೊಂಡು ಮಾಡಿರುವ ಅಪೂರ್ವ ಕಾರ್ಯಕ್ರಮದ ಕುರಿತು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ದಿನಾಂಕ ೨೨-೧೨-೨೦೧೩ರಂದು ನಡೆದ ಕಲೋತ್ಸವ ಎಂಬ ಶೀರ್ಷಿಕೆಯಡಿ ದಿ.ಎ.ಎಸ್. ಮೂರ್ತಿಯವರಿಂದ ಒಡ ಮೂಡಿ ಬಂದಿದ್ದ ಪ್ರತಿಭೆಗಳು ನಡೆಸುವ ಹಲವು ಸಂಸ್ಥೆಗಳ ಸಮೂಹ ಒಂದು ವಿಶಿಷ್ಟ ಕಲಾವಾತಾವರಣ ಸೃಷ್ಟಿಸಿದ್ದ. ಅಲ್ಲಿ ಚಿತ್ರ, ಸಂಗೀತ, ನಾಟಕ ಎಂಬ ಮುಖ್ಯ ವಿಷಯಗಳೇ ಅಲ್ಲದೆ ಹತ್ತಾರು ಕಲಾ ಪ್ರಕಾರಗಳೂ ಸಾವಿರಾರು ಜನರಿಗೆ ಸಂಭ್ರಮ ಮೂಡಿಸಿದ ಉತ್ಸವವಾಗಿತ್ತು.

ಹಿರಿಯ ಶಿಲ್ಪಿಗಳಾದ ವೆಂಕಟಾಚಲಪತಿಯವರಿಂದ ಸೃಷ್ಟಿಯಾಗಿರುವ ಎ.ಎಸ್.ಮೂರ್ತಿಯವರ ಕಂಚಿನ ಭಾವಶಿಲ್ಪ, ಮೂರ್ತಿಯವರ ಬದುಕು ಮತ್ತು ಕಲೆಗಳ ವಸ್ತು ಪ್ರದರ್ಶನ, ಇವರ ಪ್ರಸ್ತುಕ ಬಿಡುಗಡೆ ಅಲ್ಲದೆ ಬೀದಿ ನಾಟಕಗಳು, ಪ್ರತಿಷ್ಠಾಪನಾ ಅಭಿವ್ಯಕ್ತಿಗಳು, ಕರಕುಶಲ ಕಲೆಗಳ ಪ್ರದರ್ಶನ ಎಂ.ಡಿ.ಪಲ್ಲವಿಯವರ ಗಾಯನ, ಅದಕ್ಕೆ ಬಿ.ಕೆ.ಎಸ್.ವರ್ಮರವರು ಕುಂಚಗಾಯನ ಸಂದರ್ಭ, ವಾಸುದೇವರ ವಿಶಿಷ್ಟ ಅಭಿವ್ಯಕ್ತಿಗಳು ಸ್ವಾಗತಾರ್ಹ ರೀತಿಯಲ್ಲಿ ಪ್ರಸ್ತುತಗೊಂಡಿದ್ದು ಇಂತಹ ಒಳ್ಳೆ ಕಾರ್ಯಕ್ರಮ ಪ್ರತೀ ವರ್ಷವು ನಡೆಯಲ್ಲಿ ಎಂಬ ಆಶಯ ಭಾವನೆಯನ್ನು ವ್ಯಕ್ತಪಡಿಸಿದ್ದಾರೆ.

**ಚಿತ್ರಸಂತೆಯ ದೃಶ್ಯಕಲಾ ದರ್ಶನ:** ದಿನಾಂಕ ೦೭-೦೨-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ಚಿತ್ರಸಂತೆಯ ದೃಶ್ಯಕಲಾ ದರ್ಶನ' ಎಂಬ ಲೇಖನದಲ್ಲಿ ಇಡೀ ರಾಷ್ಟ್ರದ ನೂರಾರು ಕಲಾವಿದ, ಕಲಾವಿದೆಯರು ಸಾವಿರಾರು ನೋಡುಗರು, ಕೊಳ್ಳುಗರು, ಪ್ರಭಾವಹಿಸುವಂತ ಚಿತ್ರಸಂತೆಯೆಂಬ ಉತ್ಸವದಲ್ಲಿನ ಕಲಾಕೃತಿಗಳ ಕುರಿತಂತೆ ಅಲ್ಲಿನ ಒಟ್ಟು ಅಭಿವ್ಯಕ್ತಿಗಳನ್ನು ಕುರಿತಾಗಿ ಸಂಕ್ಷಿಪ್ತ ರೀತಿಯಲ್ಲಿ ವಿಮರ್ಶಕರು ಇಲ್ಲಿ ಪ್ರಸ್ತಾಪನೆ ಮಾಡಿದ್ದಾರೆ.

ಚಿತ್ರಕಲಾ ಪರಿಷತ್ತಿನ ಹೊರಗಡೆ, ನಡೆಯುವ ಚಿತ್ರಸಂತೆಯಲ್ಲಿ ನೂರಾರು ರಾಜ್ಯ ರಾಷ್ಟ್ರ ಮಟ್ಟದ ಕಲಾವಿದರು, ಕಲಾಪ್ರಿಯರು, ಕೊಳ್ಳುವವರು ಆಗಮಿಸಿದ್ದು, ಹಲವು ತಲೆಮಾರಿ(ತಲೆಮಾರು)ಯ, ದಶಕಗಳ ದೃಶ್ಯಧ್ಯಾನದ ದೃಷ್ಟಿಯ ಆ ಪ್ರದರ್ಶನ ಎಂ.ಎಸ್.ನಂಜುಂಡರಾವ್‌ರವರ ನೆನಪಿಗೆ ಅರ್ಪಣೆಯಾಗಿತ್ತು ಎಂಬುದೂ ಗಣನೀಯ ಅಂಶ. ಇನ್ನು ಕಟ್ಟಡದ ಒಳಗೆ 'ಚಿತ್ರ ದರ್ಶನ' ಶೀರ್ಷಿಕೆಯಡಿ 'ತಲೆಮಾರುಗಳು ಪ್ರಕಾರಗಳು' ಮೂರನೆಯ ಅವೃತ್ತದ ದರ್ಶನ ಡಾ.ಆರ್.ಹೆಚ್. ಕುಲಕರ್ಣಿ ಮತ್ತು ಎಚ್.ಎ.ಅನಿಲಕುಮಾರರವರು ಕ್ಯುರೇಟ ಮಾಡಿದ ಐತಿಹಾಸಿಕ ಪ್ರದರ್ಶನ ಇದಾಗಿತ್ತು ಎನ್ನುತ್ತಾರೆ. ಆದರೆ ಪ್ರದರ್ಶಿತ ಕೃತಿಗಳ ಆಯ್ಕೆ ಕಲಾವಿದ/ಕಲಾವಿದೆಯರದೇ ಎಂಬುದೂ ಕ್ಯಾರೇಟರ್‌ಗಳ ಆಯ್ಕೆ ಅಲ್ಲ ಎಂಬುದು ಈ ದೃಷ್ಟಿಯ ಗಮನಾರ್ಹ ಎಂದು ಭಾವಿಸಲಾಗಿದೆ. ಹಲವಾರು ಶಿಲ್ಪಗಳು ಚಿತ್ರಕೃತಿಗಳನ್ನು ಪೋಟೋ ಶಿಲ್ಪಗಳನ್ನು ಕಳುಹಿಸಿ ಕೊಟ್ಟಿರುವುದು ಒಂದು ಮುಖ್ಯ ಅಂಶವೆಂದು ಹೇಳಲಾಗಿದೆ. ೬೦–೭೦ರ ವಯೋಮಾನದ ಈ ಪ್ರದರ್ಶನದ ಕಲಾವಿದ/ಕಲಾವಿದೆಯರು ತಮ್ಮ 'ವೈಯಕ್ತಿತ ಅಭಿವ್ಯಕ್ತಿ' ಹಾಗೂ ಸ್ವಾತಂತ್ರ್ಯ ನಂತರ ತತ್‌ಕ್ಷಣದ ಆಧುನಿಕ ಗಾಳಿ ಮೀರಿದ ವಿ.ಜಿ.ಅಂದಾನಿ, ಮಲ್ಲಿಕಾರ್ಜುನ್ ಜಾಧವ್, ರಾಮಧಾಸ್ ಅಡ್ಯಂತಾಯರಂಥವರು ಇದ್ದಾರೆಂಬುದೂ ಮತ್ತೊಂದು ನೋಟಕ್ಕೆ ಕಾರಣವಾಗುವುದಲ್ಲಿದೆ. ವರ್ಣ ಚಿತ್ರಗಳಲ್ಲಿ ಅಭಿವ್ಯಕ್ತಿಸಿರುವ ಎನ್.ಸಿ.ಪಾಟೀಲ, ಕೃಷ್ಣರಾಜೇಂದ್ರ ಕುಮಾರ್ ಮೊದಲಾದವರು ಪ್ರಿಂಟ್ ಮಾಧ್ಯಮ ಮತ್ತು ಮಿಶ್ರಮಾಧ್ಯಮದಲ್ಲಿ ಅಭಿವ್ಯಕ್ತಿಸಿದ್ದಾರೆ. ಕೆಲವರು ಛಾಯಾಚಿತ್ರ ಮಾಧ್ಯಮವನ್ನು ದುಡಿಸಿಕೊಂಡಿರುವುದು ಕಂಡುಬರುತ್ತಿತ್ತು. ಒಟ್ಟಾರೆ ಸಂಭ್ರಮದ ನಡುವೆ ಒಂದು ಅಧ್ಯಯನಯೋಗ್ಯವಾಗಿ ಕಂಡಿತು ಎಂದು ಮುಕ್ತ ಮನಸಿನ ಕೆಲವು ಅಭಿಪ್ರಾಯಗಳನ್ನು ಇಲ್ಲಿ ಹೇಳಿರುವುದು ಗಮನಿಸುವ ಅಂಶವಾಗಿದೆ.

**ಒಂದು ಜನ ಅರಣ್ಯ ಸಂಗತಿ:** ೨೯–೦೧–೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ಒಂದು ಜನ ಅರಣ್ಯ ಸಂಗತಿ" ಎಂಬ ಲೇಖನದಲ್ಲಿ ನಂಜುಂಡರಾವ್ ಅವರು ಆರಂಭಿಸಿದ ಚಿತ್ರಸಂತೆ ಎಂಬ ಕಾರ್ಯಕ್ರಮವಾಗಿದ್ದು. ಇಲ್ಲಿ ಕಲಾಕೃತಿಗಳು, ಕರಕುಶಲ ಕಲೆಗಳು ವಿವಿಧ ರೀತಿಯ ವಸ್ತು ಪ್ರದರ್ಶನ ಮತ್ತು ಮಾರಾಟವೂ ನಡೆಯುತ್ತಿದ್ದು ಒಂದು ಸಂತೆಯಂತೆ ಗೋಚರಿಸುವ ಉತ್ಸವವೆಂದು ನಾವು ಹೇಳಬಹುದು. ಅಂತ ಒಂದು ಜನಾಕರ್ಷಣೀಯ ಕಾರ್ಯಕ್ರಮದ ಬಗ್ಗೆ ಅಲ್ಲಿನ ವಾತಾವರಣದ ಬಗ್ಗೆ ಕಲಾವಿದ, ಸಹೃದಯರ ಮನಸ್ಸುಗಳು ಈ ಎಲ್ಲದರ ಬಗ್ಗೆ ಸೂಕ್ಷ್ಮವಾಗಿ ಗಮನಿಸಿ ಇಲ್ಲಿ ವಿಮರ್ಶಕರು ನಮಗೆ ಕಟ್ಟಿಕೊಟ್ಟಿದ್ದಾರೆ.

ಪ್ರತಿವರ್ಷದಂತೆ ೨೦೧೨ ರಂದು ನಡೆದ ಈ ಕಾರ್ಯಕ್ರಮದಲ್ಲಿ ಅಥವಾ ಉತ್ಸವ ಅಥವಾ ಸಂತೆಯಲ್ಲಿ ಸಿಲಿಕಾನ್ ಸಂಸ್ಕೃತಿಯ ಅಡ್ಡೆಗಳ ಹಾರಾಟ, ಕಳಪೆಯ, ಕುಶಲ ಕಲೆಗಳ ಮೂಲದ ವಸ್ತುಗಳೇ ವ್ಯಾಪಾರ ನಡೆಸುವ ಹೆಚ್ಚಿನ ಗಲಾಟೆಯಲ್ಲಿ ಕಲಾವಿದ್ಯಾರ್ಥಿಗಳು, ತಮ್ಮ ಬರಹ ಸೆಮಿನಾರ್‌ಗಳ ಮಾತುಗಳಲ್ಲಿ ಕಡೆಗಣ್ಣಿನಿಂದಲೂ ನೋಡದ ಕಲೆ, ಕಲಾವಿದರುಗಳ

ಹಾಜರಿ, ಕೆಲವರು ಸಂತೆಯಲ್ಲಿ ಕಳೆದುಹೋಗಲು ಇಷ್ಟ ಪಡುವವರಾದರೆ, ಒಂದೆರಡು ಬಾರಿ ಕುತೂಹಲ ತಣಿಸಿಕೊಂಡವರು ಇರುವರನ್ನು ಇಲ್ಲಿ ಕಾಣಬಹುದೆಂದು ಹೇಳುತ್ತಾ, ಬಹುತೇಕರು, ರಾಜ ರವಿವರ್ಮನ ಚಿತ್ರಗಳನ್ನು ಮನಸ್ಸಿನ ತುಂಬ ತುಂಬಿಕೊಂಡವರೇ, ನಕಲೀ ಚಿತ್ರಗಳ ಹಾವಳಿ ಒಟ್ಟಾರೆ ಚಿತ್ರಸಂತೆಯಲ್ಲಿ ಕಾಣಿಸಿಕೊಳ್ಳುವ ಸಾವಿರಾರು ಕಲಾಕೃತಿಗಳು, ಮಾರಾಟದ ಸರಕು–ಸಂಸ್ಕೃತಿಗೆ ಅಡಿಯಾಳಾಗಿದೆ. ಕೆಲವರು ಮಾರಾಟ ಉದ್ದೇಶವನ್ನು ಸಾಧಿಸಲು ಉದ್ಯುಕ್ತವಾಗಿ ಬಂದಿರುವಂತವರು 'ಚಿತ್ರಸಂತೆ' ಎಂದು ಹೆಸರೇ ಸೂಚಿಸುವಂತ ಅಲ್ಲಿ ನೆರೆದ ಕಲಾವಿದರು, ಕಲಾಕೃತಿಗಳ ಒಂದು ಸಾಗರವು, ಅಭಿವ್ಯಕ್ತಿ ಪ್ರಕ್ರಿಯೆ ಅಂಶವಾಗುವ ವೀಡಿಯೋ ಇನ್‌ಸ್ಟಾಲೇಷನ್ ಗಳಂತೆಯೂ ನಾವು ಪರಿಭಾವಿಸಿಕೊಳ್ಳಬಹುದೆಂದು ವಿಮರ್ಶಕರು ತುಂಬಾ ಸೂಕ್ಷ್ಮ ರೀತಿಯಲ್ಲಿ ಗ್ರಹಿಸಿಕೊಂಡು ನಮ್ಮ ಮುಂದಿಟ್ಟಿದ್ದಾರೆ.

**ಹಿಂಸೆ ಕ್ರೌರ್ಯಗಳ ನಡುವೆ ಕಂಡ ಅನುಕಂಪ:** ದಿನಾಂಕ ೩೦–೧೨–೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಹಿಂಸೆ ಕ್ರೌರ್ಯಗಳ ನಡುವೆ ಕಂಡ ಅನುಕಂಪ' ಎಂಬ ಲೇಖನದಲ್ಲಿ ಚಲನಚಿತ್ರ ಇಂದು ತನ್ನ ಪ್ರಭಾವವನ್ನು ಹರಡಿಕೊಂಡಿರುವ ಕುರಿತು ಇಲ್ಲಿ ಚರ್ಚಿಸಲಾಗಿದೆ.

ನಮ್ಮ ಸಿನಿಮಾರಂಗಕ್ಕೆ ನೂರರ ಸಂಭ್ರಮದ ಆಚರಣೆಯು ಬೆಂಗಳೂರಿನಲ್ಲಿ ಕರ್ನಾಟಕ ಸರ್ಕಾರದ ಆಶ್ರಯದ, ಕರ್ನಾಟಕ ಚಲನಚಿತ್ರ ಅಕಾಡೆಮಿ ಯೋಜನೆಯಡಿ 'ಬೆಂಗಳೂರು ಅಂತರಾಷ್ಟ್ರೀಯ ಸಿನಿಮೋತ್ಸವ–೫' ನಡೆಯಿತು.

ಸಿನಿಮಾ ಎಂದರೆ ರಾಜ್‌ಕಪೂರ್, ಅಮಿತಾಬ್ ಬಚ್ಚನ್, ಕನ್ನಡದ ರಾಜಕುಮಾರ್, ಎಂ.ಜಿ.ಆರ್. ಮುಮ್ಮಟ್ಟಿ, ರಜನಿಕಾಂತ್ ಎನ್ನುವಂತಹ ಸಂದರ್ಭಗಳನ್ನು ಮೀರಿ, ಇತಿಹಾಸ, ಪುರಾಣಗಳೇ ಅಲ್ಲದೆ ಸಾಮಾಜಿಕ, ರಾಜಕೀಯ ಮುಖಗಳನ್ನು ಅರಗಿಸಿಕೊಂಡಿವೆ. ಇಂದು 'ಸಾಮಾಜಿಕ' ಅತ್ಯಾಚಾರಿಗಳಿಗೆ ಸಿನಿಮಾಗಳೇ ಹೊಣೆ ಎಂದು ಸಿನಿಮಾ ಇತಿಹಾಸಕಾರರೊಬ್ಬರು ಹೇಳಿರುವುದು ಇಲ್ಲಿ ನೆನಪಿಸುತ್ತಾರೆ. ಹಿಂಸೆ, ಸೇಡಿನ ವೈಭವೀಕರಣದ ಒಂದು ರೀತಿಯಾದರೆ ವೈರುಧ್ಯಮವಾಗಿ ಮಾನವೀಯ ಅನುಭವಗಳ ಮೂಲದ ಅಭಿವ್ಯಕ್ತಿ ಹೊಳಹುಗಳ ಚಿತ್ರಗಳೂ ಸೃಷ್ಟಿಯಾಗುತ್ತಲೇ ಇವೆ.

ಕನ್ನಡದ 'ಸಂಗೊಳ್ಳಿ ರಾಯಣ್ಣ' ಚಿತ್ರಕ್ಕೆ ಪ್ರೇಕ್ಷಕರು ಆಸಕ್ತಿತೋರಿದ್ದು ಗಮನಾರ್ಹ ಅಸಾಮಾನ್ಯ ಬುದ್ಧಿಮತ್ತೆಯ' ಸರ್ಟಿಫೈಡ್ ಕಾಪಿ(ಫ್ರಾನ್ಸ್) ಅಬ್ಬಾಸ್ ರೆಯರೋ ಸ್ವಮಿ ನಿರ್ದೇಶನದಲ್ಲಿ ಲೇಖಕನಾಗಿ ವಿಲಿಯಮ್ ಶಿಮೆಲ್ ಹಾಗೂ ಓದುಗಳಾಗಿ ಜೂಲಿಎಟ್ಟೆ ಬಿನೋಚ್ ಕಾಣಿಸಿಕೊಂಡಿರುವ ರೀತಿಯಲ್ಲಿ ಅಸಾಮಾನ್ಯ ಗಾಂಭೀರ್ಯವನ್ನು ಸೂಚಿಸುವಂತಿದೆ. ಸಾಹಿತ್ಯ ದೃಶ್ಯಕತೆಗಳ ವಿಶಿಷ್ಟ ಸಾಂಗತ್ಯ 'ಸುಂದರ ಸಂಹಿತೆ'ಯಾಗಿ ಮೂಡಿ ಬಂದಿತು ಎನ್ನಲಾಗಿದೆ. ಪ್ರದರ್ಶನದಲ್ಲಿ ಜೂಲಿ ಎಟ್ಟೆ ಬಿನೋಚ್‌ರವರು ಆಯ್ದ ಚಿತ್ರಗಳ ಪ್ರದರ್ಶನವೂ ಇದ್ದಿತ್ತು. ಕುತೂಹಲವುಂಟು ಮಾಡಿದವು.

ಇಂತಹ ಚಿತ್ರಗಳಿಗೆ ವರ್ಷವಿಡೀ ಪ್ರದರ್ಶನ ಸಾಧ್ಯತೆ ಇರುವ ವ್ಯವಸ್ಥೆ ಆಗಬೇಕು ಎಂಬ ಭಾವನೆಗೆ ಪ್ರಸ್ತುತ ಸಿನಿಮೋತ್ಸವ ಕಾರಣವಾಗಿದೆ ಎಂದು ಅಭಿವ್ಯಕ್ತಪಡಿಸಿದ್ದಾರೆ.

**ತಾಂತ್ರಿಕತೆ ಮತ್ತು ಮಾಂತ್ರಿಕ ನಿರ್ಮಿತಿಯ ಜೀವನ ಸೌಂದರ್ಯ:** ೦೮-೦೧-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ತಾಂತ್ರಿಕತೆ ಮತ್ತು ಮಾಂತ್ರಿಕ ನಿರ್ಮಿತಿಯ ಜೀವನ ಸೌಂದರ್ಯ" ಎಂಬ ಲೇಖನದಲ್ಲಿ ಸಮಕಾಲೀನ ಸಂದರ್ಭದಲ್ಲಿ ಸಿನಿಮಾ ಮಾಧ್ಯಮಗಳನ್ನು ಕಲಾವಿದನು ತನ್ನ ಅಭಿವ್ಯಕ್ತಿಗೆ ಒಂದು ವಸ್ತುವಾಗಿ ಬಳಸಿಕೊಂಡು ರಚನೆ ಮಾಡುತ್ತಿದ್ದು, ಹಾಗೆ ಸಿನಿಮಾ ಕ್ಷೇತ್ರವು ಕಲಾವಿದರನ್ನು ಬಳಸಿಕೊಂಡಿರುವ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ. ಅಲ್ಲದೆ ನಮ್ಮ ಸಮಕಾಲೀನ ಸಂದರ್ಭದಲ್ಲಿ ಸಿನಿಮಾ ಕ್ಷೇತ್ರದಲ್ಲಿ ಕೇವಲ ಹಣಗಳಕೆಯೇ ಅದರ ಉದ್ದೇಶವೆಂಬಂತೆ ನಡೆದು ಬಂದಿರುವಂತಿದೆ. ಈ ನಡುವೆಯೂ ಜಾಗತೀಕರಣದ ಅಬ್ಬರ, ಹಣದ ಆಟಗಳ ನಡುವೆ ಸ್ಥಳೀಯ ಸಂವೇದನಾ ಶೀಲತೆಗೆ ಸಂಸ್ಕೃತಿಯ ಬೇರುಗಳಿಗೆ ಕೊಡಲಿ ಪೆಟ್ಟು ಬಲವಾಗಿ ಬೀಳುವುದೆಂಬ ಆತಂಕ ಇಲ್ಲವಾದಂತೆ ಕಾಣುತ್ತಿದೆ. ಹಾಗಾಗಿಯೇ ಇಡೀ ವಿಶ್ವದಲ್ಲಿ ಸ್ಥಳೀಯ ಬದುಕಿನ ಸೌಂದರ್ಯದ ಲೋಕ ವೈವಿಧ್ಯಮಯವಾಗಿ ಸಿನಿಮಾ ಮಾಧ್ಯಮದಲ್ಲಿ ಅಭಿವ್ಯಕ್ತಿಗೊಂಡಿದೆ. ಜೊತೆಗೆ ಕೆಲವು ಸಿನಿಮಾಗಳು ವಿಶಿಷ್ಟ ಸೌಂದರ್ಯವನ್ನೇ ಅಲ್ಲದೆ ಬದುಕಿನ ಪಾರಮ್ಯವನ್ನೂ ಸಾರುವಂತಿದ್ದುವು. ಉದಯ ಶಂಕರ 'ಕಲ್ಪನಾ' ಕನ್ನಡದ ಸಂಧ್ಯಾರಾಗ, ಈಜಿಪ್ಟ್ '೬೭೮', 'ಕನಸೆಂಬ ಕುದುರೆಯನ್ನೇರಿ' ಮೊದಲಾದ ಸಿನಿಮಾಗಳು ತಮ್ಮೊಳಗೆ ಅರಗಿಸಿಕೊಂಡು ವಿಶಿಷ್ಟ ದೃಶ್ಯಲೋಕವೇ ಅಲ್ಲದೆ ಹೊಸ ಹೊಸ ಅನುಭವ, ಚಿತ್ರರೂಪದ ವಿಶಿಷ್ಟ ಸೌಂದರ್ಯದಿಂದಲೂ ಕೂಡಿದ್ದು ಉತ್ಸವದ ಬಹುತೇಕ ಚಿತ್ರಗಳು ಎಲ್ಲರಿಗೂ 'ನೋಡವ' ಆಕರ್ಷಣೆಯನ್ನು ಉಂಟು ಮಾಡುವಂತಿವೆಯೆಂದು ಸಿನಿಲೋಕದ ಬಗ್ಗೆ ಸಮಕಾಲೀನ ಸಂದರ್ಭದ ಸ್ಥಿತಿಯ ರೂಪವನ್ನು ಇಲ್ಲಿ ಯಥಾ ರೀತಿಯಲ್ಲಿ ಹೇಳಲಿಚ್ಚಿಸಿದ್ದಾರೆ.

## ೮.೨. ಕಲಾಪ್ರದರ್ಶನ ಕೇಂದ್ರಿತ ಬರಹಗಳು

೮.೨.೧. ಏಕವ್ಯಕ್ತಿ ಕಲಾ ಪ್ರದರ್ಶನ

೮.೨.೨. ಸಮೂಹ ಕಲಾ ಪ್ರದರ್ಶನ

### ೮.೨.೧. ಏಕವ್ಯಕ್ತಿ ಕಲಾ ಪ್ರದರ್ಶನ

**ಚೌಕಟ್ಟು ಮತ್ತು ಹೆಣ್ಣಿನ ಲೋಕ:** ೨೦೧೨ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ 'ಚೌಕಟ್ಟು ಮತ್ತು ಹೆಣ್ಣಿನ ಲೋಕ' ಎಂಬ ಲೇಖನದಲ್ಲಿ ವರ್ಣಚಿತ್ರಗಳಲ್ಲಿ ಇಂದು ಹೆಣ್ಣಿನ ರೂಪಗಳ ಗ್ರಹಿಕೆಗಳನ್ನು ಬಿಂಬಿಸುವಂತ ಕಲಾಕೃತಿಗಳ ಕುರಿತಾಗಿ ವಿಮರ್ಶಕರು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ.

ಅಕ್ಟೋಬರ್ ೧೭ ರಿಂದ ೨೧, ೨೦೧೨ರವರೆಗೆ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನಲ್ಲಿ ಬಿಜಾಪುರದ ಮಲ್ಲಿಕಾರ್ಜುನ ಎಂ.ಕಣ್ಣೂರು ಅಭಿವ್ಯಕ್ತಿಸಿರುವ, ರೇಖಾಚಿತ್ರ, ವರ್ಣಚಿತ್ರ ಕೃತಿಗಳು ಪ್ರದರ್ಶನಗೊಂಡಿದ್ದವು. ಇವು ಮಿಶ್ರಮಾಧ್ಯಮದ ಸಾಂಕೇತಿಕ ರೂಪಕಗಳಾಗಿವೆ ಎನ್ನಲಾಗಿದ್ದು ಸುತ್ತಲಿನ ಬದುಕಿನ ದೃಶ್ಯಲೋಕದ ಗ್ರಹಿಕೆಗಳು ಸುಂದರ ಲೋಕವನ್ನೇ ಹಲವು ಕೃತಿಗಳಲ್ಲಿ ಸೃಷ್ಟಿ ಮಾಡಲಾಗಿದೆ.

ಮಲ್ಲಿಕಾರ್ಜುನರ ಹೆಣ್ಣುಗಳ ರೇಖಾಚಿತ್ರಗಳಲ್ಲಿ, ಜಾನಪದೀಯ, ಸತ್ವಗಳು, ಕುಟುಂಬದ ಒಳನೋಟಗಳನ್ನೂ, ಮನೆಯ ಹೊರಗಿನ ಹಲವು ಗ್ರಹಿಕೆಗಳನ್ನು ಬಿಂಬಿಸಿದ್ದಾರೆ. ಅಲ್ಲದೆ ಕ್ರೌರ್ಯವು ಅಮೂರ್ತ ರೂಪದಂತಿವೆ. 'ತಾಯಿ ಮತ್ತು ಮಗು' ಚಿತ್ರಕೃತಿಯೊಂದು ಕೌಶಲತೆ, ಮೈವಳಿಕೆಗಳ ಆಟದ ನಡುವೆ ರೂಪುಗೊಂಡಿದ್ದು ಒಟ್ಟಾರೆ ಚೌಕಟ್ಟು ಮೀರಿದ ಹೆಣ್ಣಿನ ಲೋಕ ಸುಂದರ ಎಂಬಂತಿವೆ ಈ ಎಲ್ಲ ಕಲಾಕೃತಿಗಳು ಎಂದು ಇಲ್ಲಿ ಹೇಳಲಾಗಿದೆ.

**ಶಬ್ದದೊಳಗಣ ನಿಶ್ಯಬ್ದ:** ದಿನಾಂಕ ೨೭-೦೧-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಶಬ್ದದೊಳಗಣ ನಿಶ್ಯಬ್ದ" ಎಂಬ ಲೇಖನದಲ್ಲಿ ಅಶೋಕ್ ಯು. ರವರ ಕಲಾಕೃತಿಗಳಲ್ಲಿ ಅಭಿವ್ಯಕ್ತಿಗೊಂಡಿರುವ ಭೂದೃಶ್ಯಗಳ ಕುರಿತಂತೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಜಾಗತೀಕರಣದ ರಾಜಕಾರಣ ಅಬ್ಬರದ ಅಭಿವೃದ್ಧಿಯಲ್ಲಿ ಭೂಮಿ ಮೇಲಿನ ಸುಂದರ ದೃಶ್ಯಗಳನ್ನು ಮರುಭೂಮಿಯ ಓಯಾಸಿಸ್‌ನಂತೆ ಗಿಡ-ಮರಗಳನ್ನು ಕಡಿದು ವಿಕೃತ ಸೌಂದರ್ಯಗೊಳಿಸಿರುವುದನ್ನು ಗಹಿಸಿ ಅಶೋಕ್ ಯು.ರವರು ಇತ್ತೀಚಿನ ಭೂ ದೃಶ್ಯಗಳನ್ನು, ಅಭಿವ್ಯಕ್ತಿಯನ್ನು ಹೊಂದಿರುವ ಛಾಯಾಕಲಾಕೃತಿಗಳು ಬೆಂಗಳೂರಿನ ಕೆ.ಜೆ.ಎಲ್.ಆರ್ಟ್‌ಗ್ಯಾಲರಿಯಲ್ಲಿ ಪ್ರದರ್ಶಿಸಲ್ಪಟ್ಟಿದ್ದವು.

ಅಶೋಕ್‌ರವರ ಕೆಲವು ಕೃತಿಗಳಲ್ಲಿ ಬೀದಿ, ಬೀದಿ ಬೀದಿ ವಾಸ್ತುಶಿಲ್ಪಿಯ ಮೌನದ ನಿರಚನೆಯ ನೋಟಗಳು, ಅಂತ್ಯಕಾಣದ ಆವರಣಗಳು, ಆ ಅನುಭವಕ್ಕೆ ಬರುತ್ತವೆ. ಸಾಂಸ್ಥಿಕ ತತ್ವಾನ್ವೇಷಣೆಗಳು ಗ್ಯಾಲರಿಗಳೊಳಗೆ ನಡೆಯುವ ಎಲ್ಲವನ್ನೂ ಒಪ್ಪಬಹುದಾದರೂ ಎಲ್ಲವನ್ನೂ ಗ್ಯಾಲರಿಯ ಒಳಗೇ ನೋಡಿ ಅನುಭವಿಸಬೇಕೆಂಬ ಅಗತ್ಯ ಇಲ್ಲ. ಈ ಅಂಶಕ್ಕೆ ಪೂರಕವಾಗಿ ಅಶೋಕ ಯು.ರವರ ಕೃತಿಗಳು ಉದಾಹರಿಸಬಹುದು ಎನ್ನುತ್ತಾರೆ. ಪ್ರಕೃತಿಯಲ್ಲಿ ನಾವು ನೋಡುವ ಗಿಡಮರಗಳ ಎಲೆಗಳೂ ಹಸಿರೇ ಆದರೂ ಎಲ್ಲ ಮರ, ಗಿಡಗಳ ಹಸಿರು ಒಂದೇ ವರ್ಣಛಾಯೆಯಂತಿಲ್ಲ. ಹಾಗೆಯೇ ಬೀದಿಯಲ್ಲಿ ಕಾಣುವ ಎಲ್ಲ ಕಪ್ಪು ಬಣ್ಣವೂ ಹಲವು ಬಣ್ಣಗಳ ವರ್ಣಪಾಕ, ಅಶೋಕರ ಕೃತಿಗಳಲ್ಲಿ ಇಂದಿನ ವಿಕ್ಷಿಪ್ತ ಸಂದರ್ಭದಲ್ಲಿ ಈ ಭೂದೃಶ್ಯಗಳು, ನಗರ ದೃಶ್ಯಗಳು ಕಾಣಿಸಿಕೊಂಡಿರುವುದು ಗಮನಿಸುವಂತಿದೆ ಎಂಬ ಅಭಿಪ್ರಾಯವನ್ನು ಸರಳ ಮಾತುಗಳಲ್ಲಿ ನಮ್ಮ ಮುಂದೆ ಕಟ್ಟಿಕೊಟ್ಟಿದ್ದಾರೆ.

**ಶಬ್ದದ ಸೂಕ್ಷ್ಮ ಗ್ರಹಿಕೆಗಳ ದೃಶ್ಯ ಧ್ಯಾನ:** ದಿನಾಂಕ ೨೪-೦೨-೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಶಬ್ದದ ಸೂಕ್ಷ್ಮ ಗ್ರಹಿಕೆಗಳ ದೃಶ್ಯ ಧ್ಯಾನ" ಎಂಬ ಲೇಖನದಲ್ಲಿ ಶಬ್ದ ಮತ್ತು ಮೌನದಂತ ಮಿಶ್ರ ಮಾಧ್ಯಮದ ಕೃತಿಗಳ ಕುರಿತು ವಿಮರ್ಶಕರು ಇಲ್ಲಿ ಪ್ರಸ್ತಾಪಪಡಿಸಿದ್ದಾರೆ.

ಹುಟ್ಟಿನಿಂದಲೇ ಬದುಕು ಶಬ್ದದ ಕೇಳುವಿಕೆಯಿಂದ ಆರಂಭಗೊಳ್ಳುತ್ತದೆ. ಹೀಗಾಗಿಯೇ ಇತಿಹಾಸ ಪೂರ್ವಕಾಲದ ಶಿಲಾಶ್ರಯ, ಗುಹಾಲಯ, ಬದುಕಿನ ಸಂದರ್ಭದಲ್ಲಿಯೇ 'ಶಬ್ದ' ಮತ್ತು 'ಮೌನ'ಗಳ ಬಳಕೆ ಆರಂಭಗೊಂಡಿವೆ. ನಂತರದಲ್ಲಿ ಹಲವು ಬೆಳವಣಿಗೆಗಳಲ್ಲಿ ಶಬ್ದದ, ಮೌನದ ಸ್ಥಾನವನ್ನು ಭಾಷೆಯು ಹೆಚ್ಚು ಆಕ್ರಮಿಸಿಕೊಂಡು ಹಲವು ಅವತಾರಗಳಲ್ಲಿ ತನ್ನನ್ನು ಸಂರಕ್ಷಿಸಿಕೊಂಡು ಉಳಿದಿದೆ. ಗುಲ್ಬರ್ಗದ ಅಬ್ದುಲ್ ಭಾಷಾ ಅವರ ಕೃತಿಗಳಲ್ಲಿ ಈ ರೀತಿಯ ವರ್ಣಚಿತ್ರಗಳೇ ಅಲ್ಲದೇ ಮಿಶ್ರಮಾಧ್ಯಮದ ಹಲವು ಕೃತಿಗಳು ಮಂಗಳೂರಿನ 'ಪ್ರೀಡಿವ್' ಆರ್ಟ್ ಗ್ಯಾಲರಿಯಲ್ಲಿ ಜನವರಿ ೩೦ ರಿಂದ ಫೆಬ್ರವರಿ ೩, ೧೦೧೩ರವರೆಗೆ ಪ್ರದರ್ಶನಗೊಂಡಿದ್ದವು.

ಪ್ರದರ್ಶನದಲ್ಲಿ 'ಸೌಂಡ್ ಆಫ್ ಸೊಸೈಟಿ' ಶೀರ್ಷಿಕೆಯಡಿಯಲ್ಲಿ ಮೂಡಿಬಂದಿದ್ದ ಹಲವು ಅಭಿವ್ಯಕ್ತಿಗಳಿದ್ದವು. ಪರಂಪರೆ, ಸಮಕಾಲೀನಗಳೆರಡನ್ನೂ ಅರಗಿಸಿಕೊಂಡ ರೂಪ, ವಾಸ್ತುಶಿಲ್ಪ, ದೃಶ್ಯಲೋಕಗಳ ನಡುವೆ ಸಾಂಕೇತಿಕ ಘಟ್ಟಿ ಶಬ್ದ ಪ್ರಸಾರದ ಪರಿಕರಗಳು ಬಳಸಿಕೊಂಡಿದ್ದು ಅಧ್ಯಯನ ಮಾಡಿ ಗ್ರಹಿಸಲಾಗಿದ್ದವು ಎಂದು ಹೇಳಲಾಗಿದೆ. ಶಬ್ದದ ಆಡಂಬರದ ನಡುವೆಯೇ ದೈವೀಕ ಅನುಭವಕ್ಕೆ ಮೌನದ ಅಗತ್ಯವೆಂಬಂತೆ, ಕೆಲವು ಕೃತಿಗಳಲ್ಲಿ ಅನುಭವಕ್ಕೆ ಬರುವಂತಿದ್ದವು.

ಒಟ್ಟಾರೆ ಈ ಕಲಾವಿದರ ಅಭಿವ್ಯಕ್ತಿಗಳಲ್ಲಿ ಕುಶಲತೆಯ ಜತೆಗೇ ಸೂಕ್ಷ್ಮ ಸಂವೇದನಾಶೀಲ ಅನುಭವಗಳ ದೃಶ್ಯದ್ಯನದ ಆರಂಭದಂತೆ ಕಲಾಕೃತಿಗಳಾಗಿದ್ದವು ಎಂದು ಅಭಿಪ್ರಾಯಿಸಿದ್ದಾರೆ.

**ತಣ್ಣನೆಯ ಆಹ್ಲಾದಕರ ಅಭಿವ್ಯಕ್ತಿಗಳು:** ದಿನಾಂಕ ೦೧-೧೨-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ತಣ್ಣನೆಯ ಆಹ್ಲಾದಕರ ಅಭಿವ್ಯಕ್ತಿಗಳು' ಎಂಬ ಲೇಖನದಲ್ಲಿ ದೃಶ್ಯಕಲಾ ಇತಿಹಾಸದಲ್ಲಿ ಇತ್ತೀಚೆಗೆ ಕಲಾಕೃತಿಗಳಿಗೆ ಮಾಧ್ಯಮವಾಗಬಲ್ಲ ವಸ್ತುಗಳು ಬದಲಾಗುತ್ತಿದ್ದು ಅವುಗಳ ರೂಪಾಂತರಗಳ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಸಾಹಿತ್ಯ, ದೃಶ್ಯಕಲೆ, ಚಿತ್ರ, ಶಿಲ್ಪ, ಸಿನಿಮಾ, ವಾಸ್ತುಶಿಲ್ಪಗಳಲ್ಲೂ ಸಿದ್ಧ ಮಾದರಿಗಳನ್ನು ಮೀರಿದ ಅಭಿವ್ಯಕ್ತಿಗಳು ಕಾಣಿಸಿಕೊಳ್ಳುತ್ತಿವೆ. ಹೀಗೆ ಹೊಸ ಅನುಭವ, ಅನನ್ಯ ಸಾಧ್ಯತೆಗಳನ್ನು ಅನುಭವಿಸಬಲ್ಲ ಸಾಮರ್ಥ್ಯದ 'ನೋಡುವ ಕಣ್ಣು' ಇಲ್ಲಿ ಪಾತ್ರವಹಿಸದಿದ್ದಲ್ಲಿ ಪರಿಣಾಮ ವಿವಾದಾಸ್ಪದ.

ಇತ್ತೀಚೆಗೆ ಕಲಾವಿದನು ತನ್ನ ಕೃತಿಗಳಲ್ಲಿ ಕ್ಯಾಮರಾ ಮಾಧ್ಯಮದಿಂದ ಕ್ಲಿಕ್ಕಿಸಿದ ದೃಶ್ಯ ರೂಪವೊಂದು ಬಳಸಿಕೊಳ್ಳುತ್ತಿರುವುದು. ವಿಶೇಷಣೀಯ ಅಂಶಗಳಲ್ಲಿ ಒಂದಾಗಿದೆ. ನವೆಂಬರ್

೨೫ ರಿಂದ ೩೦, ೨೦೧೩ರವರೆಗೆ ಬೆಂಗಳೂರಿನ ಚಿತ್ರಕಲಾ ಪರಿಷತ್ತಿನ ಗ್ಯಾಲರಿ ೧ರಲ್ಲಿ 'ಎಕ್ಸಾಂಪಲ್ಸ್' ಶೀರ್ಷಿಕೆಯಡಿಯ ಚಿತ್ರ, ರೇಖಾಚಿತ್ರ, ಛಾಯಾಚಿತ್ರಗಳು ಉದಾಹರಣೆಗಳಂತೆಯೇ ಉತ್ತಮವಾಗಿ ಪ್ರದರ್ಶಿಸಲ್ಪಟ್ಟಿದ್ದವು ಎಂಬ ಅಭಿಪ್ರಾಯವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

**ರಂಗಾಯಣದಲ್ಲಿ ರವಿವರ್ಮನ ಹೊಳಹುಗಳು:** ದಿನಾಂಕ ೨೦-೧೦-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ರಂಗಾಯಣದಲ್ಲಿ ರವಿವರ್ಮನ ಹೊಳಹುಗಳು" ಎಂಬ ಲೇಖನದಲ್ಲಿ ಕೆ.ವಿ.ರಾಧಾಕೃಷ್ಣ ಶೆಟ್ಟಿಯವರ ಸಂಗ್ರಹದಲ್ಲಿರುವ ಮೈಸೂರು ಶೈಲಿಯ ಚಿತ್ರಗಳು ಮತ್ತು ರವಿವರ್ಮನು ರಚಿಸಿದ ಕಲಾಕೃತಿಗಳ ಮರುಮುದ್ರಿತ ಪ್ರಿಂಟ್‌ಗಳ ಬಗ್ಗೆ ವಿಮರ್ಶಕರು ಇಲ್ಲಿ ಚರ್ಚಿಸಿದ್ದಾರೆ.

ದಸರಾ ಸಂದರ್ಭದಲ್ಲಿ ಮೈಸೂರಿನ ರಂಗಾಯಣ ಲಂಕೇಶ್ ಗ್ಯಾಲರಿಯಲ್ಲಿ ನಡೆದ ರವಿವರ್ಮನ ನೆನಪು ಕಾಡುವಂತೆ, ಮೈಸೂರು ಪರಂಪರೆಯ ಮೆಲುಕು ಹಾಕುವಂತಹ ಕೆ.ಪಿ.ರಾಧಾಕೃಷ್ಣ ಸೆಟ್ಟಿಯವರ ಸಂಗ್ರಹದಲ್ಲಿರುವ ಕೃತಿಗಳನ್ನು ಪ್ರದರ್ಶಿಸಲಾಗಿತ್ತು. ಶ್ರೀನಿವಾಸ ಕಲ್ಯಾಣ, ಮಹಾವಿಷ್ಣು, ವಿಶ್ವರೂಪ, ಶ್ರೀಚಕ್ರ, ರಾಮಾಯಣ ದರ್ಶನ ಮೊದಲಾದ ಕೃತಿಗಳು ನೋಡುಗರಿಗೆ ಮೈಸೂರು ಚಿತ್ರಶೈಲಿಯ ಕರಕುಶಲತೆಯನ್ನು ಪರಿಚಯಿಸುವಂತಿದ್ದವು. ಪ್ರದರ್ಶನದಲ್ಲಿ ಕೌತುಕದಿಂದ ನೋಡಿಸಿಕೊಂಡ ರವಿವರ್ಮನ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಹಲವು ವರ್ಷಗಳ ಅಂತರದಲ್ಲಿ ಮುದ್ರಣಗೊಂಡ ಪ್ರಿಂಟ್‌ಗಳು. ಇವುಗಳಲ್ಲಿ ಬಹುಮುಖ್ಯವಾದುದು. ಸಿದ್ದಲಿಂಗಸ್ವಾಮಿಯವರ 'ಶ್ರೀ ಕೈಲಾಸ ಶಂಕರ'(೧೯೨೮) ಅಲ್ಲದೇ ರವಿವರ್ಮನೇ ಚಿತ್ರಿಸಿದ ಗಣಪತಿ, ಸರಸ್ವತಿ, ಲಕ್ಷ್ಮಿ ಮೊದಲಾದ ಪ್ರಿಂಟ್‌ಗಳೂ ಇದ್ದವೆನ್ನುತ್ತಾರೆ.

ಮದರಾಸಿನ ರಾಮಾನುಜಂ ಚಿತ್ರಿಸಿದ ಕೃತಿಗಳ ಪ್ರಿಂಟ್, ಬ್ರಜ್ ಬಾಸಿಯವರಿಂದ ಚಿತ್ರಿಸಿಕೊಂಡ ಮಧುರಾ ಸನ್ಸ್‌ರವರ ಪ್ರಿಂಟ್‌ಗಳು ಪ್ರದರ್ಶಿಸಲ್ಪಟ್ಟದ್ದು. ಪ್ರದರ್ಶನದ ವಿಶೇಷಗಳಲ್ಲಿ ಒಂದು ಎಂಬಂತೆ ರವಿವರ್ಮನ ಪ್ರೆಸ್ಸ್‌ನಲ್ಲಿಯೇ ಮುದ್ರಣಗೊಂಡಿದ್ದ ಸರಸ್ವತಿ, ಲಕ್ಷ್ಮಿಯರಿದ್ದ ಪ್ರಿಂಟ್‌ಗೊಳ್ಳಗಾಲದ ಹೆಗ್ಗೇರೆ ಜಮಿಸ್ಟಾರ್ ವಿ.ಆರ್.ಶ್ರೀನಿವಾಸಯ್ಯಂಗಾರ್‌ರವರಿಂದ 'ವಿತ್ ದಿ ಬೆಸ್ಟ್ ಕಾಂಪ್ಲಿಮೆಂಟ್ಸ್ ಆಫ್' ಎಂಬ ಕನ್ನಡ, ಇಂಗ್ಲೀಷ್ ಪದಗಳನ್ನು ಅಲಂಕರಿಸಿಕೊಂಡಿತ್ತು. ಈ ಎಲ್ಲ ಸಂತೋಷದ ನಡುವೆ ಬೇಸರದ ಸಂಗತಿ ಎಂದರೆ ರವಿವರ್ಮನ ಪ್ರಿಂಟ್‌ಗಳ ಛಾಯಚಿತ್ರಗಳೇ ಹೆಚ್ಚಾಗಿ ಕಾಣಿಸಿಕೊಂಡಿದ್ದದ್ದು.

ಒಟ್ಟಾರೆ ರಂಗಾಯಣ ಆಶ್ರಯದ ಈ ಪ್ರದರ್ಶನ ಕಾಣೆಯಾಗುತ್ತಿರುವ ನೂರಾರು ಪ್ರಿಂಟ್‌ಗಳನ್ನು, ರವಿವರ್ಮನ ಪ್ರೆಸ್ಸೇ ಅಲ್ಲದೆ ಇನ್ನಿತರ ಪ್ರೆಸ್‌ಗಳ ಪ್ರಿಂಟ್‌ಗಳನ್ನು ನಕಲಾದರೂ ಸರಿ ಪ್ರದರ್ಶಿಸಿದ್ದು ಸ್ವಾಗತಾರ್ಹ. ಅಳಿವಿನ ಅಂಚಿನಲ್ಲಿರುವ ಓಲಿಯೋಗ್ರಾಫ್ ಪ್ರಕಾರದ ಪ್ರಿಂಟ್‌ಗಳ ಈ ಪ್ರದರ್ಶನ ದೃಶ್ಯಕಲೆಯ ಇತಿಹಾಸದ ದೃಷ್ಟಿಯಿಂದ ಗಣನೀಯ ಎಂದು ಪ್ರದರ್ಶನದ ಬಗ್ಗೆ ಪ್ರಶಂಸಿಸಿದ್ದಾರೆ.

### ೮.೨.೨. ಸಮೂಹ ಕಲಾಪ್ರದರ್ಶನ

**ಸಮಕಾಲೀನ ಶಿಲ್ಪಗಳ ಕೆಲವು ನೋಟಗಳು**: ೨೦೦೮ ರಲ್ಲಿ ಕನ್ನಡ ಪ್ರಭ ಪತ್ರಿಕೆಯಲ್ಲಿ ಪ್ರಕಟವಾದ "ಸಮಕಾಲೀನ ಶಿಲ್ಪಗಳ ಕೆಲವು ನೋಟಗಳು" ಎಂಬ ಲೇಖನದಲ್ಲಿ ಸಮಕಾಲೀನ ಶಿಲ್ಪಿಗಳಾದ ಉಲ್ಲಾಸ್ ಕರ್‌ಡೇ, ರಾಮಮೂರ್ತಿ, ವೆಂಕಟಾಚಲಪತಿ, ಆನಂದಬಾಬು, ಎಂ.ಅಂಬರಖಾನೆ, ಶಿವಾನಂದ ಬಂಟನೂರ್, ಜಗನ್ನಾಥ್ ಜಕ್ಕೇಪಲ್ಲಿ, ಕೆ.ರಾಘವೇಂದ್ರ, ಎಂ.ರಘುರಾಮ್, ಎಂ.ವಿಶ್ವನಾಥ್, ನಾಗಪ್ಪ, ಪ್ರಧಾನಿ, ಬಿ.ಎಂ.ರವಿಕುಮಾರ್, ರಾಜೇಶ್, ಡಿ.ದೇವಣಗಾನ್‌ರವರುಗಳ ಅಭಿವ್ಯಕ್ತಿಗಳನ್ನು ಸೂಕ್ಷ್ಮ ರೀತಿಯಲ್ಲಿ ಅಳತೆಯ ಪ್ರತಿಬಿಂಬಗಳ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತುತಪಡಿಸಿದ್ದಾರೆ.

ಭಾರತೀಯ ಸಂಪ್ರದಾಯ ದೃಶ್ಯಕಲೆಯ ಅಭಿವ್ಯಕ್ತಿಯಲ್ಲಿ ವೈಯುಕ್ತಿಕತೆ ಎಂಬುದೇ ಇಲ್ಲ. ಎಲ್ಲವೂ ಸಾಮಾಜಿಕ. ತಮ್ಮ ಒಳಗಿನ ಒತ್ತಡದ ಕಾರಣಕ್ಕಾಗಿ ಅಭಿವ್ಯಕ್ತಿಸಿ ಬಿಡುಗಡೆ ಹೊಂದುವ ಪರಿಪಾಠ ಹಿಂದೆ ಇರಲಿಲ್ಲ. ಈಗ ಅನಿವಾರ್ಯ. ಕನ್ನಡ ದೃಶ್ಯಕಲಾ ಇತಿಹಾಸದಲ್ಲಿ ಈ 'ಗುಂಪು' ಪ್ರದರ್ಶನಗಳಿಗೆ ತನ್ನದೇ ಆದ ಇತಿಹಾಸವಿದೆ. ಇಡೀ ರಾಜ್ಯದಲ್ಲಿ ೧೯೪೦-೬೫ರ ನಡುವೆ ಹಲವು ಐತಿಹಾಸಿಕ ಪ್ರಾಮುಖ್ಯತೆ ಗುಂಪು ಪ್ರದರ್ಶನಗಳು ನಡೆದಿವೆ. ಇದೇ ನಿಟ್ಟಿನಲ್ಲಿ ಬೆಂಗಳೂರಿನ Contemporary Scalpturs Forum ೨೦೦೮ ಶಿಲ್ಪಗಳ ಪ್ರದರ್ಶನ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಹಿರಿಯ ಶಿಲ್ಪಿ ವೆಂಕಟಾಚಲಪತಿಯವರ ಆಶಯದ ಈ ಗುಂಪು ಪ್ರದರ್ಶನದಲ್ಲಿ ಹೊಸ ಚಿಗುರಿನೊಂದಿಗೆ ಹಳೆ ಬೇರುಗಳೂ ಕೂಡಿರುವುದು ಬಹುಮುಖ್ಯ ಬೆಳವಣಿಗೆಗಳಲ್ಲಿ ಒಂದು ಎಂದು ಅಭಿಪ್ರಾಯಪಟ್ಟಿದ್ದಾರೆ.

ಒಟ್ಟಾರೆ ಹಲವು ಆಯಾಮಗಳನ್ನು ಪಡೆದುಕೊಳ್ಳುತ್ತ ಸಾಗಿರುವ ನಮ್ಮ ಶಿಲ್ಪಕಲೆಯ ಕೆಲವು ಪ್ರಮುಖ ನಮೂನೆಗಳನ್ನು ನೋಡಿ ಅನುಭವಿಸುವ ಸಂದರ್ಭ ಸೃಷ್ಟಿಸಿದ ವಿಶಿಷ್ಟ ಗುಂಪಿನ ಪ್ರದರ್ಶನ ಇದಾಗಿತ್ತು ಎಂಬ ಆಶಯ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ.

**ಸಾಂದರ್ಭಿಕ ಕೃತಿಗಳಲ್ಲಿ ಪುಟಿಯುವ ಉತ್ಸಾಹ**: ದಿನಾಂಕ ೨೧-೦೨-೧೯೯೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಸಾಂದರ್ಭಿಕ ಕೃತಿಗಳಲ್ಲಿ ಪುಟಿಯುವ ಉತ್ಸಾಹ" ಎಂಬ ಲೇಖನದಲ್ಲಿ ಪ್ರತಿ ಕಲಾವಿದನೂ ತನ್ನದೇ ಆದ ಚಿಂತನಾ ವೈಖರಿಯನ್ನು ಹೊಂದಿದ್ದು ತನ್ನ ಸಾಮರ್ಥ್ಯ ಅಭಿವ್ಯಕ್ತಿಯನ್ನು ವಿವಿಧ ದೃಷ್ಟಿಯ ಸೃಷ್ಟಿಗಳನ್ನು ಒಂದೆಡೆ ಒಂದು ನಿರ್ದಿಷ್ಟ ಕಾಲದಲ್ಲಿ ಪ್ರದರ್ಶಿಸಲು ಮುಂದಾಗುತ್ತಿರುವ ದಿನಗಳಲ್ಲಿ ಈ ಒಂದು ಕಲಾ ಪ್ರದರ್ಶನ ಅದಕ್ಕೆ ಪ್ರತಿಸ್ಪಂದನೆಯ ಉತ್ತರ ನೀಡುವ ಮಟ್ಟದಲ್ಲಿ ನಡೆದ ಒಂದು ಯುವ ಕಲಾ ಪ್ರದರ್ಶನದ ಕುರಿತು ವಿಮರ್ಶಕರು ಇಲ್ಲಿ ಪ್ರಸ್ಥಾಪನೆ ಮಾಡಿದ್ದಾರೆ.

ದಿನಾಂಕ ೧೮-೦೨-೧೯೯೩ ರಿಂದ ೨೨ರವರೆಗೆ ಬೆಂಗಳೂರಿನ ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ 'ಸ್ಪಂದನ' ಶೀರ್ಷಿಕೆಯಡಿ ಕಲಾಕೃತಿಗಳ ಪ್ರದರ್ಶನ ನಡೆಯಿತು. ಇಲ್ಲಿ ಯುವ

ಕಾರಂಜಿಗಳಲ್ಲಿ ಪುಟಿಯುವ ಉತ್ಸಾಹದ ಅಭಿವ್ಯಕ್ತಿಗಳಲ್ಲಿ ಸಹಜವಾಗಿಯೇ ಸುತ್ತಲಿನ ಆಗುಹೋಗುಗಳು ಅಡಕಗೊಂಡಿರುವುದು ಅವರ ಪ್ರಬುದ್ಧತೆಯನ್ನು ಪರಿಚಯಿಸುತ್ತವೆ. ಉತ್ಸಾಹಕ್ಕೆ ತಕ್ಕ ತಣ್ಣಗಿನ ಅಭಿವ್ಯಕ್ತಿ ಕ್ರಮ ಬಹುತೇಕ ಕೃತಿಗಳಲ್ಲಿಲ್ಲದಿರುವುದು ಗಮನಾರ್ಹ ಎನ್ನುವಂತಿದೆ. ಅಲ್ಲದೆ ಕಲಾ ಶಾಲೆಯಲ್ಲಿ ಕಲಾವ್ಯಾಕರಣ ಕಲಿತ, ಕಲಿಯುತ್ತಿರುವ ಹಲವರ ಈ ಅಭಿವ್ಯಕ್ತಿಗಳು ಹೇಳಿಕೆಗಳಂಥ ಅವಸರದ ಅಭಿವ್ಯಕ್ತಿಗಳು; ತಮ್ಮ ವಸ್ತು ವೈವಿಧ್ಯದಿಂದಷ್ಟೆ ಮುಖ್ಯವಾಗುತ್ತದೆ. ಕೆಲವು ಕೃತಿಗಳಲ್ಲಿನ ಅಭಿವ್ಯಕ್ತಿ ಗಟ್ಟಿಯಾಗಿ ಮಾತನಾಡಿ ಇತರರ ಗಮನ ಸೆಳೆಯುವ ಜಾಣತನದಂಥ, ತೋರಿಕೆಯ, ನಾಟಕೀಯತೆಯೂ ಆಗಿದ್ದವು. ಆದರೆ ಒಟ್ಟಾರೆ ಈ ಯುವ ಕಲಾವಿದರ–ಕಲಾವಿದೆಯರ ಚಿಂತನಾ ಪರಿಧಿಗೆ ನಿಲುಕದ ಸಮಕಾಲೀನ ವಸ್ತುವೇ ಇಲ್ಲ. ಎಂಬಂತೆ ಸಾಮಾಜಿಕ ಕಾಳಜಿ ಮೆಚ್ಚುಗೆಗೆ ಅರ್ಹವಾಗುವಂತಿದ್ದವು ಎಂದು ಮೆಚ್ಚುಗೆಯನ್ನು ವ್ಯಕ್ತಪಡಿಸಿದ್ದಾರೆ.

**ಧಾರವಾಡದಲ್ಲಿ ರಾಷ್ಟ್ರೀಯ ಮಟ್ಟದ ಕಲಾ ಪ್ರದರ್ಶನ**: ದಿನಾಂಕ ೦೨–೦೬–೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಧಾರವಾಡದಲ್ಲಿ ರಾಷ್ಟ್ರೀಯ ಮಟ್ಟದ ಕಲಾ ಪ್ರದರ್ಶನ" ಎಂಬ ಲೇಖನದಲ್ಲಿ ರಾಜ್ಯ, ರಾಷ್ಟ್ರ, ವಿಶ್ವಮಟ್ಟದ ಕಾರ್ಯಕ್ರಮಗಳು ಕಲಾವಿದರು ತಮ್ಮನ್ನು ಗುರುತಿಸಿಕೊಳ್ಳುವಿಕೆಗಾಗಿ ನಡೆಯುತ್ತಿದ್ದ ಇಂಥ ಪ್ರದರ್ಶನಗಳೂ, ಹಾಗೂ ಧಾರವಾಡದಲ್ಲಿ ನಡೆದ ಅಂತರಾಷ್ಟ್ರೀಯ ಮಟ್ಟದ ಕಲಾಕೃತಿಗಳ ಪ್ರದರ್ಶನಕ್ಕೆ ಆಯ್ಕೆಯಾಗಿರುವ ಕುರಿತು ಮತ್ತು ಕಲಾ ಪ್ರದರ್ಶನಗಳ ಅವಶ್ಯಕತೆಯನ್ನು ಕುರಿತು ಇಲ್ಲಿ ವಿಮರ್ಶಕರು ಪ್ರಸ್ತಾಪಿಸಿದ್ದಾರೆ.

ನಮ್ಮ ರಾಜ್ಯದ ಬಹುಮುಖ್ಯ ಕಲಾಕೇಂದ್ರಗಳಲ್ಲಿ ಒಂದು ಕೇಂದ್ರವಾಗಿರುವ ಧಾರವಾಡದಲ್ಲಿ ಮೇ ೨೬ ರಿಂದ ೩೦, ೨೦೧೩ ರವರೆಗೆ ಡಾ.ಎಂ.ವಿ.ಮಿಣಜಗಿ ಸ್ಮಾರಕ ಮೊದಲ ಅಖಿಲ ಭಾರತ ಕಲಾ ಪ್ರದರ್ಶನ ೨೦೧೩ ರಂದು ನಡೆಯಿತು.

ಧಾರವಾಡದ ಸರ್ಕಾರಿ ಕಲಾಗ್ಯಾಲರಿಯಲ್ಲಿ ನಡೆದ ಈ ವಿಶಿಷ್ಟ ಕಲಾಪ್ರದರ್ಶನದಲ್ಲಿ ಚಿತ್ರ ಪ್ರಕಾರದ ವರ್ಣಚಿತ್ರ, ರೇಖಾಚಿತ್ರಗಳೇ ಅಲ್ಲದೆ ಪ್ರಿಂಟ್ ಮಾಧ್ಯಮದ ಕೃತಿಗಳೂ ಇದ್ದವು. ಶಿಲ್ಪ, ಛಾಯಾಚಿತ್ರ ಪ್ರಕಾರದ ಅಭಿವ್ಯಕ್ತಿಗಳಿರಲಿಲ್ಲ ಎಂಬುದು ಗಣನೀಯ. ಹಾಗೆಯೇ ಸ್ಪರ್ಧೆಗೆ ಬಂದ ಚಿತ್ರಕೃತಿಗಳ ಆಯ್ಕೆಯಲ್ಲಿಯೂ ಯಾರೇ ಆಯ್ಕೆದಾರರಾದರೂ ಅವರ ವೈಯಕ್ತಿಕ ಮಿತಿಗಳು ಪ್ರಭಾವ ಬೀರುತ್ತವೆ. ಪ್ರಸ್ತುತ ಧಾರವಾಡದ ಪ್ರದರ್ಶನದ ವಿಶೇಷಗಳಲ್ಲಿ ಒಂದು: ಬಹುತೇಕ ಉತ್ತಮ ಕೃತಿಗಳೇ ಆಯ್ಕೆಗೊಂಡಿರುವುದು, ಎರಡು: ಬಹುತೇಕ ವಾರಿನ ಹೆಸರುಗಳ ಕಾರಣಕ್ಕಾಗಿ ಇಡೀ ಭಾರತವನ್ನು ನೆನಪು ಮಾಡುವಂತೆ, ಮೂರು: ವಿದ್ಯಾರ್ಥಿಗಳ ವಿಭಾಗದಲ್ಲಿ ವೃತ್ತಿಪರ ಕಲಾವಿದರ ವಿಭಾಗದ ಕೃತಿಗಳೊಂದಿಗೆ ಸ್ಪರ್ಧಿಸಬಲ್ಲ ಉತ್ತಮ ಅಭಿವ್ಯಕ್ತಿಗಳ ಕೃತಿಗಳಿದ್ದುದ್ದು, ನಾಲ್ಕು: ಬಹಳ ಅಪರೂಪದ ಉತ್ತರ ಕರ್ನಾಟಕದ ದಿವಂಗತರಾದ, ದಿಗ್ಗಜರಂತಹ ಮಿಣಜಗಿ, ಡಿ.ಜಿ.ಬಡಿಗೇರ್, ಹಡಪದ್ ಮೊದಲಾದವರ ಕೃತಿಗಳ ಮರುಮುದ್ರಿತ ಕೃತಿಗಳ ಪ್ರದರ್ಶನಗೊಂಡಿದ್ದು

ಈ ಕಾರ್ಯಕ್ರಮವೇ ವಿಶೇಷತೆಗಳಾಗಿವೆ ಎನ್ನುತ್ತಾರೆ. ಪ್ರದರ್ಶನದಲ್ಲಿ ಮೈಸೂರಿನ ಜಿ.ಎಲ್.ಎನ್. ಸಿಂಹರವರ 'ಗಜ ಸಂಹಾರ' ಮಿಣಜಗಿ ಪ್ರಶಸ್ತಿ ಪಡೆದು ಆಕರ್ಷಿಸಿತ್ತು. ದೈವಿಕ ದರ್ಶನದ ಕೃತಿ ಅದು; ಇನ್ನು ಮೊದಲಾದವರ ಅಭಿವ್ಯಕ್ತಿಗಳು ಇಲ್ಲಿದ್ದು ಬಹುಕಾಲ ಕಾಡುವಂತಿವೆ.

ಒಟ್ಟಾರೆ ಹುಬ್ಬಳ್ಳಿಯ ಚಿತ್ರ ಸಂಗಮ ಕಲೆ ಮತ್ತು ಸಾಂಸ್ಕೃತಿಕ ಅಕಾಡೆಮಿಯ ಕೆ.ವಿ.ಶಂಕರವರ ಮಹತ್ವಾಕಾಂಕ್ಷೆಯ ಫಲದಂತೆ ಕಾಣುವ ಈ ಅಖಿಲ ಭಾರತ ಪ್ರದರ್ಶನ ಯಶಸ್ವಿಯಾಗಿದ್ದು, ಇನ್ನು ಮುಂದೆಯೂ ನಿರಂತರವಾಗಿ ನಡೆಯಲಿ, ಮತ್ತಷ್ಟು ಸತ್ವಯುತವಾಗಲಿ ಎಂದು ಹರ್ಷವನ್ನು ವ್ಯಕ್ತಪಡಿಸುತ್ತಾರೆ.

**ಆಧುನಿಕ ಕಲಾಗ್ಯಾಲರಿಯಲ್ಲಿ ನಮ್ಮವರ ಪ್ರಿಂಟ್‌ಗಳು:** ದಿನಾಂಕ ೦೫-೦೫-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಆಧುನಿಕ ಕಲಾಗ್ಯಾಲರಿಯಲ್ಲಿ ನಮ್ಮವರ ಪ್ರಿಂಟ್‌ಗಳು' ಎಂಬ ಲೇಖನದಲ್ಲಿ ಇಂದಿನ ಪರಿಸ್ಥಿತಿಯಲ್ಲಿ ಹಣದ ಆಸೆಯ ಮೇಲೆ ಕಲಾಕೃತಿಗಳ ಸಂಗ್ರಹಣೆಗೊಂಡು ಮಾರಾಟ ಮಾಡುವ ವಿಧಾನವು, ಭಾರತೀಯ ಕಲೆಯನ್ನು ಮಾರುಕಟ್ಟೆಗೆ ತಂದೊಡ್ಡಿರುವ ಪರಿಸ್ಥಿತಿಯ ಜೊತೆಗೆ ನಮ್ಮಲ್ಲಿರುವ ಪ್ರಿಂಟ್ ಮೇಕರ್ ತಂತ್ರಗಾರಿಕೆಯ ಬಗ್ಗೆ ಅವರ ಈಗಿನ ಸ್ಥಿತಿಗತಿಯ ಬಗ್ಗೆ ಅಮೇರಿಕೆಯ ವಾಸ್ವೋ, ಎಸ್.ವಾಸ್ವೋ ಅವರ ಛಾಯಾಚಿತ್ರಗಳಲ್ಲಿ ಮೂಡಿಬಂದಿರುವುದನ್ನು ವಿಮರ್ಶಕರು ಇಲ್ಲಿ ತಿಳಿಸಿದ್ದಾರೆ.

ಪ್ರವಾಸ ಪ್ರೀತಿಯ ವಾಸ್ವೋ ಛಾಯಾಚಿತ್ರ ಮಾಧ್ಯಮದಲ್ಲಿ ತೀವ್ರವಾಗಿ ಅಧ್ಯಯನ ಶೀಲರಾಗಿದ್ದು, ಅವರ ಛಾಯಾಚಿತ್ರಗಳ ಜೊತೆಗೆ ನಮ್ಮ ದೇಶದ ಪ್ರಿಂಟ್ ಮಾಧ್ಯಮದ ಆಯ್ದ ಪ್ರಿಂಟ್‌ಗಳು ಬೆಂಗಳೂರಿನ ಆಧುನಿಕ ಕಲಾಗ್ಯಾಲರಿಯಲ್ಲಿ ಏಪ್ರಿಲ್ ೨೮ರಿಂದ ಮೇ ೨೮, ೨೦೧೩ ರವರೆಗೆ ಪ್ರದರ್ಶಿಸಲಾಗಿತ್ತು. ಕ್ಲೀಷೆಯ ಶೀರ್ಷಿಕೆ 'ರೇಖೆಗಳ ನಡುವೆ' ಎಂಬ ಈ ಪ್ರದರ್ಶನದ ಕ್ಯೂರೇಟರ್ 'ಐಡೆಂಟಿಟ್', 'ಪ್ಲೇಸ್' ಮತ್ತು 'ಪವರ್' ದೃಷ್ಟಿಗಳ ಮೂಲಕ ಪ್ರದರ್ಶನವನ್ನು ನೋಡಿ ಕೋಪಿಸಿದ್ದಾರೆ ಎನ್ನಲಾಗಿದೆ. ಈ ಪ್ರದರ್ಶನ ಭಾರತೀಯ ಪ್ರಿಂಟ್ ಮಾಧ್ಯಮ ಕಲೆಯ ಕಾಲಾನುಕ್ರಮಣಿಕೆ ಹಾಗೂ ಇತಿಹಾಸಗಳನ್ನೇನೂ ಅನುಸರಿಸಿಲ್ಲ ಎಂದು ಅವರೇ ಹೇಳಿಕೊಂಡಿದ್ದಾರೆ.

ಈ ಪ್ರಿಂಟ್‌ಗಳು ಎಲ್ಲೆಲ್ಲಿ ಹೇಗೆ, ಯಾರು, ಯಾರಲ್ಲಿ, ದೊರೆತವೋ ಹಾಗೆ ಸಂಗ್ರಹಿಸಿ ಇಲ್ಲಿ ಪ್ರದರ್ಶಿಸಲಾಗಿದ್ದವು. ಹಾಗಾಗಿ ನಮ್ಮಲ್ಲಿ ಬಹುತೇಕರು ನೋಡಿರುವ ಪ್ರಿಂಟುಗಳೇ ಇವೆಲ್ಲ, ಯುವ ಪೀಳಿಗೆಯ ಈ ಮಾಂತ್ರಿಕತೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಎಂದು ಸ್ಪಷ್ಟವಾಗಿ ಇಲ್ಲಿ ತಿಳಿಸಲಾಗಿದೆ. ಈ ಮಾಂತ್ರಿಕ ಸೃಷ್ಟಿ ಪುನರ್ ಸೃಷ್ಟಿಗಳು ಕಲೆಯು ನೀಡುವ ಅನುಭವಗಳಾಗಿ ಹಲವು ಆಯಾಮಗಳನ್ನು ನೀಡಿವೆ. ಆದರೆ ಈ ಪ್ರದರ್ಶನದ ಸ್ವರೂಪವನ್ನು ವಿಮರ್ಶಕರು ಈ ರೀತಿಯಲ್ಲಿ ಹೇಳಿದ್ದು ವಿಶೇಷವೆನ್ನಬಹುದು.

ಈ ಗ್ಯಾಲರಿಯ ವಿಶೇಷ ಲಕ್ಷಣವೆಂಬಂತೆ ಹಲವೆಡೆ ಕೆಟ್ಟ ಬೆಳಕಿನ ಕಾರಣ ಪ್ರಿಂಟ್‌ಗಳನ್ನು 'ನೋಡುವುದು' ಮತ್ತೆ ಮತ್ತೆ 'ನೋಡಿ' ಎನ್ನುವಂತಾಗಿತ್ತು. "ಮರು ನೋಡುವಿಕೆ" ಎಂದರೆ ಇದೇ ಏನು? ಎಂಬ ತಮಾಷೆಯ ನುಡಿಗಳನ್ನೂ ಇಲ್ಲಿ ಪ್ರಸ್ತಾಪಿಸಿದ್ದು ಕಾಣಬರುತ್ತದೆ.

**ವೀನಮ್‌ರವರ ಒಂದು ಅಭಿವ್ಯಕ್ತಿ ಕಲಿಯುವ ಹಸಿವು ಮತ್ತು ಕಲಾಸೃಷ್ಟಿ:** ದಿನಾಂಕ ೨೩-೦೬-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ವೀನಮ್‌ರವರ ಒಂದು ಅಭಿವ್ಯಕ್ತಿ. ಕಲಿಯುವ ಹಸಿವು ಮತ್ತು ಕಲಾಸೃಷ್ಟಿ' ಎಂಬ ಲೇಖನದಲ್ಲಿ ದೃಶ್ಯಕಲೆಯ ವ್ಯಾಕರಣ ಕಲಿಕೆಯಲ್ಲಿ ನಿರತವಾದ ಬಿ.ವಿ.ಎ. ಅಂತಿಮ ವರ್ಷದ ವಿದ್ಯಾರ್ಥಿಗಳ ಕಲಾಕೃತಿಗಳ ಪ್ರದರ್ಶನ ಬಗ್ಗೆ ವಿಮರ್ಶಕರು ಇಲ್ಲಿ ಅಭಿಪ್ರಾಯಿಸಿದ್ದಾರೆ.

ದೃಶ್ಯಕಲೆಯಲ್ಲಿ 'ಕಲಿಯುವುದು' ಸಹ ಇದೆ. ದೃಶ್ಯಕಲೆಯ ಕಲಿಕೆ ಅಥವಾ ವ್ಯಾಕರಣದ ಕಲಿಕೆಯಿಂದ ನಷ್ಟವೇನೂ ಇಲ್ಲ; ಅನುಕೂಲಗಳು ಹೆಚ್ಚು, ಈ ಹಿನ್ನೆಲೆಯಲ್ಲಿ ಕಲಾಮಂದಿರದ ಕಲಾಶಾಲೆ ಇತ್ತೀಚೆಗೆ ವೆಂಕಟಪ್ಪ ಕಲಾಗ್ಯಾಲರಿಯಲ್ಲಿ ದಿನಾಂಕ ಏಪ್ರಿಲ್ ೨೦ ರಿಂದ ೨೪, ೨೦೧೩ರವರೆಗೆ ಪ್ರದರ್ಶನ ಏರ್ಪಡಿಸಲಾಗಿತ್ತು. ಈ ಪ್ರದರ್ಶನವು ಸಮೂಹ ಕಲಾ ಪ್ರದರ್ಶನವಾಗಿದ್ದು 'ನಿರಂತರ' ಎಂಬ ಶೀರ್ಷಿಕೆಯನ್ನು ಹೊಂದಿದ್ದು ವಿಶೇಷಣೀಯವೆನ್ನುತ್ತಾರೆ. 'ಅಂತ್ಯ' ಮತ್ತು 'ಆರಂಭ'ಗಳನ್ನು ಮೀರಿದ ಪ್ರಕ್ರಿಯೆಯೇ ದೃಶ್ಯಕಲೆಯ ಸೃಷ್ಟಿ ಈ ಹಂತದಲ್ಲಿರುವ ಬ್ಯಾಚುಲರ್ ವಿದ್ಯಾರ್ಥಿ ಮತ್ತು ವಿದ್ಯಾರ್ಥಿನಿಯರ ಕಲಾ ಪ್ರದರ್ಶನ ವೈವಿಧ್ಯಮಯವಾಗಿತ್ತು. ಎಂದು ಹೇಳಿದರೆ ಅದು ಕ್ಲೀಷೆ ಏನೂ ಅಲ್ಲ, ರೇಖಾ ಚಿತ್ರ ಮೂಲದ ಪ್ರಿಂಟ್ ಮಾಧ್ಯಮದ ಹಲವು ಅಸಾಮಾನ್ಯ ಸೃಷ್ಟಿಗಳಿದ್ದವು. ಬಹುತೇಕ ವರ್ಣಚಿತ್ರಗಳೇ ಹೆಚ್ಚಾಗಿದ್ದವು.

ಚಿತ್ರ ಪ್ರಕಾರವೆಂದರೇನೇ ಅದರೊಟ್ಟಿಗೆ ಚೌಕಟ್ಟಿನ ಜೊತೆಯಾಗುವಿಕೆ ಸಹಜ. ಆದರೆ ಚೌಕಟ್ಟು ಮೀರುವ ಹಾಗೂ 'ಕೇಂದ್ರ' ಅಂಚುಗಳನ್ನು ಮೀರುವ ಮನಸ್ಥಿತಿಯ ನೋಟಗಳನ್ನು ಇಂದಿನ ದೃಶ್ಯ ಕಲಾವಿದ/ಕಲಾವಿದೆಯರು ಮೀರುವ ಅಗತ್ಯವಿದೆ. ಸಹಜವಾಗಿಯೇ ಇಂತಹ ಲಕ್ಷಣಗಳುಳ್ಳ ಈ ಪ್ರದರ್ಶನದ ಸೃಷ್ಟಿಕಾರರು ರೇಖೆ, ಬಿಂದು, ರೂಪ, ಚೌಕಟ್ಟು, ಅಂಚು, ಕೇಂದ್ರಗಳನ್ನು ಅತಿ ಆಸಕ್ತಿಯಿಂದ ಒಂದು ಶಿಸ್ತಿನಂತೆ ಕಾಯ್ದುಕೊಂಡಿದ್ದಾರೆ.

ಒಟ್ಟಾರೆ ಇಡೀ ಪ್ರದರ್ಶನ ವೃತ್ತಿ ಪರತೆಯನ್ನು ಸಾಧಿಸಿರುವಂತೆ ಮೂಡಿಬಂದಿದ್ದು, ಪ್ರಭಾವಗಳನ್ನು ಮೀರಿದ ಕೃತಿಗಳಾಗಿದ್ದವು. ಎಂದು ವಿದ್ಯಾರ್ಥಿಗಳ ಕೃತಿಗಳನ್ನು ಕುರಿತು ಹರ್ಷವನ್ನು ವ್ಯಕ್ತಪಡಿಸುತ್ತಾರೆ.

**ಕಲಿಯುವಿಕೆ ಎಂಬ ನಿರಂತರ ಪ್ರವಾಹ:** ದಿನಾಂಕ ೨೪-೧೧-೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕಲಿಯುವಿಕೆ ಎಂಬ ನಿರಂತರ ಪ್ರವಾಹ" ಎಂಬ ಲೇಖನ ದಲ್ಲಿ ಗದಗ್‌ನ ವಿದ್ಯಾರ್ಥಿಗಳಿಂದ ಪ್ರದರ್ಶನಗೊಂಡ ಕಲಾಕೃತಿಗಳ ಒಳನೋಟದ ಬಗ್ಗೆ ಅವರ

ಆರಂಭದ ಕಲಿಯುವಿಕೆ ಹಂತದ ಕೃತಿಯಲ್ಲಿನ ವಸ್ತುವಿಷಯಗಳ ಬಗ್ಗೆ ವಿಮರ್ಶಕರು ಇಲ್ಲಿ ಚರ್ಚಿಸಿದ್ದಾರೆ.

ದಿನಾಂಕ ೧೬-೧೧-೨೦೧೩-೧೭ರವರೆಗೆ ನಡೆದ ಗದಗ್‌ನ ಕಲಾಶಾಲೆಯ ವಿದ್ಯಾರ್ಥಿ/ವಿದ್ಯಾರ್ಥಿನಿಯರ ಕಲಾಕೃತಿಗಳ ಪ್ರದರ್ಶನವು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆಯಿತು. ಕಲಾವಿದ್ಯಾರ್ಥಿಗಳು ಎಂದರೆ ಕಲಿಯುವುದರಲ್ಲಿ ತಲ್ಲೀನರಾದವರು. ಕಲಾವಿದರೆಂದರೆ ಗ್ರಹಿಕೆಗಳನ್ನು ಅಭಿವ್ಯಕ್ತಿಸುವವರು ಕಲಿಯುವಿಕೆ ಎಂಬುದು ನಿರಂತರ ಪ್ರಕ್ರಿಯೆಯಾಗಿರುವಾಗಲೂ ಹಣ, ಗ್ಯಾಲರಿ ಪ್ರದರ್ಶನ ಕೇಂದ್ರಿತವಾದ ಉದ್ದೇಶವೇ ಬಹು ಮುಖ್ಯವಾಗಿರುವಂತಿದೆ.

ಈ ಪ್ರದರ್ಶನದಲ್ಲಿ ವೈವಿಧ್ಯಮಯ ಅಂದರೆ ಪರಂಪರೆ ಹಾಗೂ ಸಮಕಾಲೀನ ದೃಷ್ಟಿಯ ಅಭಿವ್ಯಕ್ತಿಗಳಿದ್ದ ಗಣನೀಯ ಪ್ರದರ್ಶನವಾಗಿತ್ತು ಎನ್ನುತ್ತಾರೆ. ಆದರೆ ವರ್ಣಚಿತ್ರ ಮಾಧ್ಯಮದ ಕೃತಿಗಳನ್ನೂ ಮಾತ್ರ ಹೊಂದಿದ್ದ ಪ್ರದರ್ಶನ ಪ್ರಿಂಟ್, ಶಿಲ್ಪ ಇತ್ಯಾದಿಗಳಿಂದ ದೂರವಾಗಿತ್ತು. ವರ್ಣಚಿತ್ರಗಳಲ್ಲಿಯೂ, ಗಣನೀಯ ಗ್ರಹಿಕೆ, ಅವಿಭಕ್ತಿ ಹಾಗೂ ಆಕ್ರಲಿಕ್ ಮಾಧ್ಯಮವನ್ನು ದುಡಿಸಿಕೊಂಡಿದ್ದ ರೀತಿಗಳಿಂದಾಗಿ ಕೆಲವರು ಗಣನೀಯವಾಗಿ ಕಂಡರು. ಬಸವರಾಜ ಸಿ.ಕುಟ್ನಿಯವರ ಕೃತಿಗಳೇ ಅತಿ ರಮ್ಯ ಸೌಂದರ್ಯ ಲೋಕದ ಉತ್ತಮ ಭೂ ದೃಶ್ಯಕಲಾ ಕೃತಿಯೊಂದು ಪ್ರದರ್ಶನದಲ್ಲಿತ್ತು.

ಈ ಸೃಜನಶೀಲ ಮನಸ್ಸಿನ ಮೂಲಕ ಕಲಿಯುವಿಕೆಯು ನಕಲು ಮಾಡುವ ಮೂಲ ಪ್ರವೃತ್ತಿಯನ್ನು ಹಲವು ರೀತಿಯಲ್ಲಿ ಮುಂದುವರಿಸುತ್ತದೆ. ಹಾಗೆಯೇ ಪ್ರಭಾವದ ಆತಂಕ ಮೀರಿ ಸೃಷ್ಟಿಸುವ ಅತ್ಯಂತಿಕ ಘಟ್ಟವನ್ನು ಮುಟ್ಟುವುದು ಅಗತ್ಯ. ಹೀಗಾಗಿಯೂ ಪ್ರಾರಂಭವೂ, ಅಲ್ಲದ, ಅಂತ್ಯವೂ ಆಗದ ಆಟ ಈ ಕಲಿಯುವಿಕೆಯ ಚಿತ್ರ ತಂತ್ರಗಳೆಂದು ಇಲ್ಲಿ ಅತ್ಯಂತ ಸೂಕ್ಷ್ಮ ರೀತಿಯಲ್ಲಿ ತೋರಿಸಿಕೊಟ್ಟಿದ್ದಾರೆ.

**ಅಭಿವ್ಯಕ್ತಿ ಸಾಧ್ಯತೆಗಳ ಅನ್ವೇಷಣಾ ದೃಷಿ:** ದಿನಾಂಕ ೦೩-೦೩-೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಅಭಿವ್ಯಕ್ತಿ ಸಾಧ್ಯತೆಗಳ ಅನ್ವೇಷಣಾ ದೃಷ್ಟಿ" ಎಂಬ ಲೇಖನದಲ್ಲಿ ಆರ್.ಎಂ.ಹಡಪದ್ ಅವರು ಕಟ್ಟಿದ ಕೆನ್‌ಕಲಾಶಾಲೆಯಲ್ಲಿ ನಡೆದ ದೃಶ್ಯ ಅಭಿವ್ಯಕ್ತಿಗಳ ಪ್ರದರ್ಶನದಲ್ಲಿ ವಿ.ಕಾರ್ತಿಕ, ಕುಮಾರ್ ಜಿ. ಅವರ ಕೃತಿಗಳ ಕುರಿತು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

೨೦೧೩ರಲ್ಲಿ ನಡೆದ ಕಲಾಪ್ರದರ್ಶನಗಳಲ್ಲಿನ ಗಣನೀಯ ಪ್ರದರ್ಶನಗಳಲ್ಲಿ ಇದು ಒಂದು ಪ್ರದರ್ಶನದ ಉದ್ದೇಶ, ಪ್ರದರ್ಶನದಲ್ಲಿದ್ದ ಕೃತಿಗಳ ವಸ್ತು ಹಾಗೂ ವಿಶಿಷ್ಟ ಲಿಥೋಗ್ರಾಫ್ ಪ್ರಿಂಟ್ ಮಾಧ್ಯಮವನ್ನು ದುಡಿಸಿಕೊಂಡಿದ್ದ ಕಾರಣಗಳಿಂದಾಗಿ ಪ್ರದರ್ಶನ ಗಣನೀಯ ಎಂದದ್ದು.

ಕಾರ್ತಿಕ ವಿ. ಅವರು ಕೃತಿಗಳು ಲಿಥೋ ಪ್ರಿಂಟ್ ತಂತ್ರದ ನೆರವನ್ನು ಪಡೆದು 'ಐತಹಾಸಿಕ ಪ್ರಜ್ಞೆ'ಯನ್ನು ಅರಗಿಸಿಕೊಳ್ಳಲು ಪ್ರಯತ್ನಿಸಿದ ರೀತಿಯಲ್ಲಿ ಬಾದಾಮಿಯ ಚಾಲುಕ್ಯರ ಶಿಲ್ಪಕಲೆಯನ್ನು ೨೦೧೩ರ ಸಂದರ್ಭದಲ್ಲಿ ಪುನರ್ ದರ್ಶಿಸಿ, ರೇಖೆ, ಬಣ್ಣಗಳಲ್ಲಿ ಸಮಕಾಲೀನವಾಗಿ ಗ್ರಹಿಸಿರುವ ರೀತಿ ನಿರೀಕ್ಷೆಯನ್ನು ಹುಟ್ಟಿಸುವಂತಿದ್ದವು.

ಅನಿಲ್ ಕುಮಾರ್ ಜಿ.ರವರ ಕೃತಿಗಳೂ ಸಹ ಈ ದೃಷ್ಟಿಗೆ ಪೂರಕವಾಗಿವೆ. ಅವರು ಲಿಥೋ ಪ್ರಿಂಟ್‌ಗಳಲ್ಲಿ ಲಿಥೋ ಅಂದರೆ ಕಲ್ಲಿನ ನುಣುಪು ಅವಕಾಶದಲ್ಲಿ ಕಪ್ಪು ಬಿಳುಪು ಹಾಗೂ ಅಪರೂಪಕ್ಕೆ ಕೆಲವೇ ಬಣ್ಣಗಳ ರೇಖೆ, ರೂಪ, ಕಲ್ಪನೆಗಳೊಂದಿಗೆ, ಆಡಿರುವ ಆಟ ಗಂಭೀರ ನೆಲೆಯದು. ಕೆಲವಂತೂ ಸೂಕ್ಷ್ಮ ದೃಷ್ಟಿಯ ಗ್ರಹಿಕೆಯಾಗಿವೆ. 'ಒಳಗೆ–ಹೊರಗೆ', 'ಹೌದು–ಅಲ್ಲ' 'ಇದೆ–ಇಲ್ಲ' ಇತ್ಯಾದಿ ಭಾವನೆಯ ವಿವಿಧ ಮಜಲುಗಳ ಬಗ್ಗೆ ಚಿಂತಿಸುವಂತೆ ಕಾಣುವ ದೃಷ್ಟಿಯ ಕೃತಿಯೊಂದರಲ್ಲಿ ಕಾರ್ತಿಕ್, ಪ್ರಿಂಟ್ ಮಾಡುವ ಪ್ರಕ್ರಿಯೆಯ ಸಂದರ್ಭದಲ್ಲಿ ಕೊಲಾಜ್‌ನಂತೆ ಮತ್ತೆರಡು ಕಾಗದದ ತುಣುಕುಗಳನ್ನು ಪ್ರಿಂಟ್ ಸಂದರ್ಭದಲ್ಲಿಯೇ ದುಡಿಸಿಕೊಂಡಂತೆ ಕಾಣುವ ಈ ಕೃತಿಯು ಅಥವ ಪ್ರಿಂಟ್ ಈ ಕಾರಣಕ್ಕಾಗಿಯೇ ಗಣನೀಯ. ಈ ಒಂದು ಅಪರೂಪದ ಕಾರಣದಿಂದಾಗಿಯೇ ಇವರ ಮುಂದಿನ ಪ್ರಿಂಟ್‌ಗಳು ಕುತೂಹಲವನ್ನು ಉಂಟು ಮಾಡಬಲ್ಲವು. ಇಬ್ಬರ ಪ್ರತಿಭೆಗಳ ಈ ಪ್ರದರ್ಶನ ನೋಡುಗರಿಗೂ ವೈವಿಧ್ಯಮಯ, ವೈರುಧ್ಯಮಯ ಅನುಭವಗಳನ್ನು ನೀಡಿರುವ ಸಾಧ್ಯತೆಗಳಿವೆ ಎಂದು ಇಲ್ಲಿ ವಿಮರ್ಶಿಸಿದ್ದಾರೆ.

**ಭಾರತೀಯ ಬದುಕಿನ ತಾತ್ವಿಕ ವಿಶ್ವಾತ್ಮಕತೆ:** ದಿನಾಂಕ ೧೭–೦೩–೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಭಾರತೀಯ ಬದುಕಿನ ತಾತ್ವಿಕ ವಿಶ್ವಾತ್ಮಕತೆ" ಎಂಬ ಲೇಖನದಲ್ಲಿ ಬೆನಾತಿಯಲ್ಲಿ ನಡೆದಿರುವ ಇನ್‌ಸ್ಟಾಲೇಷನ್ ಕಲಾ ಪ್ರದರ್ಶನದಲ್ಲಿನ ಎಲ್.ಎನ್.ತಳ್ಳೂರರ ಅಭಿವ್ಯಕ್ತಿಯ ಕುರಿತು ಇಲ್ಲಿ ಚರ್ಚಿಸಿದ್ದಾರೆ.

ಡಿಸೆಂಬರ್ ೧೨, ೨೦೧೨ ರಂದು ಮಾರ್ಚ್ ೧೩, ೨೦೧೩ ರವರೆಗೆ ಕೇರಳದಲ್ಲಿ ನಡೆದ ಭಾರತದ ಪ್ರಥಮ ಬೈನಾತಿ, ಕೊಚ್ಚಿನ ಕೋಟೆಯ ಆಸ್ಪಿನ್ ವಾಲ್ ಹೌಸ್‌ನಲ್ಲಿ ನಡೆದ ಪ್ರದರ್ಶನದಲ್ಲಿ ದೃಶ್ಯ ಕಲಾವಿದ ಎಲ್.ಎನ್.ತಳ್ಳೂರ್ ತಮ್ಮ ಇನ್‌ಸ್ಟಾಲೇಷನ್ ಅಭಿವ್ಯಕ್ತಿಯೊಂದನ್ನು ಪ್ರದರ್ಶಿಸಿದರು. ಆ ಕಟ್ಟಡದ ಮೊದಲ ಮಹಡಿಯ ೨೦ನೆಯ ಸಂಖ್ಯೆಯ ಅಡಿ, 'ನಾ ಬಂದೆ, ನಾ ನೋಡ್ದೆ, ನಾ ಗೆದ್ದೆ' ಎಂಬ ಅವರ ಗ್ರಹಿಕೆಯು ಕಂಡಿತು. ಈ ಅಭಿವ್ಯಕ್ತಿಯು ಸುಮಾರು ೬೦–೩೦ ಅಡಿಯ ಅವಕಾಶದ ಗ್ಯಾಲರಿಯ ಒಳಾಂಗಣದಲ್ಲಿ ೩೦೦೦ ಮಂಗಳೂರು, ಟೆರಾಕೋಟಾ ಹೆಂಚುಗಳು ಮತು ಕಬ್ಬಿಣದ ಸರಳು ಇತ್ಯಾದಿಗಳಿಂದ ಮೂಡಿಬಂದಿತ್ತು.

ಇದರ ಅರ್ಥವನ್ನು ವಿಮರ್ಶಗಳು ಈ ದೇಹ ಸಂರಕ್ಷಣೆಗೆ ಮನುಷ್ಯ ಏನೆಲ್ಲ ಮಾಡುವುದಿಲ್ಲ. ತಳ್ಳೂರರ ಈ ಹೆಂಚುಗಳ ಜೋಡಣೆ, ದೇಹ ಸಂರಕ್ಷಣೆಗೆ ನೆರವಾಗುವಂತಹ ಸಾಂಕೇತಿಕ ರೂಪ

ಅಲ್ಲಿ ನಡೆದಾಡುವ ಪ್ರೇಕ್ಷಕರನ್ನು ಸೇರಿದಂತೆ ಪರಿಭಾವಿಸುತ್ತಾರೆ. ಅಲ್ಲದೆ ಹೆಂಚಿನ ಮೇಲ್ಮೈಯಲ್ಲಿ ಹಲವೆಡೆ 'ಹಣಯೋಗಿ'ಗಳ ಶಿಲ್ಪಗಳು ಹಲವು ಭಂಗಿಗಳಲ್ಲಿದ್ದವೆಂದು ಹೇಳುತ್ತಾ ಜೀವಂತಿಕೆಯ ಶಕ್ತಿಯ ಯೋಗದ ಸಾಧನೆಯಿಂದ ಹಸಿವು, ಬಾಯಾರಿಕೆ, ನಿದ್ರೆಗಳನ್ನೂ ಮೀರಬಹುದು ಎಂಬ ನಂಬಿಕೆಯಿದೆ. ಹೀಗೆ ಪ್ರಪಂಚದಲ್ಲಿ ಮಾನವನಾಸೆಯ ಹಲವು ಅಗತ್ಯಗಳನ್ನು ಪೂರೈಸಿಕೊಳ್ಳಲು ಅವನೇ ಕಟ್ಟುವ, ಮುರಿಯುವ ಹಾಗೂ ಮೀರುವ ಆಟಗಳು ಪ್ರತಿ ನಿತ್ಯವೂ ನಡೆಯುತ್ತಲೇ ಇವೆ. ವಿಶ್ವಾತ್ಮ ದೃಷ್ಟಿಗೆ ಭಾರತೀಯ ಬದುಕಿನ ತಾತ್ವಿಕತೆಯನ್ನು ಲೇಪಿಸಿಕೊಂಡ ಅಭಿವ್ಯಕ್ತಿಯಿದು ಬದುಕನ್ನೂ ಗೆಲ್ಲುವ, ಸೋಲುವ ಭಯದ ಮುಗಿಯದ ಆಟದ ಪರಿ ಎಂದು ವಿಮರ್ಶಕರು ಅಭಿಪ್ರಾಯಪಡುತ್ತಾರೆ.

**ಮೈಸೂರಿನಲ್ಲಿ ಇನ್‌ಸ್ಟಾಲೇಷನ್ ಕಲಾಸೃಷಿ:** ೨೦೧೩ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಮೈಸೂರಿನಲ್ಲಿ ಇನ್‌ಸ್ಟಲೇಷನ್ ಕಲಾದೃಷ್ಟಿ" ಎಂಬ ಲೇಖನದಲ್ಲಿ ಕಲಾವಿದರು. ತಮ್ಮ ಗ್ರಹಿಕೆಗಳಲ್ಲಿನ ಅಭಿವ್ಯಕ್ತಿಯಲ್ಲಿ ಇನ್‌ಸ್ಟಾಲೇಷನ್ ಕಲಾಭಿವ್ಯಕ್ತಿಯು ಒಂದು ವಿಶೇಷವಾದ ಮಾಧ್ಯಮವಾಗಿ ಕಂಡುಬರುತ್ತಿದ್ದು. ಪ್ರಸ್ತುತ ಈ ಕುರಿತಂತೆ ವಿಮರ್ಶಕರು ಪ್ರಸ್ತಾಪನೆ ಮಾಡಿದ್ದಾರೆ.

ನಮ್ಮ ಬಹುಮುಖ್ಯ ಕಲಾವಿದರಾದ ಮೈಸೂರಿನ ರಾಮದಾಸ್ ಅಡ್ಯಂತಾಯರವರ ಮಾರ್ಗದರ್ಶನಲ್ಲಿ ಚಾಮರಾಜೇಂದ್ರ ಸರ್ಕಾರಿ ದೃಶ್ಯಕಲಾ ಅಕಾಡೆಮಿಯಲ್ಲಿ ನಡೆದ ದೃಶ್ಯಕಲಾ ಕಾರ್ಯಗಾರವೊಂದು ಸಮಕಾಲೀನ ದೃಷ್ಟಿ–ಧೋರಣೆಗಳ ಕಾರಣಕ್ಕಾಗಿ ವಿಶಿಷ್ಟವೆನಿಸಿತ್ತು. ಕಾರ್ಯಗಾರದಲ್ಲಿ ಬೇರೆ ರಾಜ್ಯಗಳಿಂದ ಆಗಮಿಸಿದ ವಿದ್ಯಾರ್ಥಿಗಳು ಸಾಂಸ್ಕೃತಿಕ ಸ್ಥಳಗಳಿಗೆ ಭೇಟಿ ನೀಡಿಸಿದ್ದು, ಅವುಗಳನ್ನು ತಮ್ಮ ಅಭಿವ್ಯಕ್ತಿಗಳ ಶಿಲ್ಪ, ಪ್ರಿಂಟ್ ಇನ್‌ಸ್ಟಾಲೇಷನ್ ಮಾಧ್ಯಮದಲ್ಲಿ ಸೃಷ್ಟಿಸಿದ್ದು. ಒಂದು ವಿಶಿಷ್ಟ ಬೆಳವಣಿಗೆಯ ರೂಪವನ್ನು ಕಂಡಂತಿತ್ತು ಎಂದು ಅಭಿಪ್ರಾಯ ಪಡುತ್ತಾರೆ.

ಈ ಎಲ್ಲ ಅಭಿವ್ಯಕ್ತಿಗಳು ಆಗಸ್ಟ್ ೨೪ ರಿಂದ ೩೧, ೨೦೧೩ ರವರೆಗೆ ಕಾವಾದ ಅವರಣದಲ್ಲಿ ಮೂಡಿಬಂದಿದ್ದು. ಆಗಸ್ಟ್ ೩೧ರಿಂದ ಸೆಪ್ಟೆಂಬರ್ ೩, ೨೦೧೩ರವರೆಗೆ ಸಾರ್ವಜನಿಕರಿಗೆ ಮುಕ್ತವಾಗಿ ಪ್ರದರ್ಶಿಸಲ್ಪಟ್ಟವು.

ಈ ಪ್ರದರ್ಶನ ವಿಶಿಷ್ಟತೆ ಎಂದರೇ ಇದೇ ಮೊದಲ ಬಾರಿಗೆ ಇನ್‌ಸ್ಟಾಲೇಷನ್ ಕಲಾ ಪ್ರಕಾರದಲ್ಲಿ ಬಹುದೊಡ್ಡ ರೀತಿಯಲ್ಲಿ ಅಭಿವ್ಯಕ್ತಿಗಳು ಪ್ರದರ್ಶಿಸಲ್ಪಟ್ಟಿದ್ದು. 'ಪೇಂಟಿಗನ್' ಅಥವಾ 'ಪಂಚಕೋನ' ಶೀರ್ಷಿಕೆಯ ಐದು ಪೆಟ್ಟಿಗೆಗಳ ಸಂಯೋಜನಾ ರೂಪದ ಒಳಗೆ ಪಂಚಭೂತಗಳ ವಿಶ್ವಕೋಶ. ಹಾಗೆಯೇ 'ಲೈನ್ ಅಂಡ್ ಬ್ಯಾಲೆನ್ಸ್' ಪ್ರಕೃತಿಯ ವಿಶಿಷ್ಟ ಲಕ್ಷಣವನ್ನು ವೈಭವೀಕರಿಸುವ ಬೃಹತ್ ಲೋಕ. ಇನ್ನೊಂದು 'ವೈಟಗೋಸ್ ಇನ್', ಬ್ಲಾಕ್ ಕಮ್ಸ ಔಟ್' ಇನ್‌ಸ್ಟಾಲೇಷನ್,

'ದಿ ಲಾಕ್', ಕಸದ ಬುಟ್ಟಿಯ ಪ್ರಮುಖ್ಯತೆ ವಿಶಿಷ್ಟ ಇನ್‌ಸ್ಟಾಲೇಷನ್, ಹೀಗೆ ಅನೇಕ ಎಡ್ ಕಟ್‌ಗಳು , ಶಿಲ್ಪಗಳು ನೋಡುಗರಿಗೆ ಮಂತ್ರ ಮುಗ್ಧರನ್ನಾಗಿ ಮೂಡಿಸುವಂತ ಅಭಿವ್ಯಕ್ತಿಗಳ ಕಂಡುಬಂದಿವೆ ಎಂದು ಇಲ್ಲಿ ಹೇಳಿದ್ದಾರೆ.

**ಮನಸೊರೆಗೊಂಡ ಭಿತ್ತಿ ಪತ್ರ ಪ್ರದರ್ಶನ:** ದಿನಾಂಕ ೦೫-೦೧-೨೦೧೪ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಮನಸೂರೆಗೊಂಡ ಭಿತ್ತಿಪತ್ರ ಪ್ರದರ್ಶನ" ಎಂಬ ಲೇಖನದಲ್ಲಿ ೬ನೇಯ ಬೆಂಗಳೂರು ಅಂತರಾಷ್ಟ್ರೀಯ ಸಿನಿಮೋತ್ಸವ -೨೦೧೩ ರಂದು ನಡೆದ ಭಿತ್ತಿ ಚಿತ್ರಗಳ ಪ್ರದರ್ಶನ ಏರ್ಪಡಿಸಿದ್ದು ಇದಕ್ಕೆ ನಮ್ಮ ಕಲಾವಿದರ ಕೊಡುಗೆ ಮತ್ತು ಭಿತ್ತಿಪತ್ರದ ಅದರ ಮಹತ್ವದ ಕುರಿತು ಇಲ್ಲಿ ವಿಮರ್ಶಕರು ಉಲ್ಲೇಖಿಸಿದ್ದಾರೆ.

ಡಿಸೆಂಬರ್ ೨೬, ೨೦೧೩ರಿಂದ ಜನವರಿ ೨, ೨೦೧೪ ರವರೆಗೆ ಬೆಂಗಳೂರಿನ ಭಗವಾನ್ ಮಹಾವೀರ ರಸ್ತೆಯ ವಾರ್ತಾ ಇಲಾಖೆಯ ಪ್ರದರ್ಶನಾಂಗಣದಲ್ಲಿ ನಡೆದು ಭಾರತೀಯ ಅಂದರೆ ಇಡೀ ದೇಶದ ಹಲವು ಭಾಷೆಗಳ ಭಿತ್ತಿಪತ್ರ(ಪೋಸ್ಟರ್)ಗಳ ನಕಲು, ಪತ್ರಗಳನ್ನು ಪ್ರದರ್ಶಿಸಲಾಗಿತ್ತು. ನಕಲು ಪತ್ರಗಳ ಪ್ರದರ್ಶನ ಸುಲಭ ಬಿಡಿ, ಆದರೂ ಸಿನಿಮಾ ಕಲೆಗೆ ವಿಶಿಷ್ಟ ಆಯಾಮ, ಆಕರ್ಷಣೆ ನೀಡಿರುವ ಭಿತ್ತಿ ಪತ್ರಗಳ ರಂಗಕ್ಕೆ ನಮ್ಮ ಕಲಾವಿದರಾದ ಎಂ.ಎಫ್.ಹುಸೇನ್, ಎಸ್.ಎಂ.ಪಂಡಿತ್, ವೈಕುಂಠ, ಆರ್.ಎಂ.ಹಡಪದ, ಎಸ್.ಜಿ.ವಾಸುದೇವ್, ತೋಟಾತ್ತರಾಣಿ ಮೊದಲಾದವರ ಕೊಡುಗೆ ಅಪಾರ ಹುಸೇನ್ ನಡೆದ ಹಾದಿಯೇ ಅದು, ಎಸ್.ಎಂ.ಪಂಡಿತ ಸ್ಟುಡಿಯೋದಲ್ಲಿ ರಾಜ್ ಕುಮಾರ್, ಶಾಂತರಾಮ್‌ರಂಥವರು ಕಾಣಿಸಿಕೊಳ್ಳುತ್ತಿದ್ದರು. ಅಂತಹ ದಾಖಲೆಗಳೂ ದೊಡ್ಡ ರೀತಿಯಲ್ಲಿ ಇಂತಹ ಪ್ರದರ್ಶನದಲ್ಲಿ ಕಾಣಬರಬೇಕಾದುದು ತುಂಬ ಮುಖ್ಯವಾದ ಅಂಶವಾಗಿದೆ. ಆದರೆ ಪ್ರಸ್ತುತ ಪ್ರದರ್ಶನದಲ್ಲಿ ಹಲವು ಮಿತಿಗಳ ನಡುವೆ ಹಿಂದಿ, ಕನ್ನಡ, ತೆಲುಗು, ತಮಿಳು, ಮರಾಠಿ ಮೊದಲಾದ ಭಾಷೆಗಳ ಭಿತ್ತಿ ಪತ್ರಗಳು ಪ್ರದರ್ಶಿಸಲ್ಪಟ್ಟದ್ದವು ಎಂದು ನಿರುತ್ಸಾಹಪಡುತ್ತಾರೆ.

**ರೇಖೆಗಳ ಮುಗಿಯದ ಆಟ:** ೨೦೧೩ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ರೇಖೆಗಳ ಮುಗಿಯದ ಆಟ" ಎಂಬ ಲೇಖನದಲ್ಲಿ ರೇಖೆಗಳಲ್ಲಿ ತಮ್ಮ ಅಭಿವ್ಯಕ್ತಿಯ ಗ್ರಹಿಕೆಗಳನ್ನು ತೋರಿಸಲು ಮುಂದಾಗಿರುವ ಕಲಾವಿದರ ಪ್ರದರ್ಶಿತ ಕಲಾಕೃತಿಗಳ ಕುರಿತಂತೆ ಇಲ್ಲಿ ವಿಮರ್ಶಕರು ತೋರಿಸಿಕೊಟ್ಟಿದ್ದಾರೆ.

ರೇಖೆಗಳ ಕಲಾಸೃಷ್ಟಿ ಪ್ರಕ್ರಿಯೆಯ ಮೂಲಧಾತುಗಳಂತೆ ಬಿಂಬಿಸಲ್ಪಟ್ಟಿವೆ. ಪ್ರಾಚೀನ ಗ್ರಂಥಗಳಲ್ಲಿ ಹಲವು ಶತಮಾನಗಳಲ್ಲಿ ಇತಿಹಾಸ ಪೂರ್ವ ಗುಹಾ ಚಿತ್ರಗಳ ರೇಖಾ ಸೊಗಸು ಇಂದಿಗೂ ಉಳಿದುಕೊಂಡಿದೆ. ನಮ್ಮಲ್ಲಿ ರೇಖಾ ಪ್ರಾವಿಣ್ಯ ಕಲಾವಿದರೆನಿಸಿಕೊಂಡ ಶ್ರೀವಾತ್ಸ, ಚಾವ್ಡಾ, ಹೆಬ್ಬಾರ್, ಹುಸೇನ್ ಮೊದಲಾದವರ ರೇಖಾ ರಾಜಕಾರಣವು ಅದ್ಭುತವೇ ಸರಿ.

ಇಂದಿಗೂ ನಮ್ಮ ನಡುವೆ ನೂರಾರು ಕಲಾವಿದರಲ್ಲಿ ರೇಖೆಗಳು ಹಲವು ಭಾವಾವೇಗದಲ್ಲಿ ಹೆಜ್ಜೆ ಹಾಕುತ್ತಲೇ ಇವೆ. ಈ ಹಿನ್ನೆಲೆಯಲ್ಲಿ ಇತ್ತೀಚೆಗೆ ರೇಖೆಗಳ ಅಂದರೆ ಚಿತ್ರ, ಶಿಲ್ಪ, ಪ್ರಿಂಟ್ ಇತ್ಯಾದಿ ಪ್ರಕಾರಗಳನ್ನು ಮೀರಿ ದೃಶ್ಯಕಲಾವಿದರ ಅಭಿವ್ಯಕ್ತಿಗಳು ಕಾಣಿಸಿಕೊಂಡಿವೆ ಎಂಬುದನ್ನು ಗಮನಿಸಿದರೂ ರೇಖಾಚಿತ್ರ ಪ್ರಕಾರದ ಮೂಲಕ ಅಭಿವ್ಯಕ್ತಿಸುವವರೂ ಇದ್ದೇ ಇರುತ್ತಾರೆ. ಈ ದೃಷ್ಟಿ ಪೂರಕವಾಗಿ ಬೆಂಗಳೂರಿನ ವೆಂಕಟಪ್ಪ ಕಲಾಗ್ಯಾಲರಿಯಲ್ಲಿ ನಡೆದ 'ವರ್ಣಸಂಗಮ' ಕಲಾ ತಂಡದ ೧೨ನೆಯ ವಿಶಿಷ್ಟ ಪ್ರದರ್ಶನ ರೇಖಾ ಮಾಧ್ಯಮದ ಕಲಾಕೃತಿಗಳನ್ನು ಹೊಂದಿದ್ದು, ಹತ್ತು ಹಲವು ಮಾಧ್ಯಮ, ಪ್ರಕಾರ, ದೃಷ್ಟಿದೋರಣೆಗಳ ನಡುವೆ ಇದೊಂದು ಅಪರೂಪದ ಪ್ರದರ್ಶನದಂತಿಂತು ಎಂದು ಅಭಿಪ್ರಾಯಪಡುತ್ತಾರೆ.

ಪ್ರದರ್ಶನದಲ್ಲಿ ರಾಮಚಂದ್ರನ್, ಗಣೇಶ್ ದೊಡ್ಡಮನಿ, ಲಿಂಗದೇವರು, ಶೇಖರ್ ಬಳ್ಳಾರಿಯವರ ಚಲನಶೀಲ ರೇಖಾ ವೈಭವಗಳಿದ್ದವು.

### ೮.೩. ಕಲಾ ಶಿಬಿರ ಕೇಂದ್ರಿತ ಬರಹಗಳು

**ಹಂಪಿ ಶಿಲ್ಪಶಿಬಿರ: ಸಂಪ್ರದಾಯ ಸಮಕಾಲೀನತೆ ಸಂಗಮ:** ದಿನಾಂಕ ೦೭-೧೧-೨೦೧೦ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಹಂಪಿ ಶಿಲ್ಪ ಶಿಬಿರ ಸಂಪ್ರದಾಯ ಸಮಕಾಲೀನತೆ ಸಂಗಮ" ಎಂಬ ಲೇಖನದಲ್ಲಿ ಕನ್ನಡ ವಿಶ್ವವಿದ್ಯಾಲಯ ತನ್ನ ಅಸ್ತಿತ್ವ ಸಾಧಿಸಿಕೊಳ್ಳಲು ತನ್ನ ಹತ್ತು ಹಲವು ಉದ್ದೇಶ ವ್ಯಾಪ್ತಿಗಳ ನಡುವೆ ಅದು ಇತ್ತೀಚೆಗೆ ರಾಷ್ಟ್ರೀಯ ಶಿಲ್ಪಕಲಾ ಶಿಬಿರವನ್ನು ನಡೆಸಿತು. ಈ ಶಿಬಿರದಲ್ಲಿ ಹಲವಾರು ಶಿಲ್ಪಿಗಳು ಪಾಲ್ಗೊಂಡಿದ್ದು ಸಂಪ್ರದಾಯ ಸಮಕಾಲೀನತೆಗಳ ವಿಶಿಷ್ಟ ಸಂಗಮದಂತಹ ಶಿಲ್ಪಗಳು ರೂಪುಗೊಂಡಿರುವುದರ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಹಿರಿಯ ಶಿಲಿ ವೆಂಕಟಾಚಲಪತಿಯವರ ನಿರ್ದೇಶನದಲ್ಲಿ ನಡೆದ ಸಂಪ್ರದಾಯ ಸಮಕಾಲೀನತೆಗಳ ವಿಶಿಷ್ಟ ಸಂಗಮದಂತಹ ಬೇರುಗಳನ್ನು ಹುಡುಕಿ ಭದ್ರಗೊಳಿಕೊಳ್ಳುತ್ತಲೇ ಸಮಕಾಲೀನ ಸತ್ವಗಳನ್ನು ಅರಗಿಸಿಕೊಳ್ಳುವ ಶಿಲ್ಪಗಳು ಇಲ್ಲಿ ಸೃಷ್ಟಿಗೆ ಕಾರಣವಾಯಿತು ಎನ್ನಲಾಗಿದೆ ಸಮಕಾಲೀನ ಹಾಗೂ ಸಂಪ್ರದಾಯ ಶಿಲ್ಪಗಳೆರಡರ ವಿವಿಧ ಆಯಾಮಗಳನ್ನು ಬಲ್ಲ ವೆಂಕಟಾಚಲಪತಿಯ ಜೀವಧ್ವನಿಯಂತಹ ಶಿಲ್ಪವನ್ನು ಸೃಷ್ಟಿಸಿದರು.

ಅಲ್ಲದೆ ವಿವಿಧ ರಾಜ್ಯಗಳಿಂದ ಆಗಮಿಸಿದ್ದ ಶಿಲ್ಪಿಗಳನ್ನು ಬರೋಡ(ಗುಜರಾತ್) ಒರಿಸ್ಸಾ, ಆಂಧ್ರಪ್ರದೇಶ, ತಮಿಳುನಾಡಿನ ಶಿಲ್ಪಗಳು, ಅವರೊಂದಿಗೆ ನಮ್ಮ ರಾಜ್ಯದ ಎಂ.ಸಿ.ರಮೇಶ್, ಎ.ಆರ್.ಮಂಜುನಾಥ್, ಹಂಪಿ ವಿ.ವಿ.ಯ ವಿದ್ಯಾರಣ್ಯದ ಶಿವಾನಂದ ಬಂಟನೂರು, ಗೀತಾಂಜಲಿ ಇವರೆಲ್ಲ ಸಮಕಾಲೀನ ಶಿಲ್ಪಕಲೆಯ ವಿಶಿಷ್ಟ ಮುಖಗಳಿಗೆ ಹೆಸರಾದವರು. ಸಮಕಾಲೀನ ಜಾಗತೀಕರಣದ ಫಲಗಳಂತಹ ಈ ಎಲ್ಲ ಶಿಲ್ಪಗಳು ಹಂಪಿಯ ದೇವಾಲಯ ವಾಸ್ತು, ಹುಲ್ಲು, ಗಿಡ, ಮರ, ನೆಲ, ನೀರು, ಆಕಾಶಗಳೇ ಅಲ್ಲದೇ ಲ್ಯಾಪ್‌ಟಾಪ್‌ಗಳೊಂದಿಗೂ ಮುಖಾಮುಖಿಯಾಗುತ್ತಾ

ಸೃಷ್ಟಿಸಿದ್ದು ವಿಶೇಷವಾದ ಅಂಶಗಳಲ್ಲಿ ಒಂದು. ಒಟ್ಟಾರೆ ದೊಡ್ಡ ಉದ್ದೇಶದ ಶಿಲ್ಪ ಶಿಬಿರ ಇದಾಗಿದ್ದು ಉತ್ತಮ ಕೃತಿಗಳಿಂದ ಮೂಡಿ ಬಂದಿದೆ ಎಂದು ಹೇಳುತ್ತಾರೆ.

**ಸಮಕಾಲೀನ ಶಿಲ್ಪಕಲಾ ಶಿಬಿರ: ಆಕರ್ಷಕ ಚಿತ್ರವಸ್ತ್ರಗಳು:** ೧೯೯೭ರಲ್ಲಿ ಪ್ರಕಟವಾದ 'ಸಮಕಾಲೀನ ಶಿಲ್ಪಕಲಾ ಶಿಬಿರ; ಆಕರ್ಷಕ ಚಿತ್ರ ವಸ್ತುಗಳು" ಎಂಬ ಲೇಖನದಲ್ಲಿ ರಾಜ್ಯಮಟ್ಟದ ಶಿಲ್ಪಕಲಾ ಶಿಬಿರದಲ್ಲಿ ಮೂಡಿಬಂದ ಶಿಲ್ಪಗಳ ಕುರಿತಂತೆ ಮತ್ತು ಚಿತ್ರಕಲಾ ಪ್ರದರ್ಶನಗೊಂಡ ಕಲಾಕೃತಿಗಳಲ್ಲಿನ ಅಭಿವ್ಯಕ್ತಿಯ ವಸ್ತು ವಿಷಯದ ಬಗ್ಗೆ ವಿಮರ್ಶಕರು ತಮ್ಮ ಅನಿಸಿಕೆಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ದಿನಾಂಕ ೩೧-೦೧-೧೯೯೭ ರಿಂದ ೮-೦೨-೧೯೯೭ ರವರೆಗೆ ನಡೆದ ಶಿಲ್ಪಕಲಾ ಶಿಬಿರವು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯವರಿಂದ ಪ್ರಸ್ತುತಗೊಂಡಿತ್ತು. ರಾಜ್ಯದ ಹಲವಾರು ಪ್ರತಿಭಾನ್ವಿತ ಯುವ ಶಿಲ್ಪಿಗಳು ಭಾಗವಹಿಸುವಂತಾಗಿತ್ತು. ಶಿಬಿರದಲ್ಲಿನ ರಮೇಶ ಚಂದ್ರ ಮತ್ತು ಶ್ರೀನಿವಾಸ್ ಪ್ರಸಾದ್‌ರಂಥವರ ಅಭಿವ್ಯಕ್ತಿ ಮುಖ್ಯವಾಗಿದ್ದವು. The Box man and the body map ಬದುಕಿನ ಮಿತಿಗಳ ಶಿಥಿಲತೆಯ ಅನುಭವ ತರುತ್ತಲೇ ಚಿತ್ರಿ-ಶಿಲ್ಪಗಳೆರಡನ್ನು ಮಿಶ್ರಮಾಧ್ಯಮದಲ್ಲಿ ಪ್ರತಿಷ್ಠಾಪಿಸಿರುವ ರಮೇಶ ಚಂದ್ರರ ಸೃಷ್ಟಿ, ಬಣ್ಣ, ಕ್ಯಾನ್‌ವಾಸ್, ಡೈರಿಯ ಪುಟಗಳು, ಮರದ ಪೆಟ್ಟಿಗೆ ಇತ್ಯಾದಿಗಳನ್ನು ದುಡಿಸಿಕೊಂಡಿರುವ ಶಿವಾನಂದ ಬಂಟನೂರ ಶಿಲ್ಪಗಳು ಶಕ್ತಿ ಹಿಂಸೆಗಳನ್ನು ಪ್ರಶ್ನಿಸುವಂತಿದ್ದು ಶಿಬಿರದ ನಂತರ ಶಿಲ್ಪಗಳನ್ನು ರವೀಂದ್ರ ಕಲಾಕ್ಷೇತ್ರದಲ್ಲಿ ಕೊಠಡಿಯಲ್ಲಿ ಪ್ರದರ್ಶಿಸಲ್ಪಟ್ಟಿದ್ದವು.

ಒಟ್ಟಾರೆ ಪ್ರದರ್ಶನದಲ್ಲಿ ಸಮಕಾಲೀನ ಸೆಳಕುಗಳಿದ್ದು ಸಂಪ್ರದಾಯ ಶಿಲ್ಪಗಳು ಅನೇಕರ ಗಮನ ಸೆಳೆದದ್ದು ಸ್ವಾಗತಾರ್ಹವೆನಿಸಿಕೊಂಡಿದ್ದವು ಎನ್ನಲಾಗಿದೆ.

'ರೋಮ್ಯಾಂಟಿಕ್ ದೃಷ್ಟಿಯ ಅಭಿವ್ಯಕ್ತಿಗಳು' ಎಂಬ ಇದೇ ಅಂಕಣದ ಇನ್ನೊಂದು ಭಾಗದಲ್ಲಿದ್ದು ಜಗದೀಶ್ ಮತ್ತು ಫ್ಲಾರೆನ್ಸ್ ರೆಸ್ಪೋಗಿಯವರುಗಳ ಅಭಿವ್ಯಕ್ತಿಗಳು ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ಪ್ರದರ್ಶನಗೊಂಡಿದ್ದವು. ಪ್ಲಾರೆನ್ಸ್ ಬಾಟಿಕ್ ಅಭಿವ್ಯಕ್ತಿಗಳಲ್ಲಿ ಅತ್ಯಂತ ಕುಶಲತೆ ಕಲಾವಿದೆಯ ತಲ್ಲೀನತೆ ಇದು. ಭಾರತೀಯ ಚಿಕಣಿ ಚಿತ್ರಕಲೆಯನ್ನು ಸುಂದರವಾಗಿ ದುಡಿಸಿಕೊಂಡಿದ್ದು ವಿಶೇಷಣೀಯವಾಗಿದೆ.

ಜಗದೀಶ್‌ರ ತೈಲವರ್ಣ ಕೃತಿಗಳು ಸಾಮಾನ್ಯ ನೆಲೆಯವಾಗಿದ್ದ ಅವರ ಕಲ್ಪನಾ ಸಾಮರ್ಥ್ಯ ಕಾಣಿಸಿಕೊಂಡಿರುವುದು Carpet in blue and Carpet in growy ಚಿತ್ರ ವಸ್ತ್ರಗಳಲ್ಲಿ ಅಮೂರ್ತ ಭೂದೃಶ್ಯದಂಥ ಕಂದು, ಕಪ್ಪು ದರಗಳಿಂದ ನೆಯ್ಗೆಯನ್ನು ಮಾಡಲಾಗಿದ್ದು ಸೂಕ್ಷ್ಮತೆಯ ವಿವರಣೆಗಳು ಸುಂದರವಾಗಿದ್ದವು ಎಂದು ಅಭಿಪ್ರಾಯಿಸಿದ್ದಾರೆ.

**ಸಮಕಾಲೀನ ಅಭಿವ್ಯಕ್ತಿ ರಾಜಕಾರಣ:** ದಿನಾಂಕ ೦೧-೧೧-೨೦೦೯ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಸಮಕಾಲೀನ ಅಭಿವ್ಯಕ್ತಿ ರಾಜಕಾರಣ" ಎಂಬ ಲೇಖನದಲ್ಲಿ

ಗುಲಬರ್ಗಾದಲ್ಲಿ ನಡೆದ ಕಲಾಶಿಬಿರದಲ್ಲಿ ರಚನೆಯಾದ ಕಲಾಕೃತಿಗಳಲ್ಲಿ ಕಲಾವಿದರ ಅಭಿವ್ಯಕ್ತಿಯ ವಸ್ತುವಿಷಯ ಮತ್ತು ಸಮಕಾಲೀನ ಸಂದರ್ಭಗಳು ಕಲಾಕೃತಿಯಲ್ಲಿ ಪ್ರಭಾವ ಬೀರಿದ್ದು ಮತ್ತು ಕಲಾವಿದರು ತಮ್ಮ ವೈಯಕ್ತಿಕ ಅನುಭವಗಳನ್ನು ಬಳಸಿಕೊಂಡಿದ್ದರ ಬಗ್ಗೆ ವಿಮರ್ಶಕರು ಇಲ್ಲಿ ಚರ್ಚಿಸಿದ್ದಾರೆ.

೨೦೦೯ ಅಕ್ಟೋಬರ್ ೨೧ ರಿಂದ ೨೫ ರವರೆಗೆ ನಡೆದ "ಮಿತಿಗಳನ್ನು ಮೀರಿದ ಕಲೆಯ ಮನದಾಳ" ಎಂಬ ಶೀರ್ಷಿಕೆಯಲ್ಲಿ ಗುಲ್ಬರ್ಗಾದ ಎಂ.ಎಂ.ಕೆ. ಕಾಲೇಜು ಆಫ್ ಫೈನ್ ಆರ್ಟ್ಸ್‌ನ ಗುಲಬರ್ಗಾ ಆರ್ಟಗ್ಯಾಲರಿ ಹಾಗೂ ಬೆಂಗಳೂರಿನ ಹೆಬಿಟ್ಯೂಟ್ ಆರ್ಟ್ ಆಂಡ್ ಮೀಡಿಯಾ ಲಿಮಿಟೆಡ್ ಅವರು ಆಯೋಜಿಸಲಾಗಿತ್ತು. ಈ ಕಲಾ ಶಿಬಿರದಲ್ಲಿ ಪಾಲ್ಗೊಂಡಿರುವ ಕಲಾವಿದರ ಕೃತಿಯಲ್ಲಿ ತಮ್ಮೆಲ್ಲ ಆಂತರ್ಯವನ್ನು ಮುಜುಗರವಿಲ್ಲದೆ ಆಟೋ ಬಯೋಗ್ರಾಫಿಯಂತೆ ಬದುಕಿನ ಪುಟಗಳಿಂದ ಆಯ್ದ ಅನುಭವಗಳನ್ನೇ ಅಭಿವ್ಯಕ್ತಿಸಿದ್ದು ೨೦೦೯ರ ದಶಕದ ಕಲಾ ವಲಯದಲ್ಲಿ ವಿಶೇಷಣೀಯವಾದ ಅಂಶವಾಗಿದೆ. ಮತ್ತು ವಿದ್ಯಾರ್ಥಿಗಳೂ ಕೂಡ ತಮ್ಮನ್ನು ವಿಸ್ತರಿಸಿಕೊಳ್ಳುವ ನಿಟ್ಟಿನಲ್ಲಿ ಹಲವು ಹಾದಿಗಳನ್ನು ಬಳಸಿಕೊಂಡು ಕಲಾಕೃತಿಯ ರಚನೆ ಮಾಡಿರುವುದು, ವಿಶೇಷವಾಗಿ ಹಿರಿಯ ಕಲಾವಿದರಾದ ಎಂ.ಬಿ.ಪಾಟೀಲರ ಕಲಾಕೃತಿಗಳಲ್ಲಿನ ರೂಪ-ದೃಶ್ಯ-ಸಂಯೋಜನೆಯು 'ಖಾಸಗಿ' ಅಭಿವ್ಯಕ್ತಿಯು ಅರ್ಥಪೂರ್ಣವಾಗಿತ್ತು.

ಒಟ್ಟಾರೆ ಹಿರಿಯ ಕಿರಿಯ ಕಲಾವಿದರು ಬಿಚ್ಚು ಮನಸ್ಸಿನಿಂದ ಪಾಲ್ಗೊಂಡಿದ್ದು ಅಭಿವ್ಯಕ್ತಿ ರಾಜಕಾರಣಕ್ಕೆ ಈ ಶಿಬಿರ ಕಾರಣವಾಯಿತು. ಅಲ್ಲದೇ ಬಹುಕಾಲ ಚಿಂತನಾಶೀಲ ಕೃತಿಗಳೂ ಸೃಷ್ಟಿಯಾಗಿವೆ ಎಂದು ವಿಮರ್ಶಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಕಾರಂತರ ಕಾದಂಬರಿಗಳ ದೃಶ್ಯಲೋಕ:** ದಿನಾಂಕ ೧೭-೦೨-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕಾರಂತರ ಕಾದಂಬರಿಗಳ ದೃಶ್ಯಲೋಕ" ಎಂಬ ಲೇಖನದಲ್ಲಿ ಕಲಾಶಿಬಿರದಲ್ಲಿ ಕಾರಂತರ ಕಾದಂಬರಿಗಳ ಮೇಲೆ-ಕಲಾಕೃತಿಗಳನ್ನು ರಚನೆ ಮಾಡಿದ್ದುದರ ಬಗ್ಗೆ ಮತ್ತು ಕಾರಂತರ ಸಾಹಿತ್ಯದಲ್ಲಿ ದೃಶ್ಯರೂಪಕಗಳು ಕಾಣಬರುವುದನ್ನು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಪುತ್ತೂರಿನ ಕಾರಂತರ ಬಾಲಬನದಲ್ಲಿ ಜನವರಿ ೨೫ ರಿಂದ ೨೯ ರವರೆಗೆ ನಡೆದ ಚಿತ್ರಕಲಾ ಶಿಬಿರದಲ್ಲಿ ರಾಜ್ಯದ ಕಲಾವಿದರು ಕಾರಂತರ ಹಲವು ಕಾದಂಬರಿಗಳನ್ನು ಚಿತ್ರಮಾಧ್ಯಮದಲ್ಲಿ ಗ್ರಹಿಸಿ ಅಭಿವ್ಯಕ್ತಿಸಿದ ಸಂದರ್ಭವನ್ನು ಇಲ್ಲಿ ತಿಳಿಸಿದ್ದಾರೆ. ಇದೊಂದು ಗಣನೀಯ ಸಂದರ್ಭವಾಗಿದ್ದು ಕೆಲವು ಕಲಾವಿದರು ತಮ್ಮ ಗ್ರಹಿಕೆಯ ಮಿತಿಗಳ ನಡುವೆ ತಮಗೆ ನೀಡಿದ ಕಾದಂಬರಿಗಳನ್ನು ಚಿತ್ರಿಸಿದ್ದಾರೆ. ಬೆರಳೆಣಿಕೆಯ ಒಂದಿಬ್ಬರು ತಮ್ಮ ಪ್ರತಿಕ್ರಿಯೆಯಂತೆ ಚಿತ್ರಿಸಿದ್ದು ಗಮನಾರ್ಹ. ಕೃತಿಗಳ ಅಡಿ ಸಣ್ಣ ಟಿಪ್ಪಣಿ ಇದ್ದು ಕಾರಣ ಈ ಕೃತಿಗಳು ಕಾರಂತರ ಇಂಥದ್ದೇ ನಿರ್ದಿಷ್ಟ ಕಾದಂಬರಿಯ ಮೂಲದ್ದು ಎಂದು ಹೇಳಬಹುದು ಎನ್ನುತ್ತಾರೆ.

ಈ ಎಲ್ಲದರ ನಡುವೆ ಎಂ.ಬಿ.ಪಾಟೀಲ್, 'ಆಳ-ನಿರಾಳ', ವಿ.ಜಿ.ಅಂದಾನಿ, 'ಮರಳಿ ಮಣ್ಣಿಗೆ', ಚಂದ್ರನಾಥ್ 'ಚಿಗುರಿದ ಕನಸು', ಸುದೇಶ್ ಮಹಾನ್ 'ಕುಡಿಯರ ಕೂಸು', ಎಂ.ಎಸ್.ಮೂರ್ತಿ 'ಮೈಮನಗಳ ಸುಳಿಯಲ್ಲಿ', 'ಮೋಹನ್ ಸೋನರ', 'ಸರಸಮ್ಮನ ಸಮಾಧಿ', ಪ.ಸ.ಕುಮಾರ್‌ರ 'ಸಮೀಕ್ಷೆ', ರಾಣಿರೇಖಾರ 'ಕನ್ಯಾಬಲಿ', ಬಾಬುರಾವ್ ನುಡೋಣಿ 'ಅಳಿದ ಮೇಲೆ', ರೇಣುಕಾ ಮಾರ್ಕಂಡೇಯ 'ಸ್ವಪ್ನದ ಹೊಳೆ', ಮಕಾಳೆ 'ಬೆಟ್ಟದ ಜೀವ' ಕಾದಂಬರಿಗಳನ್ನು ಕುರಿತು ಅಭಿವ್ಯಕ್ತಿಸಿದ್ದಾರೆ. ರಮೇಶ್‌ರಾವ್ ವಿಶಿಷ್ಟವಾಗಿ ಕಾರಂತರ ಯಕ್ಷಗಾರ ಬ್ಯಾಲೆ ಕುರಿತು ಚಿತ್ರಿಸಿದ್ದರು. ಸುರೇಶ್ ಚಿಂತ್ರದತ್ತ 'ಔದಾರ್ಯದ ಉರಳಲ್ಲಿ' ಕಾದಂಬರಿಯನ್ನು ಗ್ರಹಿಸಿದ್ದರು. ಆದರೆ ಕೊನೆಗೆ ದೃಶ್ಯಕಲಾವಿದನ ಪ್ರಕಾರ ಇವೆಲ್ಲ ಕೃತಿಗಳು ಆಯಾ ಕಾದಂಬರಿಗಳ ಕುರಿತು ಅಭಿವ್ಯಕ್ತಿಯ ಅಂತಿಮ ಕೃತಿಗಳು ಅಲ್ಲ. ಇದೊಂದು ಪ್ರಾರಂಭ ಅಷ್ಟೇ ಎಂದು ಅದರ ಮುಂದುವರಿಕೆಯೂ, ಸೂಕ್ಷ್ಮ ರೀತಿಯಲ್ಲಿ ಇಲ್ಲಿ ವಿಮರ್ಶಕರು ನಮ್ಮ ಮುಂದೆ ಪ್ರಶ್ನೆ ಇಟ್ಟಿದ್ದಾರೆ.

### ೮.೪. ಕಲಾವಿಮರ್ಶಾ ಕೇಂದ್ರಿತ ಬರೆಹಗಳು

**ವ್ಯಾನ್‌ಗಾಗ್ ಶೂಗಳ ಕಲಾಕೃತಿ ಮತ್ತು ನೂರಾರು ಪ್ರಶ್ನೆಗಳು:** ೨೦೧೩ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ವ್ಯಾನ್‌ಗಾಗ್ ಶೂಗಳ ಕಲಾಕೃತಿ ಮತ್ತು ನೂರಾರು ಪ್ರಶ್ನೆಗಳು" ಎಂಬ ಲೇಖನದಲ್ಲಿ ಕಲಾಕೃತಿಯಲ್ಲಿರುವ ವ್ಯಾನ್‌ಗಾಗ್ ಶೂಗಳು ಕುರಿತಂತೆ ಈವರೆಗೆ ಅನೇಕ ಚರ್ಚೆಗಳು ಬರಹಗಳು ಬಂದಿದ್ದು ಅವುಗಳ ಒಟ್ಟು ವಿಮರ್ಶನೆಯನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಒಂದು ಕಲಾಕೃತಿಯ ಕುರಿತು ಒಬ್ಬರು ಮಾತನಾಡುವುದೇ ಅಪರೂಪ, ಇನ್ನು ಹಲವಾರು ಒಂದೇ ಸ್ಥಳದಲ್ಲಿ ಒಂದೇ ಕಾಲದಲ್ಲಿ ತಮ್ಮೆಲ್ಲಾ ಪಾಂಡಿತ್ಯ ಬಳಸಿ ಹರಟಿದರೆ ಹೇಗೆ? ಎಂಬ ಪ್ರಶ್ನೆಯನ್ನು ಪೀಠಿಕೆಯನ್ನಿಟ್ಟುಕೊಂಡು ಹೇಳುವುದಾದರೆ ಇಂತಹ ವಿವಾದಾಸ್ಪದವಾದ ಕಲಾಕರತಿ, ವ್ಯಾನ್‌ಗಾಗ್‌ನ ಶೂಗಳು ಹಿಂದೆ ಮಾರ್ಟೀನ್ ಹೈಡೆಗ್ಗರ್ ಮತ್ತು ವ್ಯಾನ್‌ಗಾಗಿನ ಶೂಗಳು ಶೀರ್ಷಿಕೆಯಡಿ ಕಲಾಬರಹಗಳ ಸಂಕುಲವೊಂದು ಪ್ರಕಟವಾಯಿತು. ಮೇಯರ್ ಪಷಿರೋ ಎಂಬ ಲೇಖಕನ 'ದಿಸ್ಟಿಲ್ ಲೈಫ್ ಯಾಸ್ ಎ ಪರ್‌ಸನಲ್ ಆಬ್ಜೆಕ್ಟ್' ಎಂಬ ಬರಹವು ಪ್ರಕಟವಾಗಿತ್ತು. ತತ್ವಶಾಸ್ತ್ರ ಹೈಡೇಗ್ಗರ್ ಆಕಾಲಕ್ಕೆ 'ಕಲಾಕೃತಿ ಮೂಲ' ಎಂಬ ಬರಹದಿಂದ ಚರ್ಚೆಗೆ ಒಳಗಾಗಿದ್ದರು.

ಈ ಎಲ್ಲ ಬರಹಗಳಲ್ಲಿ ವ್ಯಾನ್‌ಗಾಗ್‌ನ ಶೂಗಳ ಕುರಿತ ಕಲಾಕೃತಿಯ ಚರ್ಚಿಸಲ್ಪಟ್ಟಿದೆ. ಕಿತ್ತು ತಿನ್ನುವ ಬಡತನದಲ್ಲಿ ನೊಂದು, ಹಳೆಯ ಬಟ್ಟೆ ಶೂಗಳನ್ನು ಕೊಂಡು ಧರಿಸಿದ್ದನು. ಹಾಗೆ ನೋಡಿದರೆ ಶೂಗಳನ್ನು ಸ್ಟಿಲ್‌ಲೈಫ್‌ಗಳಂತೆ ಬಳಸಿಕೊಂಡು ಕಲಾಕೃತಿಯನ್ನು ರಚಿಸಿದ್ದಾರೆ. ಹೈಡೆಗ್ಗರ್ ಈ ಶೂಗಳು ಗ್ರಾಮೀಣ ಭಾಗದ ಹೊಲಗಳಿಂದ ಬಂದಿವೆ ಎಂದರೆ ಇದಕ್ಕೆ ವಿರುದ್ಧವೆಂಬಂತೆ ಪಷಿರೊ ನಗರ ಪ್ರದೇಶವು ಎಂದನು. ಈ ಎಲ್ಲ ಅಂಶಗಳ ವಿವಾದಾಸ್ಪದವನ್ನು ತನ್ನ ತೀಕ್ಷ್ಣ ಧೋರಣೆಗಳ ಮೂಲಕ ಚಿಂತನೆಯ ಭಾಷಿಕ. ಚರ್ಚೆಯ ಮೂಲಕ ಕಲಾಸಕ್ತರನ್ನು

ಬೆಕ್ಕಸ-ಬೆರಗಿಗೆ ತಳ್ಳುತ್ತನೆ. ಒಟ್ಟಾರೆ ಈಗಲೂ ಈ ಕಲಾಕೃತಿಯೂ ಇನ್ನೂ ಪ್ರಶ್ನೆಗಳನ್ನು ಹುಟ್ಟು ಹಾಕುವಂತ ಅನೇಕ ಚರ್ಚೆಗಳಿಗೆ ಎಡೆ ಮಾಡುವ ಕಲಾಕೃತಿಯೊಂದು ವಿಮರ್ಶಕರ ಮುಖ್ಯವಾದ ಅಂಶವಾಗಿದೆ.

**ಸಮಕಾಲೀನ ಒಳನೋಟಗಳು:** ದಿನಾಂಕ ೨೯-೦೪-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಸಮಕಾಲೀನ ಒಳನೋಟಗಳು" ಎಂಬ ಲೇಖನದಲ್ಲಿ ಅಂದಿನ ಸಮಕಾಲೀನ ದಿನಗಳಲ್ಲಿ ಕಲಾವಿದನು ತನ್ನ ಕಲಾಕೃತಿಯಲ್ಲಿ ಅಭಿವ್ಯಕ್ತಿಸಿರುವ ವಸ್ತುವಿಷಯ ಅಭಿವ್ಯಕ್ತಿಯ ಹಿಂದಿನ ಒಳನೋಟಗಳ ಬಗ್ಗೆ ಬಿ.ರಾಠೋಡ್ ಕಲಾವಿದನ ಕ್ಯಾಟಲಾಗ್‌ನಲ್ಲಿ ತಿಳಿಸಿರುವುದನ್ನು ಇಲ್ಲಿ ವಿಮರ್ಶಕರು ಕಟ್ಟಿಕೊಟ್ಟಿದ್ದಾರೆ.

ಇತ್ತೀಚೆಗೆ ನಮ್ಮಲ್ಲಿ ಹಲವು ಕಲಾವಿದ/ಕಲಾವಿದೆಯರು ತಮ್ಮ ಕಲಾಕೃತಿಗಳ ಒಳಗಿನ ಹಾಗೂ ಹೊರಗಿನ ನೋಟಗಳಲ್ಲಿ ಕ್ರಮವಾಗಿ ಸಂವೇದನಾ ಶೀಲತೆ ಹಾಗೂ ಹೊರಗಿನ 'ಹಣ'ದ ರಾಜಕಾರಣವನ್ನು ಅನುಭವಕ್ಕೆ ತರುತ್ತಾರೆ. ಇಂತಹ ಕೃತಿಗಳು, ತಮ್ಮಷ್ಟಕ್ಕೆ ತಾವೇ ಇತಿಹಾಸ ಸೃಷ್ಟಿಸುವ ಚಿಮ್ಮು ಹಲಗೆಯಾಗಿ ನೋಡುಗರಿಗೆ ನೆರವಾಗುತ್ತವೆ. ಇಂತದರ ಮಧ್ಯೆ ವಿ.ರಾಥೋಡ್ ಸ್ವಲ್ಪ ಸಮಯದ ಹಿಂದೆ ಅವರಿಂದ ಹೆಡ್‌ಲೈನ್ಸ್ ಬರ್ನ್ಸ್ ಎಗೈನ್' ಶೀರ್ಷಿಕೆಯಡಿ ವೈವಿಧ್ಯಮಯ ಮಾಧ್ಯಮಗಳ ಅಭಿವ್ಯಕ್ತಿಗಳು ಮೂಡಿ ಬಂದವು. ಪ್ರಸ್ತುತ ಬದುಕಿನ ಬಹುತೇಕ ಎಲ್ಲವೂ ವಿರೂಪಗೊಂಡು ಮತ್ತೆ ಮತ್ತೆ ಮರುಕಳಿಸುತ್ತಲೇ ಇರುವ ಸುತ್ತಲಿನ ಎಲ್ಲದರ ಬಗ್ಗೆಯೂ ಅವರ ಒಳನೋಟಗಳಿದ್ದ ಕೃತಿಗಳವು. ಅಂದಿನ ಸಂದರ್ಭದ ಬಣ್ಣಗಳಾದ ಆಕ್ರೆಲಿಕ್ ಬಣ್ಣಗಳನ್ನು ಬಹುತೇಕ ದುಡಿಸಿಕೊಂಡಿರುವ ರಾಥೋಡ್ ಶಿಲ್ಪವೊಂದರಲ್ಲಿ ಫೈಬರ್ ಮತ್ತು ಎಲೆಕ್ಟ್ರಿಕಲ್ ಕಾಯಿಲ್, ಎಂ.ಎಸ್.ಸ್ಟೀಲ್ ಹಾಗೂ ಫೈಬರ್ ಮಾಧ್ಯಮಗಳಲ್ಲೂ ಕಾಣಿಸಿಕೊಂಡಿರುವುದು ಗಮನಿಸುವಂತಿದೆ. ಒಟ್ಟಾರೆಯಾಗಿ ಉತ್ತಮ ಬರಹದ ಕ್ಯಾಟಲಾಗ್ ಸಂಗ್ರಹ ಯೋಗ್ಯವಾಗಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ಆಲಯ ಮೀರಿದ ಬಯಲು:** ದಿನಾಂಕ ೩೦-೦೯-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಆಲಯ ಮೀರಿದ ಬಯಲು" ಎಂಬ ಲೇಖನದಲ್ಲಿ ಕಲಾವಿದರೂ ವಿಮರ್ಶಕರೂ ಆದ ಚಿ.ಸು.ಕೃಷ್ಣಶೆಟ್ಟಿಯವರ ಕಲಾಕೃತಿಗಳ ಬಗ್ಗೆ ವಿಮರ್ಶಕರು ಇಲ್ಲಿ ವಿಮರ್ಶೆಯನ್ನು ಮಾಡಿದ್ದಾರೆ.

ನಮ್ಮ ದೃಶ್ಯಕಲಾ ಸಾಹಿತ್ಯದಲ್ಲಿ ಹೆಸರುವಾಸಿಯಾದ ವಿಮರ್ಶಕರೂ ಕಲಾವಿದರೂ ಆದ ಚಿ.ಸು.ಕೃಷ್ಣಶೆಟ್ಟಿಯವರು 'ಶೀರ್ಷಿಕೆ' ಇಲ್ಲದ ಚಿತ್ರಕೃತಿಗಳಿಂದ ಚಿತ್ರಕಲಾ ಪರಿಷತ್ತಿನಲ್ಲಿ ಪ್ರಸ್ತುತಪಡಿಸಿರುವರು. ಜಾಣತನದ ಪಕ್ವತೆಯನ್ನು ಅಗಿಸಿಕೊಂಡಿರುವ ಅವರು ಚೌಕಟ್ಟಿನ ಒಳಗಿನ ಅವಕಾಶಗಳನ್ನು ಅಥವಾ ರೂಪಗಳನ್ನು ವಿಚಿತ್ರಗೊಳಿಸಿ ಅವುಗಳಲ್ಲೂ ಚೌಕಟ್ಟಿನ ಮಿತಿಗಳನ್ನು ಮುರಿದುಹಾಕಿ ಮೀರಿದ್ದಾರೆ. ಆದರೆ ಆ ಮೀರುವಿಕೆಯ ಮುಂದೆ ಆಟ ಕೆಲವೊಮ್ಮೆ ಸುಂದರ

ಎನ್ನುವ ರೀತಿಯಲ್ಲಿ ಕಾಣಿಸಿಕೊಂಡಿವೆ ಎನ್ನುತ್ತಾರೆ. ಹಾಗೆ ಬಹುಸಂಖ್ಯೆಯ ಚೌಕಟ್ಟುಗಳ ಒಳಗೆ ಬೃಹತ್ ಶಿಲಾಯುಗದ ನೆಲೆಯ ಮುಂದೆ ಹೇಗೆಂದರೆ ಹಾಗೆ ಉದ್ದೇಶವೇ ಇಲ್ಲದೆ ಬಿದ್ದಿರುವ ಹಲವು ವಸ್ತುಗಳಂತಿವೆ. ಈ ರೀತಿಯ ಮೈವಳಿಕೆಗಳಲ್ಲೂ ನಿರತರಾಗಿದ್ದ, ಹಲವು ಆಟದ ಆಯಾಮಗಳ ನಂತರ ಆದಿಮಸತ್ವ ಮೂಲವನ್ನು ಅರಗಿಸಿಕೊಂಡಂತೆ ಕಾಣುತ್ತಿರುವುದು ಒಂದು ರೀತಿಯಲ್ಲಿ ಭೂತಕಾಲೀನ ಸಂವೇದನಾಶೀಲತೆಯ ಕನವರಿಕೆಯಂತೆಯೂ ಅನುಭವವಾಗುವುದು. ಹಾಗೆಯೇ ಮೂರ್ತ–ಅಮೂರ್ತಗಳ ನಡುವಿನ, ಇರುವಿಕೆ ಮತ್ತು ಇಲ್ಲದಿರುವಿಕೆಗಳ ನಡುವೆ ಆಟದಂತೆ ಈ ಭೂತಕಾಲೀನ ಕಾಡುವಕೆಯ ಆಟದಲ್ಲಿ ಕೃಷ್ಣಶೆಟ್ಟರು ಕಾಣಿಸಿರುವ ಶಿಥಿಲ, ಛಿದ್ರಗೊಂಡ ರೂಪಗಳ ಮೂಕಾಭಿನಯ ವೇದಿಕೆಂತೆ ಚಿತ್ರಿತ ಅವಕಾಶ ದುಡಿಸಿಕೊಳ್ಳಲ್ಪಟ್ಟಿದೆ ಎಂದು ಹೇಳುತ್ತಾ ಈ ರೀತಿಯ ಅಭಿಪ್ರಾಯಕ್ಕೆ ಅವುಗಳ ಕಾಡುವಿಕೆಯ ಹಿನ್ನೆಲೆಯಲ್ಲಿ ನಾನು ಕೃಷ್ಣಶೆಟ್ಟಿಯವರ ಕೃತಿಗಳನ್ನು ಹೀಗೆ ಓದಿರಬಹುದು? ನೋಡಿರಬಹುದೇ? ಎಂದು ತಮ್ಮನ್ನು ಪ್ರಶ್ನೆ ಮಾಡಿಕೊಂಡು ಇಲ್ಲ. ನಾನು ನೋಡುವ ರೀತಿಯ ಅನುಭವ ಒಮ್ಮೆಯಾದರೂ ನಿಮಗೂ ಬರಬಹುದು ಎನ್ನುತ್ತ ತಮ್ಮ ಅನಿಸಿಕೆಗಳನ್ನು, ಅಭಿಪ್ರಾಯಗಳನ್ನು ಈ ರೀತಿಯಲ್ಲಿ ಬರೆದು ನಮ್ಮ ಮುಂದಿಟ್ಟಿದ್ದಾರೆ. ಒಟ್ಟಾರೆ ಕೃಷ್ಣಶೆಟ್ಟಿಯವರು ಪದ ಪದಾರ್ಥ ಚಿಂತಾಮಣಿಯಲ್ಲಿ ತಮ್ಮ ಚಹರೆಗಳನ್ನು ಲೇಖಕರಾಗಿದ್ದು, ಲೇಖಿಸದಿರುವುದು ನೋಡುಗರ ನಿರೀಕ್ಷೆಗೆ ಒಂದು ನಷ್ಟವೇ ಸರಿ. ಈ ಸಂದರ್ಭದಲ್ಲಿ ಹಲವರ ಅಭಿವ್ಯಕ್ತಿಗಳಲ್ಲಿ ಆದಿಮ ಸತ್ವಗಳೂ ದೊಡ್ಡ ರೀತಿಯಲ್ಲಿ ಕಾಣಿಸಿಕೊಂಡು ಬರುತ್ತಿವೆ ಎಂಬುದು ವಿಮರ್ಶಕರ ಅಭಿಪ್ರಾಯವಾಗಿದೆ.

**ಯಾದಗಿರಿಯಲ್ಲಿ ಬೃಹತ್ ಶಿಲಾಯುಗದ ವಿಕೃತ ಶಿಲ್ಪ!:** ದಿನಾಂಕ ೩೧–೦೩–೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಯಾದಗಿರಿಯಲ್ಲಿ ಬೃಹತ್ ಶಿಲಾಯುಗದ ವಿಕೃತ ಶಿಲ್ಪ!" ಎಂಬ ಲೇಖನದಲ್ಲಿ ಶಿಲಾಯುಗಕ್ಕೆ ಸಂಬಂಧಿಸಿದ ಶಿಲ್ಪವೊಂದರ ಅನ್ವೇಷಣೆಗೈಯ್ದು ಅದರ ವೈಲಕ್ಷಣಗಳನ್ನು ಕುರಿತು ಮತ್ತು ಯಾದಗಿರಿಯ ಪ್ರಮುಖ ಸ್ಥಳಗಳ ಕುರಿತು ಮುಖ್ಯವಾಗಿ ಇಂತ ಆದಿಮಾನವ ಶಿಲ್ಪ, ಸ್ಥಳಗಳ ಸಂರಕ್ಷಣೆ ನೀಡಬೇಕೆಂದು ಹೆಚ್ಚು ಒತ್ತು ನೀಡಿ ಇಲ್ಲಿ ಹೇಳಿದ್ದಾರೆ.

ವಿಮರ್ಶಕರ ಅಲೆದಾಟಗಳ ಮಧ್ಯದಲ್ಲಿ ದೊರೆತಿರುವ ಯಾದಗಿರಿ ಹೊರವಲಯದ ಬೃಹತ್ ಕೆರೆಯ ರಸ್ತೆಯ(ಗುರುಮಠಕಲ್–ಹೈದರಾಬಾದ್) ಬಲಭಾಗದಲಿ ಅಚ್ಚರಿ ಎಂಬಂತೆ ಸುಮಾರು ೨೦ ಅಡಿಗಳ ಎತ್ತರ, ಅಷ್ಟೇ ಅಡಿಗಳ ಸುತ್ತಳತೆಯ ಮುಖದ ಶಿಲ್ಪವೊಂದು ಕಾಣಿಸಿ ಕೊಂಡಿದೆ. ಇದರ ಹಿನ್ನೆಲೆ, ಮುನ್ನೆಲೆಯ ಬಗ್ಗೆ ಅನ್ವೇಷಣೆಗೆ ಸಾಕಷ್ಟು ಸಮಯ ನೀಡಿದ್ದು ಎಲ್ಲಿಯೂ ಈವರೆಗೂ ದಾಖಲಾಗದ ಶಿಲ್ಪ.

ಕುತೂಹಲಗಳ ಕಣ್ಣನ್ನು ಸೆಳೆಯಬಲ್ಲ ಈ ಶಿಲ್ಪವೂ ಪ್ರಾರಂಭದಲ್ಲಿ ಹೀಗಿದ್ದಿರಲಾರದು ಎಂದು ಊಹಿಸುತ್ತ, ಸೃಷ್ಟಿರೂಪವನ್ನು ಪರಿಚಯಿಸುತ್ತಾರೆ. ಹಾಗೆಯೇ ಈ ಶಿಲ್ಪದ ಸುತ್ತಮುತ್ತಲಿನ

ಹಲವು ನೆಲೆಗಳು ಇಂದಿಗೂ ಅರೆಪ್ರಜ್ಞಾವಸ್ಥೆಯಲ್ಲಿವೆ. ಹಿಂದೂ-ಜೈನ ಧರ್ಮಗಳ ಪ್ರದೇಶ ಯಾದಗಿರಿ ಇಸ್ಲಾಂ ವಾಸ್ತುಶಿಲ್ಪಕ್ಕೂ ಖ್ಯಾತವಾದುದು. ಬೌದ್ಧ ಧರ್ಮಕೇಂದ್ರ ಸನ್ನತಿಯೂ ಪ್ರಸ್ತುತ ಹೆಚ್ಚು ಚಟುವಟಿಕೆಯಿಂದ ಸುದ್ದಿ ಮಾಡಿದೆ. ಬಳಿ ಚಕ್ರದ ಆದಿಮ ಚಿತ್ರಗಳ ನೆಲೆ, ಇತ್ತೀಚೆಗೆ ವರ್ತನಹಳ್ಳಿಯೂ ಈ ಸಾಲಿಗೆ ಸೇರಿದೆ. ಈ ರೀತಿಯ ಪ್ರೇಕ್ಷಣೀಯ ಸ್ಥಳಗಳು ಹೊಂದಿರುವ ಈ ಜಿಲ್ಲೆಯಲ್ಲಿ ಬೃಹತ್ ಶಿಲ್ಪಗಳು ವಿಶಿಷ್ಟ ಆಚ್ಚರಿ ಉಂಟು ಮಾಡುವಂತಿದೆ. ಈ ನಿಟ್ಟಿನಿಂದ ನಗರೀಕರಣ ಹೊಂದುತ್ತಿರುವ ಈ ಪ್ರದೇಶ ಜಿಲ್ಲಾ ಆಡಳಿತ ಈ ಅಮೂರ್ತ ಶಿಲ್ಪ ಸಂಕುಲವನ್ನು ಸಂರಕ್ಷಣೆಗೆ ಒತ್ತು ನೀಡುವುದು ತುಂಬ ಅಗತ್ಯವೆಂದು ವಿಮರ್ಶಕರು ಇಲ್ಲಿ ಒತ್ತಿ ಹೇಳಿದ್ದಾರೆ.

**೮.೫. ನಿಯತಕಾಲಿಕೆಗಳ ಬರೆಹಗಳು**

೮.೫.೧. ಸಂಕುಲ
೮.೫.೨. ಸಂಚಯ
೮.೫.೩. ಹೊಸತು
೮.೫.೪. ಕರ್ನಾಟಕ ಕಲಾವಾರ್ತೆ

**೮.೫.೧. ಸಂಕುಲ(ಸೃಜನ ಶೀಲ ಕಲೆಗಳ ದ್ವೈಮಾಸಿಕ ಪತ್ರಿಕೆ)**

**ಅಭಿವ್ಯಕ್ತಿಗೆ ಆಕಾರಗಳಾದ ಪ್ರಕೃತಿಯ ವಿಕೃತ ಹೊರನೋಟಗಳು:** ಸೆಪ್ಟೆಂಬರ್, ಅಕ್ಟೋಬರ್ ೧೯೯೫ರಲ್ಲಿ 'ಸಂಕುಲ' ಎಂಬ ದ್ವೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ 'ಅಭಿವೃದ್ಧಿಗೆ ಆಕಾರಗಳಾದ ಪ್ರಕೃತಿಯ ವಿಕೃತ ಹೊರನೋಟಗಳು" ಎಂಬ ಲೇಖನದಲ್ಲಿ ಪ್ರಮುಖ ಕಲಾವಿದರ ಕುರಿತು ಆಯ್ದು ಕೆಲವು ಕಲಾಪ್ರದರ್ಶನಗಳ ಕುರಿತಂತೆ ಸಂಕ್ಷಿಪ್ತ ಪರಿಚಯವನ್ನು ನೀಡಲಾಗಿದೆ.

ಸುತ್ತಲಿನ ಜೀವಸಂಕುಲ, ಮನುಷ್ಯನ ಮನುಷ್ಯತ್ವ ಛಿತ್ರಗೊಳ್ಳುತ್ತಿರುವ ಸಂದರ್ಭದಲ್ಲಿ ಕಲಾವಿದ ಬದುಕುವ ಕಲೆಯ ಗ್ರಹಿಕೆಗಳನ್ನು ಕಲಾಕೃತಿಗಳಾಗಿಸುವ ಪ್ರಕ್ರಿಯೆಯಲ್ಲಿ ತಮ್ಮೊಳಗಿನ ನೋಟಗಳನ್ನೇ ಅಲ್ಲದೆ ಹೊರಗಿನ ನೋಟಗಳನ್ನು ಆಕರಗಳನ್ನಾಗಿಸಿ ದಾಖಲಿಸುವ ಅಗತ್ಯ ಕಲಾವಿದರಿಗಿರುವಂತಿದೆ ಎಂದು ಪ್ರಸ್ತಾಪಿಸುತ್ತಾ ಇದೇ ನಿಟ್ಟಿನಲ್ಲಿ ಸೃಷ್ಟಿ ಪ್ರಕ್ರಿಯೆಯಲ್ಲಿ ಸದಾ ನಿರತವಾಗಿರುವ ವಾಸುದೇವರವರ ಮನಸ್ಸು ಸಂವೇದನಾಶೀಲವಾದದ್ದು. ಆಗಸ್ಟ್ ೨೩, ಸೆಪ್ಟೆಂಬರ್ ೯ ರವರೆಗೆ(೧೯೯೫) ಕ್ರಿಮಸನ್ ಗ್ಯಾಲರಿಯಲ್ಲಿ ಅವರು 'EarthScapes' ಕೃತಿಗಳು ಪ್ರದರ್ಶನ ಗೊಂಡಿದ್ದು ಸುತ್ತಲಿನ ಪ್ರಕೃತಿಯ ಒಳಭಾವ ಮತ್ತು ರೂಪಗಳ ರೇಖೆಗಳು ಅಲುಗಾಡಿದರೂ ಎಚ್ಚರದಿಂದ ಸ್ಪಂದಿಸುವ, ಅಭಿವ್ಯಕ್ತಿಸುವ ತೀವ್ರತೆಯನ್ನು ಹೊಂದಿರುವ ಅವರ ಕಲಾಕೃತಿಗಳಲ್ಲಿ ಪ್ರಕೃತಿ ಮತ್ತು ಅದರ ಸಹಚರಗಳು ವಿಶಿಷ್ಟವಾಗಿ ಕಾಣಿಸಿಕೊಂಡಿವೆ.

ಈ ಪ್ರದರ್ಶನಕ್ಕೆ ಮೊದಲು 'To or Not to be' ಶೀರ್ಷಿಕೆಯಡಿ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ದಿನಾಂಕ ಜುಲೈ ೧೫ ರಿಂದ ೧೮, ೧೯೯೫ ರವರೆಗೆ ನಡೆದ ಪ್ರದರ್ಶನದಲ್ಲಿ ಪರಿಸರವನ್ನು ಕೈಗಾರೀಕರಣವು ನಾಶಪಡಿಸುತ್ತಿರುವ ವಿರುದ್ಧ ಧ್ವನಿಯನ್ನು ಹೊಂದಿದ ಬಹುತೇಕ

Justallationsಗಳ ಜೊತೆ ಸುದ್ದಿರೂಪದ ಛಾಯಾಚಿತ್ರಗಳೂ ಇದನ್ನೇ ಕಲೆಯಾಗಿ ಮಾರ್ಪಡಿಸಿಕೊಂಡಿದ್ದ ಛಾಯಾಚಿತ್ರಗಳೂ ಇದ್ದವು. ಅಲ್ಲದೆ ರಾಘವೇಂದ್ರರಾವ್, ರಮೇಶ್ ಚಂದ್ರ, ರವಿಶಂಕರ್ ರಾವ್, ಶಾಂತಮಣಿ, ಮೊದಲಾದವರುಗಳ ಅನುಭವಗಳು ಅಥವಾ ಪ್ರತಿಕ್ರಿಯೆಗಳು ಹೊಸ ಮಾಧ್ಯಮಗಳಲ್ಲಿ ನಮ್ಮ ಸಂದರ್ಭಕ್ಕೆ ಹೊಸದೆನ್ನುವ ರೂಪಗಳಲ್ಲಿ ಮೂಡಿಬಂದಿವೆ. ಇವುಗಳೆಲ್ಲದರ ಬಣ್ಣ ಮೇಲ್ನೋಟಕ್ಕೆ ತೆಳುಕಂದು, ಕಂದು, ಕಪ್ಪು ಬಣ್ಣಗಳನ್ನು ಹೊಂದಿದ್ದು ವಸ್ತುವಿಗೆ ಪೂರಕವಾಗಿದೆ. ಒಟ್ಟಾರೆ ವಿಶಿಷ್ಟ ಸೌಂದರ್ಯದ ಅನುಭವವಾಗುವಂತಿತ್ತು.

ಮತ್ತೊಂದು ಪ್ರದರ್ಶನವಾದ ಬೆಂಗಳೂರಿನ ನಡೆದ ವಿಂಡ್ಸರ್ ಮ್ಯಾನರೆನ್ ವೆಸ್ಟ್ ಮಿನಿಸ್ಟರ್ ಗ್ಯಾಲರಿಯಲ್ಲಿ ಜುಲೈ ೪–೧೮–೧೯೯೫ ರವರೆಗೆ ಶಿಲ್ಪಕಲಾ ಕೃತಿಗಳು ಪ್ರದರ್ಶಿಸಲ್ಪಟ್ಟಿದ್ದವು. ಈ ಪ್ರದರ್ಶನದಲ್ಲಿ ಕರ್ನಾಟಕದ ಸೀಮಾರಾವ್‌ರವರ ಪಶ್ಚಿಮದ ಅಕಾಡೆಮಿಕ್ ಹಾಗೂ ಹೊಸ ದೃಷ್ಟಿಯ ಸಮಕಾಲೀನ ಕಲ್ಪನೆಗಳ ಜೊತೆ ಶಿಲ್ಪಿ ಬ್ರೌನಿಯವರ ಶಿಲ್ಪ ಸೃಷ್ಟಿಯ ಸ್ವಚ್ಛಂದತೆಯ ಸೆಳಕುಗಳನ್ನು ಹೊಂದಿಸಿಕೊಂಡಿರುವ ಮಿಶ್ರಮಾಧ್ಯಮದ ಕೆಲವು ಉಬ್ಬುಶಿಲ್ಪಗಳು ಜೊತೆಗೆ ಪ್ರಿಮಿಟಿವ್ ಆದ ಪದರಗಳನ್ನು ಹೊದ್ದುಕೊಂಡಿದ್ದವು. ಒಟ್ಟಾರೆ ನೋವು, ನಲಿವು ಎಲ್ಲವೂ ಅನುಭವಕ್ಕೆ ಬರುವ, ನಾವು ಸ್ಪರ್ಶಿಸಬೇಕೆಂದು ಪ್ರಚೋದಿಸುವ ಕೆಲವಾದರೂ ಉತ್ತಮ ಶಿಲ್ಪಗಳಿದ್ದ ಪ್ರದರ್ಶನವಿದೆ ಎನ್ನುತ್ತಾರೆ.

ಚಿತ್ರಿಸಬೇಕೆಂಬ ಹಂಬಲದಿಂದ ಬಣ್ಣಗಳಲ್ಲಿ ಸೌಂದರ್ಯ, ಆನಂದಗಳನ್ನು ಅರೆಸುವ ಉದ್ದೇಶದ ಕೃತಿಗಳ ಕಲಾವಿದೆ ಅಶ್ವಿನಿರಾವ್‌ರವರ ಪ್ರದರ್ಶನ 'ಜುಲೈ ೧೧ ರಿಂದ ೨೫, ೧೯೯೫ ರವರೆಗೆ ಬೆಂಗಳೂರಿನ ಮಣಿಪಾಲ್ ಸೆಂಟರ್‌ನ ಕಾರಿಡಾರ್ ಆಫ್ ಕಲರ್ಸ್ ನಡೆಯಿತು. ಕ್ಯಾಲೆಂಡರ್ ಕಲೆಗೆ ಹತ್ತಿರವಾಗಿದ್ದ ಮದರಾಸಿನ ಈಶ್ವರನ್, ರಾಜಿ ಹಾಗೂ ದೀಪಾರವರ ಕುಂಚದ ಕುಶಲತೆಯ, ಕಣ್ಸೆಳೆಯುವ ಪ್ರಕೃತಿ ದೃಶ್ಯಗಳು ಚಿತ್ರಕಲಾ ಪರಿಷತ್ತಿನ ಗ್ಯಾಲರಿಗಳಲ್ಲಿ ಪ್ರದರ್ಶಿಸಲ್ಪಟ್ಟಿದ್ದವು. ೧೯೯೫ರ ಜುಲೈ ೨೯ ರಿಂದ ಆಗಸ್ಟ್ ೭ರವರೆಗೆ ಪರಿಷತ್ತಿನ ಗ್ಯಾಲರಿಯಲ್ಲಿ ಶಾಂತಿನಿಕೇತನದ ಗ್ರಾಮೀಣ ಅಭಿವೃದ್ಧಿಗಾಗಿರುವ ಸಂಸ್ಥೆ ಅಮರ್ ಕುಟೀರ್ ಆಶ್ರಯದಲ್ಲಿ ಕರಕುಶಲ ಕಲೆ ಪ್ರದರ್ಶಿಸಲ್ಪಟ್ಟಿತು.

ಮಕ್ಕಳ ಮುಗ್ಧ ಸ್ವಚ್ಛಂದತೆಯ ರುಜುವಾತುಗಳಂಥ ರೇಖೆ, ಬಣ್ಣಗಳ ಸೃಷ್ಟಿಗಳು ಒಂದು ಹೊಸ ಬೆಳವಣಿಗೆ ಕಂಡಿದ್ದು ರಾಜೀವಲೋಚನ, ಎಸ್.ರಾಜೇಶ್ ಎಸ್.ರಂಜೀತಾರವರ ಅಭಿವ್ಯಕ್ತಿಗಳು ಆಗಸ್ಟ್ ೧ ರಿಮದ ೬, ೧೯೯೫ ರವರೆಗೆ ವೆಂಕಟಪ್ಪ ಆರ್ಟ್‌ಗ್ಯಾಲರಿಯಲ್ಲಿ ಪ್ರದರ್ಶನಗೊಂಡವು. ಹಾಗೂ ಮಾಸ್ಟರ್ ಆದಿತ್ಯ ಮಂಜುನಾಥ್ ಅವರು ಹೊಸದಾಗಿ ಹಲವು ಮಿತಿಗಳ ನಡುವೆಯೂ ಸ್ವಾಗತಾರ್ಹ ರೀತಿಯಲ್ಲಿ ಕಲಾಮಂದಿರದ ಅ.ನ.ಸು. ಆರ್ಟ್ ಗ್ಯಾಲರಿಯಲ್ಲಿ ಕೃತಿಗಳು ಪ್ರದರ್ಶನಗೊಂಡಿದ್ದವು.

ಬೆಂಗಳೂರಿನ ಫ್ರಾನ್ಸ್ ಸಾಂಸ್ಕೃತಿಕ ಕೇಂದ್ರ ಅಲೆಯನ್ಸ್ ಫ್ರಾನ್ಸಿಯು ಫ್ರಾನ್ಸ್‌ನ ಯುವ ಕಲಾವಿದ ಥೆರ್ರಿಕಾಚಿಯವರ ಕೃತಿಗಳನ್ನು, ಜುಲೈ ೬ ರಿಂದ ೧೬, ೧೯೯೫ ರವರೆಗೆ ಪ್ರದರ್ಶಿಸಿದ್ದು, ಫ್ರೆಂಚ್, ವೆಸ್ಟ್ ಇಂಡೀಸ್‌ಗಳಲ್ಲಿ ಬಹುಕಾಲವಿದ್ದು, ಅಲ್ಲಿನ ಅನುಭವಗಳನ್ನು ಪ್ರಭಾವಗಳ ನಡುವೆಯೂ ದಿಟ್ಟ ರೀತಿಯಲ್ಲಿ ಅಭಿವ್ಯಕ್ತಿಸಿದ್ದಾರೆ. ಗೋಪಿನಾಥ್‌ರವರು ತಮ್ಮ ಕಲಿಕೆಯ ಕಾಲದ ಪುಟಗಳನ್ನು ಕಲಾಕೃತಿಗಳಲ್ಲಿ ಮೂಡಿಸಿದ್ದು, ಇವು ಕೆನ್ ಕಲಾಶಾಲೆಯಲ್ಲಿ ಜುಲೈ ೨-೮-೧೯೯೫ ರಂದು ಪ್ರದರ್ಶನಗೊಂಡವು.

ಮ್ಯಾಕ್ಸ್ ಮುಲ್ಲರ್ ಭವನದಲ್ಲಿ ದಿನಾಂಕ ಆಗಸ್ಟ್ ೧೦ ರಿಂದ ಸೆಪ್ಟೆಂಬರ್ ೫, ೧೯೯೫ ರವರೆಗೆ ಹಾಗೂ ಅಲೆಯಾನ್ಸ್ ಫ್ರಾನ್ಸ್ ಗ್ಯಾಲರಿಯಲ್ಲಿ ದಿನಾಂಕ ಆಗಸ್ಟ್ ೦೭-೧೪-೧೯೯೫ ರಂದು ಎರಡು ವಿಶಿಷ್ಟ ಛಾಯಾಚಿತ್ರ ಪ್ರದರ್ಶನಗಳು ಏರ್ಪಡಿಸಲಾಗಿದ್ದು ವಿಶ್ವಕಲಾ ಚಳುವಳಿಗೆ ಕೊಡುಗೆ ನೀಡಿದ ಹಾಗೂ ನೀಡುತ್ತಿರುವ ಹಲವರು ವಿಶ್ವದ ವಿವಿಧ ರಾಷ್ಟ್ರಗಳಿಂದ ಪ್ಯಾರೀಸ್‌ಗೆ ಬಂದು ನೆಲೆಸಿದ್ದರು. ಅಂಥ ೪೭ ಜನರ ಕಪ್ಪು ಬಿಳಿಪು ಛಾಯಾ ಭಾವಚಿತ್ರಗಳು ಅಲೆಯನ್ಸ್ ಫ್ರಾನ್ಸ್‌ನಲ್ಲಿ ಪ್ರದರ್ಶಿತವಾಗಿದ್ದವು. ಇನ್ನು ಮ್ಯಾಕ್ಸ್ ಮುಲ್ಲರ್ ಭವನದ ಪ್ರದರ್ಶನದಲ್ಲಿ At Home away form Home ಶೀರ್ಷಿಕೆಯಡಿ ಪೀಟರ್ ಬ್ರುನೆಯವರ ಛಾಯಾಚಿತ್ರಗಳಿದ್ದವು. ಭಾರತವನ್ನು ವಿದೇಶೀಯರು ಗ್ರಹಿಸುವ ರೀತಿಗೆ ಉದಾಹರಣೆಯಂತೆ ಕೇರಳ, ಕಾಶಿ, ಕನ್ಯಾಕುಮಾರಿಗಳ ಚಿತ್ರಗಳಿದ್ದವು.

ಲೇಖಕರ ಸಂದರ್ಭದ ಕಾಲಘಟ್ಟದಲ್ಲಿ ನಡೆದ ಅಪೂರ್ವ ಕಾರ್ಯಕ್ರಮವೊಂದು ೧೧-೦೮-೧೯೯೫ ರಂದು ಬೆಂಗಳೂರಿನ ಕೇಶವಶಿಲ್ಪದಲ್ಲಿ ರಾಷ್ಟ್ರೋತ್ಥಾನ ಕಲಾಕೇಂದ್ರದ ಆಶ್ರಯದಲ್ಲಿ ನಡೆಯಿತು. ಈ ಕಾರ್ಯಕ್ರಮದ ಪ್ರಮುಖ ಅಂಶವೆಂದರೆ ಅವಧಾನ ಕಾರ್ಯಕ್ರಮ ಕ್ಷೇತ್ರದಲ್ಲಿ ಜನಪ್ರಿಯರಾಗಿರುವ ಆರ್.ಗಣೇಶ್ ಮತ್ತು ಚಿತ್ರಕಲೆಯ ರಂಗದಲ್ಲಿ ಜನಪ್ರಿಯರಾಗಿರುವ ಬಿ.ಕೆ.ಎಸ್. ವರ್ಮರವರುಗಳ ಪ್ರತಿಭೆಯ ಜುಗಲ್‌ಬಂಧಿಯಂಥ ಈ ಕಾರ್ಯಕ್ರಮ ಹಲವು ಗಂಟೆಗಳು ನೆರೆದಿದ್ದವರನ್ನು, ಹಲವು ರಸಗಳ ಭಾವಲೋಕದಲ್ಲಿ ತೇಲಿಸಿತ್ತು. ರವಿವರ್ಮ, ಪಂಡಿತ್, ಎಂ.ಟಿ.ವಿ.ಆಚಾರ್ಯ ದೇವನಹಳ್ಳಿ ಹನುಮಂತಾಚಾರ್ಯರವರುಗಳ ರೇಖೆಗಳು, ಚಿತ್ರಗಳು ಕಲಾ ಇತಿಹಾಸ ಬಲ್ಲವರಿಗೆ ಒಂದಲ್ಲ ಒಂದು ಬಾರಿಯಾದರೂ ನೆನಪಾಗುವಂತೆ ಚಿತ್ರಿಸುತ್ತಿದ್ದ ವರ್ಮ ನಮ್ಮ (ಅಂಕಣಕಾರರ) ಸಂದರ್ಭದ ಯಾರು ಸಾಧಿಸದಿರುವ ಜನ ಸಾಮಾನ್ಯರನ್ನು ರಂಜಿಸುವ, ಸಭಾಂಗಣ ನಡುಗುವಂಥ ಕರತಾಡನ ಪಡೆಯುವ ವಿಶಿಷ್ಟ ಆಕರ್ಷಣೆ ಬೆಳೆಸಿಕೊಂಡಿರುವ ರೀತಿ ಕುತೂಹಲ ಮೂಡಿಸಿದರೆ, ಗಣೇಶರ ಅಸಾಧಾರಣ ಪ್ರತಿಭಾ ಸಾಮರ್ಥ್ಯ ಆಶುಕವಿತ್ವದ ಸಂದರ್ಭದಲ್ಲಿ ಪರಾಕಾಷ್ಟೆ ಮುಟ್ಟುತ್ತಿತ್ತು ಎಂಬ ಅನುಭವೀಯ ಹಿತ ಆನಂದ ಕ್ಷಣಗಳನ್ನು ನೆನಪಿಸುತ್ತಾರೆ.

**ಸ್ವಚ್ಛಂದ ಕಾವ್ಯದೊಂದಿಗೆ ಹರಿದ ಸ್ವಚ್ಛಂದ ರೇಖೆಗಳು:** ೧೯೯೫ ರಲ್ಲಿ ಸಂಕುಲ ದ್ವೈಮಾಸಿಕ ಪತ್ರಿಕೆಯಲ್ಲಿ ಪ್ರಕಟವದ ಈ "ಸ್ವಚ್ಚಂದ ಕಾವ್ಯದೊಂದಿಗೆ ಹರಿದ ಸ್ವಚ್ಚಂದ ರೇಖೆಗಳು" ಎಂಬ ಲೇಖನದಲ್ಲಿ ವಾಸುದೇವರವರ ಕಲಾಕೃತಿಗಳಲ್ಲಿ ಬಳಸಿಕೊಂಡಿರುವ ವಿಶಿಷ್ಟ ರೀತಿಯ ಅಭಿವ್ಯಕ್ತಿಗಳು ರೇಖೆಗಳಿಂದ ಮೈಗೂಡಿಸಿಕೊಂಡ ಕಲಾಕೃತಿಗಳು. ದಿ.ರಾಮಾನೂಜನ್‌ರವರ ಕಾವ್ಯಗಳಿಗೆ ರೇಖಾ ಸ್ಪರ್ಶತೆಯ ರಚನೆಯ ಅಭಿವ್ಯಕ್ತಿಯ ಕುರಿತಾಗಿ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಮೈಸೂರು ನಗರದ ಹಳೇ ಅಗ್ರಹಾರದ ಕಲೆಯ ವಾತಾವರಣವಿದ್ದ ಮನೆಯಲ್ಲಿ ಹುಟ್ಟಿದ ವಾಸುದೇವ್ ಆ ನಗರದ ಪರಿಸರ, ಮದರಾಸು ಕಲಾಶಾಲೆಯ ಸಂದರ್ಭದಲ್ಲಿ ಪ್ರಾನ್ಸ್‌ನ ನ್ಯೂಟನ್ ಸೌಝಾ ಹಾಗೂ ಫಣಿಕರ್‌ರವರುಗಳ ಸೃಷ್ಟಿ ಹಾಗೂ ನ್ಯೂಟನ್ ಸೌಝಾ ಹಾಗೂ ಫಣಿಕರ್‌ರವರುಗಳ ಸೃಷ್ಟಿ ಹಾಗೂ ದೃಷ್ಟಿಗಳಿಂದ ಪ್ರಭಾವಿತರಾಗಿ ಜನಪದೀಯ ಸತ್ವಗಳನ್ನು ಸಮಕಾಲೀನವಾಗಿ ದುಡಿಸಿಕೊಳ್ಳುವ ಸೃಷ್ಟಿಜನಸೀಲ ದೃಷ್ಟಿಯನ್ನು ಕಂಡುಕೊಂಡ ಸಾಧ್ಯತೆಗಳು ಇವೆ. ಫಣಿಕರ್‌ರಿಂದ ಬಣ್ಣಗಳ ನಿರ್ವಹಣೆಯ ವಿಶಿಷ್ಟ ಸವಾಲನ್ನು ಎದುರಿಸುವ ಸಾಮರ್ಥ್ಯ ಪಡೆದು ಇಂದು ತಮ್ಮದೇ ಆದ ರೀತಿಯಲ್ಲಿ ಬಣ್ಣಗಳನ್ನು ಸಂಯೋಜಿಸುವ, ನಿರ್ವಹಿಸುವ ನೆಲೆಗಳನ್ನು ಸಾಧಿಸಿರುವವರು. ಕಲ್ಪವೃಕ್ಷ, ವೃಕ್ಷ, ಜೀವವೃಕ್ಷ, ಬದುಕಿನ ಹುಟ್ಟು ಮತ್ತು ಸಾವು ಇತ್ಯಾದಿಗಳ ಸುತ್ತಮುತ್ತ ಬದುಕಿನ ಚೈತನ್ಯ ನೋವುಗಳನ್ನು ಕಂಡುಕೊಂಡ ಚಿತ್ರ, ಶಿಲ್ಪ ಹಾಗೂ ರೇಖಾಚಿತ್ರಗಳಲ್ಲೂ ಆ ಅನಾಭವಗಳನ್ನು ತುಂಬಿದವರು. ಅವರ ರೇಖಾಚಿತ್ರಗಳ ವೈವಿಧ್ಯತೆಗೆ ಅವುಗಳನ್ನು ಸ್ವಚ್ಛಂದವಾಗಿ ಕೊಂಡೊಯ್ದು ಅವರ ಅಭಿವ್ಯಕ್ತಿಯ ಕುತೂಹಲ ಕಾರಣ, ಬೇಂದ್ರೆ, ಅಡಿಗ, ರಾಮಾನುಜನ್‌ರವರುಗಳ ಕಾವ್ಯಕ್ಕೆ ಅವರ ರೇಖೆಗಳು ಸ್ಪಂಧಿಸಿದ್ದು ನಮ್ಮ ಕಲೆಯ ಸಂದರ್ಭದಲ್ಲಿ ಅಪರೂಪ, ಬೇಂದ್ರೆಯವರ 'ಕಲ್ಪವೃಕ್ಷ ವೃಂದಾವನಂಗಳಲಿ ಹೇಗೋ ಹೊಕ್ಕು ಬಂದೆ, ಅಲ್ಲ ಎಚ್ಚರವು ಅಲ್ಲ ನಿದ್ರೆಯೂ' ಎಂಬ ಕವನಕ್ಕೆ ರಾಮಾನುಜನ್‌ರ 'ಹೊಕ್ಕಳಲ್ಲಿ ಹೂವಿಲ್ಲ' ಕೃತಿಯ ಎರಡನೆಯ ಮುದ್ರಣಕ್ಕೆ ರೇಖಿಸಿ ಕೊಟ್ಟಿರುವ ಹೊದಿಕೆಯ ಚಿತ್ರವು ರಾಮಾನುಜರ ಕಾವ್ಯದ ಸಾಲುಗಳನ್ನು ತನ್ನಲ್ಲೇ ಅರಗಿಸಿಕೊಳ್ಳಲು ಮಾಡಿರುವ ಗಮನಾರ್ಹ ಪ್ರಯತ್ನ.

ದಿ.ರಾಮಾನುಜನರ ನೆನಪಿಗೆ A tribute to Ramanujan ಶೀರ್ಷಿಕೆಯ ಅಡಿ ಹತ್ತಾರು ರೇಖಾಚಿತ್ರಗಳ ಪ್ರದರ್ಶನವು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ಜುಲೈ ೧೪-೧೫-೧೯೯೫ ರವರೆಗೆ ನಡೆಯಿತು. ಪೂರ್ವದಲ್ಲಿ "The Line" ರೇಖಾಚಿತ್ರ ಪ್ರದರ್ಶನ ೧೯೯೦ರಲ್ಲಿ ಮೂಡಿಬಂದಿದ್ದು, ಬೇಂದ್ರೆಯವರ ಕಾವ್ಯಕ್ಕೆ ರಚಿಸಲಾಗಿತ್ತು ಪ್ರದರ್ಶನಗೊಂಡಿದ್ದವು. ರಾಮಾನುಜನರ ಕಾವ್ಯವನ್ನು ದುಡಿಸಿಕೊಂಡ ಈ ರೇಖಾಚಿತ್ರಗಳಲ್ಲಿ ಕೋಮಲತೆಯಿದ್ದು; ಕಾವ್ಯದ ಸ್ವಚ್ಛಂದ ಲಯದ ಅನುಭವವಾಗುತ್ತದೆ. ಪ್ರಿಮಿಟಿವ್(ಆದಿಮ) ಜನಪದೀಯ ಮತ್ತು ವಾಕಳ ಚಿತ್ರಕಲೆಯ ಏನ್ನತ ಮುಗ್ಧತೆಗಳನ್ನು ತಮ್ಮ ರೇಖೆ ರೂಪದಲ್ಲಿ ತುಂಬಿಕೊಂಡೆ ರಚನೆ ಮಾಡಿದ್ದಾರೆ. ಅಲ್ಲದೇ

ಅವರ ಉಬ್ಬುಶಿಲ್ಪ(Relife) ಹಾಗೂ ವರ್ಣಚಿತ್ರಗಳಲ್ಲಿ ಟ್ರೇಡ್ ಮಾರ್ಕ್‌ಗಳಂತೆ ಸೃಷ್ಟಿಯ ಜೀವಸಂಕುಲದ ಜಾನಪದೀಯ ರೂಪಗಳೂ, ವಿಜಯನಗರದ ಅರಸರ ಆಳ್ವಿಕೆಯ ಕಾಲದ ನಾಯಕರ ಭಿತ್ತಿಚಿತ್ರ ಕಲೆಯಲ್ಲಿ ಕಾಣುವ ಸರಳೀಕೃತ ರೇಖೆಗಳ ನದಿ–ಮೀನುಗಳ ಕಲ್ಪನೆಗಳು, ಧೂಳಿನ ಬಿಂದುಗಳ ಸಮೂಹ, ಜನಪದ ಹುಳುವಿನ ಪಾದಗಳಿಂಥ ನವಿಲುಗರಿಯ ಕೋಮಲತೆಯಂಥ ರೇಖಾ ತುಣುಕುಗಳು, ಹಕ್ಕಿ ಹಾಡಿನ, ಗಿಡ, ಮರ, ಬೆಟ್ಟ, ಪ್ರಾಣಿ, ಮನುಷ್ಯನ ರೂಪಗಳು ರಾಮಾನುಜನರ ಅಕ್ಷರಗಳು ಸ್ಥಾನದಲ್ಲಿ ಹಲವು ಕೃತಿಗಳ್ಲಲಿ ತುಂಬಿಕೊಂಡಿವೆ. ರೇಖಾಚಿತ್ರಗಳ ಪಕ್ಕದಲ್ಲೇ ಕವನಗಳನ್ನು ಪ್ರದರ್ಶಿಸಿದ್ದುದು ವೀಕ್ಷಣಕರು ಅದನ್ನು ಚಿತ್ರಗಳಲ್ಲಿ ಹುಡುಕುವ ಕಣ್ಣ–ಮನಸ್ಸುಗಳ ನಡುವೆ ಆ ಕ್ಷಣಕ್ಕೆ, ಹುಡುಕಾಟದ ಗೊಂದಲ ಉಂಟಾಗುವಂತಿದೆ. ಕನ್ನಡ ವರ್ಣಮಾಲೆಯ ಅಕ್ಷರಗಳನ್ನು, ಅಂಕಿ ಸಂಖ್ಯೆಗಳನ್ನು, ಅವುಗಳನ್ನು ಓದಲಾಗದಂತೆ ಬಿಟ್ಟು ಸಂಯೋಜನೆಗೆ, ರೇಖೆಗಳ ಮೈವಳಿಕಾ ರೂಪಗಳಂತೆ ದುಡಿಸಿಕೊಳ್ಳುತ್ತಾರೆ. ಈ ಎಲ್ಲವುಗಳ ಮಧ್ಯೆ ಕಂಡಿದ್ದು 'Sculpture' 'Self Potrait' ವಿಭಿನ್ನವಾಗಿ ರೇಖಿಸಿಕೊಂಡಿವೆ. Self Portrait ಕೃತಿಯಲ್ಲಂತೂ ವಾಸುದೇವ್ ತಮ್ಮ ಜಾತಕವನ್ನೇ ನೋಡಿಕೊಂಡಿದ್ದಾರೆ; ಬೇರುಗಳನ್ನು ಅನನ್ಯವಾಗಿ ತಡಕಾಡಿದ್ದಾರೆ ಎಂದು ಹೇಳುತ್ತ.

ಹಾಗೆಯೇ ಅವರ ಕವನದಲ್ಲಿ ಹೆಚ್ಚು ಚರ್ಚಿತ ಮತ್ತು ಪ್ರಸ್ತುತವಾದ ಅಂಗಲದ ಹುಳುವಿನ ಪರಕಾಯ ಪ್ರವೇಶ ಹಾಗೂ ಬಣ್ಣ, ಅವರ ರೇಖಾಚಿತ್ರಗಳ ನಡುವೆ ಇಲ್ಲದಿರುವುದು ಗಮನಾರ್ಹ. ಕೆಲವು ಕವನಗಳ ಪ್ರತಿಕ್ರಿಯೆಗಳನ್ನು ಅವರು ಬಣ್ಣಗಳಲ್ಲಿ ಮೂಡಿಸಿದ್ದಿದರೆ ಅವು ಬೀರುತ್ತಿದ್ದ ಪ್ರಭಾವ, ನೀಡಬಹುದಾಗಿದ್ದ ಅನುಭವ ತ್ರೀವತೆ ಇನ್ನೂ ಬೇರೆಯೇ ಆಗಿರುವುದು ಎಂಬ ಆಶಯ ಭಾವನೆ ವ್ಯಕ್ತಪಡಿಸಿದ್ದಾರೆ ವಿಮರ್ಶಕರು. ಆದರೂ ಪ್ರಸ್ತುತ ರಾಮಾನುಜನ್‌ರ ಸ್ವಚ್ಛಂದ ಸಾಲುಗಳಿಗೆ ಸ್ವಚ್ಛಂದ ರೇಖೆಗಳ ಮೂಲಕ ನಮ್ಮ ಪ್ರತಿಕ್ರಿಯೆಯನ್ನು ನಿರ್ವಹಿಸಿರುವುದು ಸೂಕ್ತವಾಗಿದೆ ಎಂಬ ಮಾತು ಸಮಾಧಾನದ ಅಭಿಪ್ರಾಯವನ್ನು ಸೂಚಿಸಲಾಗಿದೆ.

**ಸಮಕಾಲೀನ ಸಂವೇದನೆಗೆ ಪೂರಕವಾಗಿ ಮಿಶ್ರ ಮಾಧ್ಯಮ:** ೧೯೮೦ ರಲ್ಲಿ ಸಂಕುಲ ದ್ವೈಮಾಸಿಕ ಪತ್ರಿಕೆಯಲ್ಲಿ ಪ್ರಕಟವದ "ಸಮಕಾಲೀನ ಸಂವೇದನೆಗೆ ಪೂರಕವಾಗಿ ಮಿಶ್ರ ಮಾಧ್ಯಮ" ಎಂಬ ಲೇಖನದಲ್ಲಿ ಸಿ.ಡೆಗ್ಲಸ್, ಸುರೇಖ ಹಾಗೂ ನಟರಾಜ ಶರ್ಮರಂಥವರ ಅಭಿವ್ಯಕ್ತಿಗಳು ಪ್ರದರ್ಶನಗೊಂಡಿರುವ ಕುರಿತು ಇಲ್ಲಿ ಪ್ರಸ್ತಾಪಿಸಲಾಗಿದೆ.

ವಾಣಿಜ್ಯ ಉದ್ದೇಶದ ನೆಲೆಯ ಗ್ಯಾಲರಿಗಳು ಪ್ರಯೋಜಿಸುವ ಕಮಾಡಿಟಿಯಂಥ ಕಲಾಕೃತಿಗಳ ನಡುವೆಯೇ, ಗ್ಯಾಲರಿಗಳ ಒಳ ವ್ಯವಹಾರಗಳ ಮಿತಿ–ಅಡೆತಡೆಗಳ ನಡುವೆಯೇ ಕಲಾವಿದರ ಅಭಿವ್ಯಕ್ತಿಗಳು ಕಾಣಿಸಿಕೊಳ್ಳಲು ಕಾರಣವಾಗುವುದು ಗ್ಯಾಲರಿಗಳ ಮೂಲ ಉದ್ದೇಶಗಳ ಹಿಂದಿನ ಪ್ರಾಮಾಣಿಕತೆ; ಕಲೆಯನ್ನು ಉತ್ತೇಜಿಸುವ ಉತ್ಸುಕತೆಯಿಂದ ಆಗಸ್ಟ್ ೧೬–೨೭, ೧೯೮೬ ರಂದು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ಪ್ರದರ್ಶಿಸಲ್ಪಟ್ಟವು.

ಸಿ.ಡಗ್ಲಸ್ ಅಪರೂಪದ ಕಲಾವಿದರಲ್ಲೊಬ್ಬರು, ಪ್ರಾನ್ಸಿಸ್ಕೊ ಕ್ಲೆಮೆಂಟಿ, ಹೇಳುವಂತೆ ಕಲಾವಿದನು ಸತ್ಯ, ಅಸ್ತಿತ್ವ ಮತ್ತು ನೈಜತೆಗಳೊಂದಿಗೆ ಮುಖಾಮುಖಿಯಾಗಿ ಅಭಿವ್ಯಕ್ತಿಸಬೇಕೆಂಬ ದೃಷ್ಟಿಯನ್ನು ಅನುಸರಿಸುತ್ತಿರುವ ಸಿ.ಡಗ್ಲೆಸ್ ಎಂದು ಹೇಳುವ ಮಾತು ಮೇಲಿನ ಹೇಳಿಕೆಗೆ ನೈಜತೆಯಾಗಿದೆ. ಸಿ.ಎಸ್.ಫಣಿಕರ್‌ರವರ ರೂಪಗಳ ಮಾಂತ್ರಿಕತೆ, ರಾಮಾನುಜಮ್‌ರ ಪೌರಾಣಿಕ ವಾಸ್ತುಶಿಲ್ಪತೆಗಳನ್ನು ತಮ್ಮ ಕೃತಿಗಳ ಅನನ್ಯ ರೂಪಕಲ್ಪನೆಯ ನಿರ್ವಹಣೆಗೆ ಮೂಲ ಬೇರುಗಳಾಗಿ ಕಂಡುಕೊಂಡವರು, ಕಲಿಕೆಯಿಂದ ಬಣ್ಣಗಳು ಚಿತ್ರಕತೆಯ, ಮಾಂತ್ರಿಕ ಶಕ್ತಿಗೆ ಕಾರಣವಾದರೂ ಅವೇ ಎಲ್ಲವೂ ಅಲ್ಲ" ಎಂಬ ದೃಷ್ಟಿ ತಳೆದಂತೆ ಬಣ್ಣಗಳನ್ನು ಹಿನ್ನೆಲೆಗೆ ತಳ್ಳಿ ಬೆಳಕು ಮತ್ತು ಕತ್ತಲೆಗಳ ಉಸಿರಾಟಕ್ಕೆ ತಮ್ಮ ಕೃತಿಗಳಲ್ಲಿ ಅನುವು ಮಾಡಿಕೊಂಡವರು. ಶತಮಾನಗಳ ಹಿಂದಿನ ಭಿತ್ತಿ ಚಿತ್ರ ಹಾಗೂ ಧಾರ್ಮಿಕ ಉದ್ದೇಶದ ವರ್ಣಚಿತ್ರಗಳಲ್ಲಿ ಪ್ರಧಾನವಾಗಿ ಕಾಣುವ ಕಂದು, ಕೆಂಪು, ಕಾವಿ, ಚಿನ್ನದ ಬಣ್ಣದ ಹಳದಿ, ಕೆಲವೊಮ್ಮೆ ಕೇಸರಿ ಬಣ್ಣಗಳ ವಿವಿಧ ವರ್ಣಛಾಯೆಗಳು ಅವಕಾಶದಲ್ಲಿ ಆವರಿಸಿಕೊಂಡಿವೆ. ಮಣ್ಣಿನ ವಾಸನೆ ಮರುಕಳಿಸುವಂಥ ಈ ಕೃತಿಗಳಲ್ಲಿ ಕಾಗದದ ಅವಕಾಶ(Spase)ವನ್ನು ಒದ್ದೆ ಮಾಡಿ ಅಲ್ಲಲ್ಲಿ ತಿರುಚಿ, ಮಡಚಿ, ಕೆಲವೆಡೆ ಹರಿದು (ಮತ್ತೆ ಕೆಲವೆಡೆ ಅಂಟಿಸಿ) ಕೆಂಪು ಮಣ್ಣು ಮತ್ತು ಮರಳಿನ ಕಣಗಳನ್ನು ಅಂಟಿನೊಂದಿಗೆ ಮಿಶ್ರಮಾಡಿ ದುಡಿಸಿಕೊಳ್ಳಲಾಗಿದೆ. ಇದ್ದಿಲಿನ ಕಪ್ಪು, ಆಕ್ರಲಿಕ್ ಬಿಳುಪು ಹೊಲಿದ ಕಾಗದದ ತುಣುಕುಗಳು, ಒಟ್ಟಾರೆ ಹೊಸ ಎಕ್ಸಪ್ರೆಷನಿಸಂ ನಿರ್ವಹಣೆಗೆ ವಿರುದ್ಧವೆಂಬ ಉದ್ದೇಶ ಅವರ ಸೆರಾಮಿಕ್ ಶಿಲ್ಪಗಳು ಸಾಮಾನ್ಯ ನೆಲೆಯವು ಎಂಬುದು ವಿಮರ್ಶಕರ ಅಭಿಮತ.

ನಮ್ಮ ಸಮಕಾಲೀನ ಸಂವೇದನೆಯ ತೀವ್ರತೆಗೆ ಮಿಶ್ರ ಮಾಧ್ಯಮ ಪೂರಕವಾಗಬಲ್ಲದು ಹೇಗೆ ಎಂಬುದಕ್ಕೆ ಮತ್ತೊಂದು ಉದಾಹರಣೆಯೆಂಬಂತೆ ಸುರೇಖಾರವರ ಕೃತಿಗಳು ಮೂಡಿಬಂದಿದ್ದು ಅವು ಬೆಂಗಳೂರಿನ ಕ್ರಿಂಸನ್ ಗ್ಯಾಲರಿಯಲಿ ಸೆಪ್ಟೆಂಬರ್ ೨೩, ಅಕ್ಟೋಬರ್ ೧, ೧೯೯೬ ರಿಂದ ಇಮೇಜಸ್ ಗ್ಯಾಲರಿ ಸಹಯೋಗದೊಂದಿಗೆ ಪ್ರದರ್ಶಿಸಲ್ಪಟ್ಟವು. ನಮ್ಮ(ಲೇಖಕರು) ಸಂದರ್ಭದ ನಗರೀಕರಣ, ಉಸಿರುಗಟ್ಟಿ, ಉಸಿರುಗಟ್ಟಿಸುವ ಹಿನ್ನೆಲೆಯಲ್ಲಿ ಮಾನವೀಯ ಭಾವ ಅನುಕಂಪಗಳಿಗೆ ಒದಗಿರುವ ಅಪಾಯವನ್ನು ಈ ಕೃತಿಗಳು ಅನುಭವಕ್ಕೆ ತರುತ್ತವೆ. ಮಣ್ಣಿಗೆ ಹತ್ತಿರವಾದ ಸುರೇಖಾರವರ ಮಿಶ್ರ ಮಾಧ್ಯಮವು ಮಹಾನಗರವೊಂದರ ಕಟ್ಟುವಿಕೆಯು(?) ಪಡೆದುಕೊಳ್ಳುವಲ್ಲಿ, ಕಳೆದುಕೊಳ್ಳುವುದನ್ನು ಆಕರ್ಷಕವಾಗಿ ನಿರ್ವಹಿಸಲ್ಪಟ್ಟಿದೆ. ಮಣ್ಣು, ಇಟ್ಟಿಗೆ, ಸಿಮೆಂಟ್ ಇತ್ಯಾದಿ ಬಣ್ಣಗಳೊಂದಿಗೆ ತಮ್ಮ ಬಣ್ಣಗಳ ಆಳ ಹರವುಗಳನ್ನು ಕಂಡುಕೊಳ್ಳುವ ಜನರು ಸಹಜವಾಗಿಯೇ ಬದುಕಿನಲ್ಲಿ ಸೋತು ಸುಣ್ಣವಾಗಿ, ಈ ಎಲ್ಲವುಗಳಲ್ಲೂ ಒಂದಾಗಿ ಬಿಡುವ ತಮ್ಮ ರೂಪ, ವ್ಯಕ್ತಿತ್ವಗಳನ್ನು ಕಳೆದುಕೊಂಡು ಇಲ್ಲವಾಗಿಬಿಡುವ ಈ ಕೃತಿಗಳಲ್ಲಿ ಅಪರೂಪಕ್ಕೆ ಎಂಬಂತೆ ಅಲ್ಲೊಮ್ಮೆ ಇಲ್ಲೊಮ್ಮೆ ಅಸ್ಪಷ್ಟವಾಗಿ ತಮ್ಮ ಅಸ್ತಿತ್ವದ ಉಸಿರಾಟದ ರೂಪಗಳ ಅನುಭವ ತಂದರೂ ಇಡೀ ಕೃತಿಗಳೇ ಅವರ ರಕ್ತ ಮಾಂಶಗಳಿಂದ ಮೂಡಿಬಂದಂತಿವೆ.

ಸುರೇಖಾರವರ ಕೆಲವು ಕೃತಿಗಳ ಈ ಗೋಡೆಯಂಥ ಕಲ್ಪನೆ, ಮಿಶ್ರ ಮಾಧ್ಯಮದಲ್ಲಿ ನಿರ್ವಹಿಸಲ್ಪಟ್ಟಿರುವುದರ ಹಿಂದೆ ಸಾಕಷ್ಟು ಅಳಿದ, ತೀವ್ರ ಸಂವೇದನೆಯ ಸೆಳೆಕುಗಳಿವೆ. ಮುಖ್ಯವಾಗಿ ಪೇಪರ್ ಪಲ್ಪ ಮತ್ತೆ ಕೆಲವು ಕೃತಿಗಳಲ್ಲಿ ಉತ್ತಮವಾಗಿ ದುಡಿಸಿಕೊಳ್ಳಲ್ಪಟ್ಟಿದೆ. ಕೆಲವೆಡೆ ಸ್ತ್ರೀ ಸಂವೇದನೆಗೆ ಸಹಜವಾಗಿ ಸೂಕ್ಷ್ಮ ಕುಶಲತೆಯ ರೇಖಾ ರೂಪಗಳೂ ಕಾಣಿಸಿಕೊಂಡಿವೆ.

**ಸಮಕಾಲೀನ ರೊಮ್ಯಾಂಟಿಕ್ ಸಂವೇದನೆ:** ಅಕಾಡೆಮಿಕ್ ಅಧ್ಯಯನಶೀಲತೆ ಕಲಾವಿದನೊಬ್ಬನ ಅಥವಾ ಶಿಲ್ಪಿಯೊಬ್ಬನ ಸೃಜನಶೀಲ ಅಭಿವ್ಯಕ್ತಿಗೆ ಹೇಗೆ ಪೂರಕವಾಗಬಲ್ಲದೆಂಬುದಕ್ಕೆ ಉದಾಹರಣೆಯಂಥ ಶಿಲ್ಪಗಳ ಪ್ರದರ್ಶನ ಕ್ರಿಮಾಸ್‌ನ್ ಗ್ಯಾಲರಿಯಲ್ಲಿ ಸೆಪ್ಟೆಂಬರ್ ೬-೨೧, ೧೯೯೬ರೆಂದು ನಡೆಯಿತು. ನಮ್ಮ ದೃಶ್ಯಕಲೆಯ ಅನನ್ಯ ಸಾಧ್ಯತೆಗಳು ಗಮನಾರ್ಹ ರೀತಿಯಲ್ಲಿ ಕಾಣಿಸಿಕೊಳ್ಳುತ್ತಿರುವ ಕರ್ನಾಟಕದ ಸಂದರ್ಭದಲ್ಲಿ ರೋಮ್ಯಾಂಟಿಕ್ ಆಶವಾದ ರೂಪ ನಿರ್ವಹಣೆಗಳ -ಆಶೀಷ್ ದಾಸ್‌ರ ಶಿಲ್ಪಗಳು ವಿಶಿಷ್ಟ ನಿಲುವೊಂದನ್ನು ತೋರುತ್ತಿವೆ. ಹಾಗೆಯೇ ಪುಷ್ಪಮಾಲಾ ಟೆರಾಕೋಟಾ ಶಿಲ್ಪಗಳಲ್ಲಿನ ಮುಖವಾಡಗಳ ನಿರ್ವಹಣೆ ನೆನಪಿಸುವಂತಿವೆ.

ಒಟ್ಟಾರೆ ಈ ಎಲ್ಲ ಕಲಾಕೃತಿಗಳಲ್ಲಿ ಆಯಾ ಕಾಲಮಾನಕ್ಕೆ ತಕ್ಕಂತೆ ಅನುಭವ ನಿರ್ವಹಣೆಯಿಂದ ಮೂಡಿಬಂದಿರುವಂತವಾಗಿವೆ ಎಂದು ಹೇಳಬಹುದು.

**ಕರ್ನಾಟಕ ಕಲಾವಿದರ ಸಂವೇದನೆಯ ನೆಲೆಗಳು:** ೧೯೯೭ರಲ್ಲಿ ಸಂಕುಲ ದ್ವೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ "ಕರ್ನಾಟಕ ಕಲಾವಿದರ ಸಂವೇದನೆಯ ನೆಲೆಗಳು" ಎಂಬ ಲೇಖನದಲ್ಲಿ ೧೯೯೭ರ ಆಗಸ್ಟ್ ೨೮ ರಂದು ಗುಲ್ಬರ್ಗಾದ 'ದಿ ಐಡಿಯಲ್ ಫೈನ್ ಆರ್ಟ್ಸ್ ಇನ್‌ಸ್ಟಟ್ಯೋಟ್‌ನಲ್ಲಿ ವ್ಯವಸ್ಥೆಯಾಗಿದ್ದ ಭಾರತ ಸ್ವಾತಂತ್ರ್ಯದ ಸುವರ್ಣ ಮಹೋತ್ಸವ ವರ್ಷದ ಕಲಾವಿಚಾರ ಸಂಕಿರಣದಲ್ಲಿ ಮಾಡಿದ ಭಾಷಣದ ಮುಖ್ಯ ಅಂಶಗಳು ಇಲ್ಲಿವೆ.

ಕಲಾವಿದನೊಬ್ಬನ ಸೃಷ್ಟಿ ಅವನ ಸಮಕಾಲೀನ ಸಾಮಾಜಿಕ ಸಾಂಸ್ಕೃತಿಕ ರೂಪಗಳನ್ನು ಮೀರಿ ಹೊಸತನದಿಂದ ಮೂಡಿರಬಹುದು. ಈ ಸೃಷ್ಟಿಸುವ ಪ್ರಕ್ರಿಯೆ ಆ ಕಲಾವಿದನ ಸಂದರ್ಭದಲ್ಲಿ ಅವನು ಅನುಭವಿಸಿ ಗ್ರಹಿಸಿರುವ ಆ ಹಿಂದಿನ ದೃಶ್ಯ ಭಾಷೆಯ ಭಾರ ಮತ್ತು ರೂಪದ ಹೊರೆಗಳಿಂದ ಹೊರಬರುವುದು ಕಷ್ಟ ಸಾಧ್ಯವಾದುದು. ಈ ನೆಲೆಯ ಅಭಿವ್ಯಕ್ತಿಯಲ್ಲಿ 'ಭೂತಕಾಲೀನ' ದೃಶ್ಯ ಭಾಷೆಗೆ ಸಮಕಾಲೀನತೆಯ ರೂಪ, ಸಂವೇದನೆಗಳ ಹೊಳಪು ನೀಡಿ ಅನನ್ಯತೆಯನ್ನು ತಂದುಕೊಡಬಹುದಾಗಿದೆ. ಇಂಥ ಹತ್ತು ಹಲವು ಸಾಧ್ಯತೆಗಳನ್ನು ನಮ್ಮ ಸಮಕಾಲೀನರು ಸಾಧಿಸಿದ್ದಾರೆ. ಹಲವಾರು ಈ ಅನ್ವೇಷಣೆಯ ಹಾದಿಯಲ್ಲಿ ದಿಟ್ಟ ಹೆಜ್ಜೆಗಳನ್ನು ಇಡಲಾರಂಭಿಸಿದ್ದಾರೆ.

ಕರ್ನಾಟಕದ ಸಮಕಾಲೀನ ಕಲೆಯ(ಚಿತ್ರ, ಶಿಲ್ಪ, ಪ್ರಿಂಟ್) ಬೇರುಗಳನ್ನು ಸ್ವಾತಂತ್ರ್ಯ ಪೂರ್ವದಿಂದಲೇ ಹುಡುಕಿಕೊಳ್ಳಬಹುದು. ಆದರೆ ಅದು ನಿರ್ದಿಷ್ಟ ಜೀವಧ್ವನಿಯನ್ನು ಕಂಡುಕೊಂಡದ್ದು ಸ್ವಾತಂತ್ರ್ಯ ನಂತರವೇ. ಆಧುನಿಕತೆಯನ್ನು ನಮ್ಮ ಕಲೆಗೆ ತಂದಿತ್ತ ಬ್ರಿಟೀಷ್ ಕಲಾಶಾಲೆಗಳಲ್ಲಿ

ಕಲಿಯದ ಆದರೆ ಪರೋಕ್ಷವಾಗಿ ಪಶ್ಚಿಮದ ಶೈಲಿ–ತಂತ್ರ, ಮಾಧ್ಯಮಗಳನ್ನು ಸಶಕ್ತರಾಗಿ ದುಡಿಸಿಕೊಂಡ ರವಿವರ್ಮನ ನಂತರ ಕಲಾಶಾಲೆಗಳಲ್ಲಿ ಕಲಿತ ಪುಣೆಯ ಜಿ.ಕೆ.ಮ್ಹಾತ್ರೆ, ಮೊದಲಾದವರ ಸೃಷ್ಟಿಗಳನ್ನು ಕಂಡು, ಅನುಭವಿಸಿ ತಮ್ಮದೇ ಆದ ಹಾದಿಗಳನ್ನು ಅರಸಿ ಹೊರಟವರು ಹಲವರು.

೧೯೮೫ ರಿಂದ ೧೯೯೫ರ ನಡುವೆ ನಮ್ಮ ಸಮಕಾಲೀನ ಕಲಾರಂಗ ಹಲವು ವೈಶಿಷ್ಟ್ಯಗಳನ್ನು ಸಾಧಿಸಿದೆ. ಹಲವಾರು ೧೯೮೫ರ ರೊಮ್ಯಾಂಟಿಕ್ ಸಂವೇದನೆಯನ್ನು ಮೀರಿ ಸಮಕಾಲೀನವಾಗಿ ಅಭಿವ್ಯಕ್ತಿಸಿದರು. ವಾಸುದೇವರು ಜನಪದೀಯ ಸತ್ವಗಳಿಂದ ಬಿಡುಗಡೆ ಹೊಂದಿ, ಸಮಕಾಲೀನ ದೃಷ್ಟಿ ಚಿಂತನೆಗಳಿಂದ ಮತ್ತು ಎಕ್ಸಪ್ರೇಷನಿಷ್ಟ್ ನಿರ್ವಹಣೆಯನ್ನು ಮಾಡಿಸಿಕೊಂಡಿದ್ದಾರೆ. ೧೯೪೭ ರಾಜ್ಯದಲ್ಲಿ ಸಂಪೂರ್ಣ ಸ್ವಾತಂತ್ರ್ಯದ ಆಂದೋಲನ ಕಂಡ ವರ್ಷ, ಸಾಹಿತ್ಯ–ನಾಟಕ ರಂಗಗಳಂತೆ ಚಿತ್ರ ಕಲಾವಿದರ ಮೇಲೆ ಅಷ್ಟೇನೂ ಪ್ರಭಾವ ಆ ಕ್ಷಣಕ್ಕೆ ಬೀರಲಿಲ್ಲ. ಆದರೆ ಚಿ.ಸು.ಕೃಷ್ಣಶೆಟ್ಟಿ, ಚಳುವಳೀಯಲ್ಲಿ ಭಾಗವಹಿಸಿ ವಿಶಿಷ್ಟ ಸಂವೇದನಾಶೀಲರಾಗಿ ಇಂದಿಗೂ ಚಿತ್ರಿಸುತ್ತಿದ್ದಾರೆ. ಈ ಸಂದರ್ಭದಲ್ಲಿ ಕಲೆಯನ್ನು ರಾಜಕೀಯ, ಸಾಮಾಜಿಕ, ಬದಲಾವಣೆ, ಚಳುವಳಿ ಇತ್ಯಾದಿಗಳಿಗೆ ದುಡಿಸಿಕೊಂಡಿರುವುದು ಈ ಲೇಖನದಲ್ಲಿ ಕಂಡುಬರುವ ಪ್ರಮುಖ ಅಂಶವಾಗಿದೆ.

೧೯೯೦ ರಲ್ಲಿ ನಮ್ಮಲ್ಲಿ ಮೊದಲ ಬಾರಿಗೆ ದಲಿತ ಹಾಗೂ ತುಳಿತಕ್ಕೊಳಗಾದ ಸಂವೇದನೆ ಸೂಕ್ಷ್ಮವಾಗಿ ಹಲವರ ಕೃತಿಗಳಲ್ಲಿ ಕಾಣಿಸಿಕೊಂಡಿತು. ಈ ಸೂಕ್ಷ್ಮ ಸಂವೇದನೆ ಮೂಲತಃ ಒರಟಾಗಿ ಕಾಣಿಸಿಕೊಳ್ಳಬೇಕಿದ್ದುದು ನಯವಾಗಿ ಕಾಣಿಸಿಕೊಂಡಿರುವುದು ಗಮನಾರ್ಹ. ಎಂ.ಜಿ.ದೊಡ್ಡ ವಾನಿಯವರ ಇತ್ತೀಚಿನ ಹಲವು ಕೃತಿಗಳನ್ನು ಇಲ್ಲಿ ನೆನಪು ಮಾಡಿಕೊಳ್ಳಬಹುದು.

೧೯೯೬–೯೭ರ ನಡುವೆ ಗುಲ್ಬರ್ಗಾ ಹಾಗೂ ಬೆಂಗಳೂರುಗಳಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಶ್ರಯದಲ್ಲಿ ದಿ ಐಡಿಯನ್ ಫೈನ್ ಆರ್ಟ್ ಇನ್ಸ್‌ಟಿಟ್ಯೂಟ್ ಮತ್ತು ಬೆಂಗಳೂರಿನ ಕೇಂದ್ರವೊಂದರಲ್ಲಿ ಪರಿಶಿಷ್ಟ ಕಲಾವಿದರ ಕಲಾಶಿಬಿರಗಳಲ್ಲಿ ಪಾಲ್ಗೊಂಡಿದ್ದ ಬಹುತೇಕ ಕಲಾವಿದರು ಪಶ್ಚಿಮದ ಪ್ರಭಾವಗಳನ್ನಾಡಿ ಅಭಿವ್ಯಕ್ತಿಸಿದರೂ, ಆ ಪ್ರಭಾವಗಳನ್ನು ತಮ್ಮ ಅಭಿವ್ಯಕ್ತಿಗೆ ಸಮಕಾಲೀನವಾಗಿ ನೆರವಾಗಿಸಿಕೊಂಡು ಡಿ.ಎಚ್.ಸುರೇಶ್, ಟಿ. ಕುಮಾರಸ್ವಾಮಿ, ರಮೇಶ್ ತೆರದಾಳ್ ಮೊದಲಾದವರನ್ನು ಹೆಸರಿಸಬಹುದು. ಇಲ್ಲಿ ಅವರ ರೂಪಗಳ ಒರಟು ವಿಕೃತಿಗಳು ಸುಂದರವಾಗಿ ಮೂಡಿದೆ. ಅಭಿವ್ಯಕ್ತಿಯ ತೀವ್ರತೆಯೂ ಇದೆ. ಇಲ್ಲಿ "one does not learn to make art; one create it" ಎಂಬ ಇಂದಿನ ಕಲೆಯ ವ್ಯಾಖ್ಯಾನವನ್ನು ನೆನೆಪಿಸಿರುವುದು ಅರ್ಥಪೂರ್ಣವಾಗಿದೆ.

ಮಾನಸಿಕ ಪ್ರಕ್ರಿಯೆಯಾದ ಕಲಾಸೃಷ್ಟಿ ಕಲಾಕೃತಿಯನ್ನು ಆಂತರಿಕ ಒತ್ತಡದ ಕಾರಣಕ್ಕಾಗಿ ಸೃಷ್ಟಿಸುವ ಸಂದರ್ಭ. ಆ ಒತ್ತಡಕ್ಕೆ ಪ್ರತಿಕ್ರಿಯಿಸುವಾಗಿನ ಮಾನಸಿಕ ಕ್ರಿಯೆಗಳಿಗೆ ಕಲಾವಿದನ ಗ್ರಹಿಕೆಗಳಿಗೆ, ಈ ಸಂವೇದನೆ(Sensibitiy)ಯು ತೀವ್ರತೆಯನ್ನು ನೀಡುವಂತೆಯೇ ಹೊಸ ರೂಪ, ದೃಷ್ಟಿಗಳನ್ನು ಕಂಡುಕೊಳ್ಳುವಂತೆ ಪ್ರಭಾವಿಸಬಲ್ಲದು. ೧೯೯೨ರಲ್ಲಿ ಕೆ.ಟಿ.ಶಿವಪ್ರಸಾದ್‌ರ ಜನಪದ

ಸಂವೇದನ ದೃಷ್ಟಿಗಳು ಬದಲುಗೊಂಡು ಛಾಯಾಚಿತ್ರ ಬಳಸಿ, ನೈಜಶೈಲಿಯಲ್ಲಿ ಬಣ್ಣ ಹಾಗೇ ನೇರವಾಗಿ ಹರಿಬಿಟ್ಟು, Imposto ತಂತ್ರವನ್ನು ಮೀರಿ ರಚಿಸುತ್ತಿದ್ದು ಇವು, ವ್ಯಕ್ತಿಗಳ ಒಳ ಭಾವ ನೋಟಗಳನ್ನು ನರನಾಡಿಗಳನ್ನು ಕಿತ್ತು ನಮ್ಮ ಮುಂದೆ ಇಟ್ಟಂಥ ತೀವ್ರ ಅನುಭವ ನೀಡುತ್ತದೆ. ಯುಸೂಫ್ ಅರಕ್ಕಲ್‌ರ ಅಭಿವ್ಯಕ್ತಿಗಳಲ್ಲೂ ಸಹ ನಗರೀಕರಣದ ಎಲ್ಲ ವಿಕೃತ, ಅನಿಶ್ಚಿತ ಬದುಕನ್ನು ರೋಮ್ಯಾಂಟಿಕ್ ಆಗಿ ಕಂಡುಕೊಂಡಿವೆ.

ಇನ್ನೂ ಪಶ್ಚಿಮದ ಕಲೆಯ ಮಂಪರಿನಲ್ಲೂ ತಮ್ಮ ತನವನ್ನು ಲೇಪಿಸಲು ಗಮನಾರ್ಹ ರೀತಿಯಲ್ಲಿ ಪ್ರಯತ್ನಿಸುತ್ತಿರುವ ಹಲವು ಕಲಾವಿದರು ಹಲವು ಮೂಲಗಳಿಂದ ಗ್ರಹಿಸಿದ ಪರಸ್ಪರ ವೈರುಧ್ಯಮಯ ಅನುಭವಗಳನ್ನು ನೀಡುವ ಹಳೆಯ, ಹೊಸ ಚಿಂತನೆಗಳನ್ನು ನಮ್ಮ ಹಲವರು ಬಳಸಿಕೊಳ್ಳುತ್ತ, ಒಂದು ಶೈಲಿಯಿಂದ ಮತ್ತೊಂದು ಶೈಲಿಗೆ ಬದಲಾಗುತ್ತಾ ಮಾಧ್ಯಮಗಳನ್ನು ಆಗಾಗ ಉದ್ದೇಶಪೂರ್ವಕವಾಗಿ ಬದಲಿಸುತ್ತ ಅಥವಾ ಮಿಶ್ರಮಾಧ್ಯಮದತ್ತ ಒಲಿಯುತ್ತ, ವಸ್ತು, ರೂಪ, ಕಲ್ಪನೆ ಹಾಗೂ ಶೈಲಿಗಳನ್ನು ಇತರ ಮೂಲಗಳಿಂದ ಪಡೆದೂ ಅತ್ಯಂತ ದಿಟ್ಟ ರೀತಿಯಲ್ಲಿ ಅಭಿವ್ಯಕ್ತಿಸುತ್ತಿರುವುದನ್ನು ಕಾಣುತ್ತೇವೆ.

೧೯೯೫ರ Immaterial Material, ಮಾಕ್ಸ್‌ಮುಲ್ಲರ್ ಭವನದ ಆಶ್ರಮದಲ್ಲಿ ನಡೆದ ಕಲಾ ಪ್ರದರ್ಶನ Silence of Furies & Sarrows: Pages from a burning city ಶೀರ್ಷಿಕೆಯಡಿ ನಡೆದಿತ್ತು. ಇಲ್ಲಿ ದೂರದರ್ಶನದ ಉರ್ದು ವಾರ್ತಾ ಪ್ರಸಾರದ ವಿರುದ್ಧ ಸಿಡಿದೆದ್ದ ಮತೀಯ ಗಲಭೆಯ ಫಲವಾದ ಬೆಂಕಿ–ಬೂದಿಗಳ ಪ್ರದರ್ಶನ, ಪ್ರತಿಷ್ಠಾಪನಾ ಶಿಲ್ಪ(Installetion)ಗಳನ್ನು ಹೊಂದಿತ್ತು. ಚಿತ್ರ–ಶಿಲ್ಪಗಳೆಂದರೆ ಹೀಗೇ ಇರಬೇಕೆಂಬ ಕಲ್ಪನೆಯನ್ನು ಮೀರಿದ ಅಭಿವ್ಯಕ್ತಿಗಳು ಈ ಪ್ರದರ್ಶನದಲ್ಲಿದ್ದವು. ಬೂದಿ, ಇದ್ದಿಲು, ಹುಲ್ಲು, ಮರಳು, ಮಣ್ಣು, ಇಟ್ಟಿಗೆ ಇತ್ಯಾದಿಗಳನ್ನು ಇಲ್ಲಿ ದುಡಿಸಿಕೊಳ್ಳಲಾಗಿತ್ತು. ೧೯೯೩ರಲ್ಲಿ ಶೀಲಾಗೌಡ ಬಣ್ಣಗಳ ಬದಲಿಗೆ ಸಗಣಿಯನ್ನು ಮಾತ್ರ ಬಣ್ಣವಾಗಿ ಬಳಸಿ ಅಭಿವ್ಯಕ್ತಿಸಿದ್ದರು. ಸ್ತ್ರೀ ಸಂವೇದನೆಯ ಶಕ್ತಿಯುತ ಅಭಿವ್ಯಕ್ತಿಗಳವು. ೧೯೮೫ರಲ್ಲೇ ತಮ್ಮ ದಿಟ್ಟ ದೃಷ್ಟಿಯಿಂದ ಕಲಾರಂಗದಲ್ಲಿ ಸುದ್ದಿಯಾಗದ ಸಾವಿತ್ರಿಗಿಂತ ಶೀಲಾ ಸಮರ್ಥವಾಗಿ ಕಲೆಯ ಭಾಷೆಯನ್ನು ಬಳಕೆಕೊಂಡಿದ್ದರು ಎಂದು ಹೇಳಲಾಗುತ್ತದೆ.

ಕಲಾ ಇತಿಹಾಸದಲ್ಲಿ Great artists ಪಟ್ಟಿಯಲ್ಲಿ ಮಹಿಳಾ ಕಲಾವಿದರೇಕಿಲ್ಲ ಎಂಬ ಪ್ರಶ್ನೆಗೆ ಉತ್ತರ ನೀಡುವಮತೆ ಲಲಿತಾ ಶಂಕರ್, ಅರ್ಚನಾ ಹೆಬ್ಬಾರ್, ರೇಣುಕಾ, ಮಾರ್ಕಂಡೆ, ಗಾಯತ್ರಿ ಗೌಡರ್, ಪೂರ್ಣಿಮಾ ಪಾಟೀಲರವರುಗಳು ಹೆಸರು ಕಂಡುಬರುತ್ತದೆ. ೧೯೯೫ರಲ್ಲಿ ಉಮೇಶ್‌ರವರ Earth work ನೆಲಾಕೃತಿಯ ರೂಪುಗೊಂಡಿತು. ಇಲ್ಲಿ ಕಲ್ಪನೆಯ ದ್ವಂದ್ವಗಳ ನಡುವೆಗಳ ನಡುವೆಯೂ ತನ್ನ ರೂಪ, ಕಲ್ಪನೆ, ನಿರ್ವಹಣೆಗಳಿಂದ ತನ್ನ ತನವನ್ನು ಸಾಧಿಸಿತ್ತು.

ನಂತರ ಕಲೆ ಮಾರಾಟದ ಸರಕಾಗಿರುವ ಸಂದರ್ಭದಲ್ಲಿ ಹಲವು ಶೈಲಿ, ಮಾಧ್ಯಮಗಳನ್ನು ಒಟ್ಟಾಗಿ 'ಕಸಿ' ಮಾಡಿದಂತೆ ದುಡಿಸಿಕೊಳ್ಳುವುದು, ಅಂಥವನ್ನು ಸಮರ್ಥಿಸಿಕೊಳ್ಳುವುದು

ಸಹಜವೆಂಬಂತಾಗಿದೆ. Ang thing goes...ನಂಥ ಅಭಿವ್ಯಕ್ತಿಗಳೂ ಕಾಣಿಸಿಕೊಳ್ಳುತ್ತಿವೆ. ಆದರೆ ನಮ್ಮವರ ಸೃಷ್ಟಿಗಳು ಪಶ್ಚಿಮದ ದೃಷ್ಟಿ ಸ್ಫೂರ್ತಿ, ಪ್ರಭಾವಗಳನ್ನು ಹೊಂದಿಯೂ ಕಲಾವಿದನ ಮೂಲ ಸಂವೇದನೆಯ ಲೇಪ ಹೊಂದಬೇಕು. ಸುತ್ತಲಿನ ಎಲ್ಲ ಸಾಧ್ಯತೆಗಲನ್ನು ಅಭಿವ್ಯಕ್ತಿಗಾಗಿ ತಮ್ಮದಾಗಿಸಿಕೊಳ್ಳುವ ಆಂತರಿಕ ಒತ್ತಡ, ಪ್ರೀತಿಗಳು ನಮ್ಮವರಲ್ಲಿ ಹುಟ್ಟಬೇಕು. ಕಲೆ ಎಂದರೆ ಕೇವಲ ಪ್ರದರ್ಶನ ಮಾರಾಟಗಳೇ ಅಲ್ಲ. ಬದುಕಲು, ಹಣಗಳಿಸಲು, ಇನ್ನೂ ಹತ್ತಾರು ಮಾರ್ಗಗಳಿವೆ. ಅಲ್ಲವೆ? ಕಲೆ ಸಮಾಜ, ಪ್ರಕೃತಿಗಳನ್ನು ಎದುರಿಸಿ ಕಾಲಾತೀತವೂ ಆದ, ತನ್ನ ಸಮಕಾಲೀನ ಹೊಳಹುಗಳನ್ನು ಲೇಪಿಸಿ ಅನನ್ಯ ರೂಪವನ್ನು ಕಂಡುಕೊಳ್ಳಬೇಕಿದೆ. ಕಲಾವಿದ ತನ್ನ ಆಂತರಿಕ ಒತ್ತಡದ ಕಾರಣಕ್ಕಾಗಿ ತನ್ನ ಅನುಭವ, ಗ್ರಹಿಕೆಗಳನ್ನು ಸಮಕಾಲೀನ ಸತ್ವಗಳಿಂದ ಲೇಪಿಸಿ ಸೃಷ್ಟಿಸಲಿ, ಈ ಸಮಕಾಲೀನತೆ ಪ್ರಾರಂಭದಲ್ಲಿ ಹೇಳಿದ ನಮ್ಮ ಸಮಕಾಲೀನತೆಯ ಜೊತೆಗೆ ಭೂತ, ಭವಿಷ್ಯತ್ ಮತ್ತು ವರ್ತಮಾನಗಳನ್ನೂ ಮೀರಿದ, ಎಲ್ಲ ಕಾಲಗಳಲ್ಲೂ ಜೀವಂತ ಎನ್ನಿಸುವ ಅನುಭವಗಳನ್ನು ನೀಡಬಲ್ಲ ರೂಪಗಳಾಗಿ ಹೊರ ಹೊಮ್ಮಲಿ, ಅದರೆ ಇಂದಿನ ಅಭಿವ್ಯಕ್ತಿಗಳಲ್ಲಿ ಕಲೆ ಕೇವಲ ಮಾರಾಟದ ಸರಕಾಗಿ ಪರಿವರ್ತನೆಗೊಂಡಿರುವುದನ್ನೇ ರೂಪಿಸುತ್ತವೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

(ಇಲ್ಲಿನ ಹೆಚ್ಚಿನ ಅಂಶಗಳನ್ನು ಈ ಹಿಂದೆ ಬೆಂಗಳೂರಿನ 'ಸಂಚಯ'ದ ಸೆಮಿನಾರ್‌ನಲ್ಲಿ ಮಂಡಿಸಿದ್ದನಾದರೂ ಆನಂತರದ ಬೆಳವಣೀಗೆಗಳ ಹಲವು ವಿವರಗಳನ್ನು ಕಲೆ ಕಮಾಡಿಟಿಯಾಗಿರುವ ಅನಿವಾರ್ಯತೆಯನ್ನು ಗುಲ್ಬರ್ಗಾದ ಸೆಮಿನಾರನಲ್ಲಿ ವಿವರಿಸಿದ್ದೆ. ಆ ಎಲ್ಲವುಗಳ ಸಂಕ್ಷಿಪ್ತ ರೂಪ ಈ ಬರಹ. ಅಗತ್ಯವೆನ್ನಿಸಿದಲಿ ಗಮನಿಸಿ, ಎಚ್.ಎ.ಅನಿಲ್‌ಕುಮಾರ ಸಂಪಾದಿಸಿರುವ 'ಚೌಕಟ್ಟು: ಕರ್ನಾಟಕದ ಸಮಕಾಲೀನ ದೃಶ್ಯಕಲೆ' ಕುರಿತ ವಿಶೇಷ ಸಂಚಿಕೆ ೫, ಸಂಪುಟ ೮, ಸಂಚಯ ಏಪ್ರಿಲ್-ಮೇ ೧೯೭೭ರಲ್ಲಿನ ನನ್ನ ಬರಹ 'ಕರ್ನಾಟಕದ ಸಮಕಾಲೀನ ಕಲೆಯ ಸಂವೇದನೆಯ ನೆಲೆಗಳು, ಪು.೭-೧೬)

**ಪ್ರದರ್ಶನಗಳ ಪೂರ, ಮಿಶ್ರ ಮಾಧ್ಯಮದ ಚಿತ್ರ, ಅನನ್ಯ ಪ್ರಿಂಟ್ ಮತ್ತು ಗಮನಾರ್ಹ ಶಿಲ್ಪಗಳು:** ೧೯೭೫ರಲ್ಲಿ ಸಂಕುಲ ದ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ "ಪ್ರದರ್ಶನಗಳ ಪೂರ: ಮಿಶ್ರ ಮಾಧ್ಯಮದ ಚಿತ್ರ, ಅನನ್ಯ ಪ್ರಿಂಟ್ ಮತ್ತು ಗಮನಾರ್ಹ ಶಿಲ್ಪಗಳು" ಎಂಬ ಲೇಖನದಲ್ಲಿ ಬಹುತೇಕ ಗ್ಯಾಲರಿಗಳಲ್ಲಿ ಮೂಡಿ ಬಂದಿದ್ದ ಹಲವು ಕಲಾವಿದರ ಕಲಾ ಪ್ರದರ್ಶನಗಳ ಕುರಿತು ವಿಮರ್ಶಕರು ಆ ಎಲ್ಲ ಕೃತಿಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಇತ್ತೀಚಿನ ಕಲಾವಿದರ ಅಭಿವ್ಯಕ್ತಿಗಳನ್ನು ಗಮನಿಸಿದರೆ ವಿಕೃತ ಸಂದರ್ಭದ ಅಭಿವ್ಯಕ್ತಿಗೆ ಹಲವು ಮಾಧ್ಯಮಗಳ ಕಲಸು ಮೇಲೋಗರದಂಥ ಮಿಶ್ರ ಮಾಧ್ಯಮ ಉಳಿದೆಲ್ಲ ಮಾಧ್ಯಮಗಳಿಗಿಂತ ಅತ್ಯಂತ ಆಪ್ತವಾಗಿ ಸಹಕರಿಸುವಂತಿದೆ. ಇದು ಕಾಲದ ಪ್ರಭಾವ, ಮಿಶ್ರ ಮಾಧ್ಯಮವಾದ

ಹಲವಾರು ಕಲಾವಿದರ ಸೃಷ್ಟಿಗಳು ಅಂಶಕ್ಕೆ ಒತ್ತು ನೀಡಿವೆ. ಮೂಲತಃ ಪ್ರಿಂಟ್ ಮತ್ತು ಶಿಲ್ಪಗಳಲ್ಲಿ ಸಮಕಾಲೀನ ಗ್ರಹಿಕೆಗಳ ತೀವ್ರತೆಯ ಸೃಷ್ಟಿಗಳಿಗಾಗಿ ವಿಶೇಷ ಸ್ಥಳಗಳಿಸಿರುವ ಎಸ್.ಶ್ಯಾಮಸುಂದರ್ ಈ ಹಿಂದೆ ದೆಹಲಿ ಗ್ಯಾಲರಿಯಲ್ಲಿ ಪ್ರದರ್ಶನದಲ್ಲಿ ವಿಶಿಷ್ಟ ವಸ್ತುವಿನ ರೇಖಾಚಿತ್ರಗಳ ಜೊತೆಗೆ ಭಿನ್ನವಾದ, ಜಾನಪದೀಯ ಸತ್ವಗಳನ್ನು(ಸಮಕಾಲೀನ ಗ್ರಹಿಕೆಗಳ ಶಿಲ್ಪಗಳೂ ಇದ್ದವು) ತುಂಬಿಕೊಂಡಿದ್ದ ಒಂದೆರಡು ಶಿಲ್ಪಗಳನ್ನು ಪ್ರದರ್ಶಿಸಿದ್ದರು. ಅವುಗಳ ಮುಂದುವರಿದ ಅತ್ಯಂತ ಗಂಭೀರ ಟಿಪ್ಪಣಿಯಿಂದ ಮಿಶ್ರಮಾಧ್ಯಮದ ಚಿತ್ರಗಳನ್ನು ಅಕ್ಟೋಬರ್ ೯ ರಿಂದ ೧೮, ೧೯೯೫ರಂದು ಬೆಂಗಳೂರಿನ ರಿನೈಸಾನ್ಸ್ ಗ್ಯಾಲರಿಯಲ್ಲಿ ಪ್ರದರ್ಶಿಸಿತು. ಮನುಷ್ಯರ ಅಂತ್ಯ ಸಂಸ್ಕಾರದ ಸ್ಮಶಾನಗಳ ವೈವಿಧ್ಯಮಯ ಪುಟಗಳನ್ನು ವಿಶಿಷ್ಟವಾಗಿ ಸುಂದರಗೊಳಿಸಿ ಅಭಿವ್ಯಕ್ತಿಸಿ ಜಲ, ತೈಲ ಮತ್ತು ಅಕ್ರಲಿಕ ವರ್ಣಗಳನ್ನು, ಪೋಸ್ಟಲ್ ಇತ್ಯಾದಿಗಳನ್ನು ದುಡಿಸಿಕೊಳ್ಳಲಾಗಿತ್ತು. ಇಲ್ಲಿ ಬಣ್ಣಗಳ ಸಂಯೋಜನಾ ನೆಯ್ಗೆ ತಾಂತ್ರಿಕವಾಗಿ ಉತ್ತಮ.

ಇಮ್ತಿಯಾಜ್ ದಾರ್‌ಕರ್ ಅವರ ಎರಡನೆಯ ಕವನ ಸಂಕಲನದ ರೇಖಾಚಿತ್ರಗಳು ಎರಡನೆಯ ಭಾರಿ ಬೆಂಗಳೂರಿನ ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ೨-೯-೧೯೯೫ರವರೆಗೆ ಪ್ರದರ್ಶನಗೊಂಡಿದ್ದವು. ಬಹುತೇಕ ಮಧ್ಯವಯಸ್ಕ ಹೆಣ್ಣು-ಗಂಡುಗಳ ಮುಖಗಳ ಆಳದ ನೋವು, ವಿಷಾದಗಳು ಹೊರಗೂ ಎದ್ದು ಕಾಣುಬರುವ ರೇಖಾ ಚಿತ್ರಗಳಿದ್ದವು. ನಂತರ ಮದರಾಸಿನ 'ದಿ ಗ್ಯಾಲರಿ' ಆಶ್ರಯವಿತ್ತು.

ಆಗಸ್ಟ್ ೨೪, ಸೆಪ್ಟೆಂಬರ್ ೧೪, ೧೯೯೫ರಂದು ಬೆಂಗಳೂರಿನ ಸಾಕ್ಷಿ ಗ್ಯಾಲರಿಯಲ್ಲಿ ರವಿಕುಮಾರ್ ಕಾಶಿ, ಅಮರೇಶ್ ಯು, ಬಿಜ್ಜಳ, ಗಿರಿಧರಗೌಡ, ಕಲ್ಪನಾ ಪ್ರಕಾಶರ ಮಗಳ ಪ್ರಿಂಟ್‌ಗಳು ಪ್ರದರ್ಶನಗೊಂಡಿದ್ದವು.

ಕರ್ನಾಟಕ ಲಲಿತ ಕಲಾ ಅಕಾಡೆಮಿಯ ಆಶ್ರಯದಲ್ಲಿ ಮಹಾರಾಷ್ಟ್ರದ ಕಲಾ ನಿರ್ದೇಶನಾಲಯ ಬೆಂಗಳೂರಿನ ವೆಂಕಟ ಆರ್ಟ್‌ಗ್ಯಾಲರಿಯಲ್ಲಿ ಆಗಸ್ಟ್ ೩೦ ರಿಂದ ಸೆಪ್ಟೆಂಬರ್ ೫ ೧೯೯೫ರ ವರೆಗೆ ಜೆ.ಜೆ.ಕಲಾಶಾಲೆಯ ದಿಗ್ಗಜರ ಕೃತಿಗಳು ಪ್ರದರ್ಶನಗೊಂಡಿದ್ದವು. ಶಿಲ್ಪ ಸಾದೃಶ ವರ್ಣ ರೂಪಗಳಿಂದ ಚಿತ್ರಗಳನ್ನು ರಿನೈಸಾನ್ಸ ಗ್ಯಾಲರಿಯಲ್ಲಿ ಎಂ.ಪಿ.ಕೃಷ್ಣ ಮೆನನ್ ಸೆಪ್ಟೆಂಬರ್ ೨೫ ರಿಂದ ಅಕ್ಟೋಬರ್ ೫ ೧೯೯೫ರ ವರೆಗೆ ಪ್ರದರ್ಶಿಸಿದರು. ಇಲ್ಲಿ ಅಕ್ರಲಿಕ್ ರೇಖೆಗಳಿಂದ ಗಾಜ ಚಿತ್ತರೆಗಳನ್ನು ಸೃಷ್ಟಿಸಿದ್ದಾರೆ. ದೆಹಲಿಯ ಸಹಮತ್ ಆಶ್ರಯದಲ್ಲಿ Post Cards for Gandhi ಕಲಾಪ್ರದರ್ಶನ ದೇಶದ ಆರು ಪ್ರಮುಖ ಕಲಾಕೇಂದ್ರಗಳಿಗೆ(ಅಕ್ಟೋಬರ್ ೨ರಿಂದ ೯ರವರೆಗೆ ೧೯೯೫ರಲ್ಲಿ) ನಡೆಯಿತು. ಚಿತ್ರ-ಛಾಯಾಚಿತ್ರ ಹಾಗೂ ಪ್ರಿಂಟ್ ಮೊದಲಾದ ಮಾಧ್ಯಮಗಳಲ್ಲಿ ಪೋಸ್ಟ್‌ಕಾರ್ಡ್ ಆಕಾರದ ಅವಕಾಶ ಹಲವಾರು ಕಲಾವಿದರ ಕಲ್ಪನೆಗಳಿಗೆ ಭೂಮಿಕೆಯಾಗಿತ್ತು.

ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ Time & Space ಶೀರ್ಷಿಕೆಯಡಿ ಹೈದಾರಬಾದಿನ ಕಲಾವಿದರ ತೈಲವರ್ಣದಲ್ಲಿ ಮೂಡಿದ ಗಿರಿಧಾಮಗಳ ಭೂದೃಶ್ಯಗಳು, Metal Paste ದುಡಿಸಿಕೊಂಡ ಕಲಾಶಾಲೆಗಳು ಗಮನಾರ್ಹವಾಗಿದ್ದವು. ಲಂಡನಿನ ಕ್ರಿಶ್ಚಿಯನ್(ಅಕ್ಟೋಬರ್ ೧೯೯೫) ಹಾಗೂ ಮುಂಬಯಿ ಸದ್ಲು(ನವೆಂಬರ್ ೧೯೯೫) ಕಲಾ ಹರಾಜುಗಳಿಗೆ ಯುಸೂಪ್ ಅರಕಲ್ ಕೃತಿಗಳು ಆಯ್ಕೆಯಾದ ಹಿನ್ನೆಲೆಯಲ್ಲಿ ಶಾದೀ ಕಲಾಕೃತಿಗಳು ಶೀರ್ಷಿಕೆಯಡಿ ಬೆಂಗಳೂರಿನ ಕ್ರಿಂಸನ್ ಗ್ಯಾಲರಿಯಲ್ಲಿ ಪ್ರದರ್ಶನಗೊಂಡವು. ೧೯೯೬ರಲ್ಲಿ ಮಳೆಬಿದ್ದ ನೆಲದಲ್ಲಿ ಬಣ್ಣಗಳ ಮೇಳವಂತ ಪ್ರಕೃತಿಯ ಬೆಡಗಿಗೆ ಸ್ಪಂದಿಸಿ ಅಭಿವ್ಯಕ್ತಿಸಿದ್ದ ಗುರುದಾಸ ಕೃತಿಗಳೂ ಮುಂಬಯಿಯ ಜಹಾಂಗೀರ್ ಆರ್ಟ್ ಗ್ಯಾಲರಿಯಲ್ಲಿ(ಸೆಪ್ಟೆಂಬರ್ ೧೨, ೧೮, ೧೯೯೫) ಪ್ರದರ್ಶಿಸಿದ್ದು, ಬೆಂಗಳೂರಿನ ಅವರ ಸ್ಟುಡಿಯೋದಲ್ಲಿದ್ದ ಈ ಪ್ರದರ್ಶನದ ಮುನ್ನೋಟ ಪಂ.ಭೀಮಸೇನ್ ಜೋಷಿಯವರ ಸಂಗೀತದ ಹಿನ್ನೆಲೆಯಲ್ಲಿ ವಿಶಿಷ್ಟ ಅನುಭವ ಎಂದು ಹೇಳಲಾಗಿದೆ.

ಹಾಗೆ ಮದರಾಸಿನ ದಿ ಈಸೆಲ್ ಆರ್ಟ್‌ಗ್ಯಾಲರಿ ಬೆಂಗಳೂರಿನ ಗ್ರೂಫ್ ಕಲಾವಿದರ ಕಲೆಗಳನ್ನು ತನ್ನ ಗ್ಯಾಲರಿಯಲ್ಲಿ ಪ್ರದರ್ಶಿಸಿತ್ತು. ಆ ಮುನ್ನೋಟದ ಪ್ರದರ್ಶನ ಬೆಂಗಳೂರಿನ ವೆಂಕಟಪ್ಪ ಗ್ಯಾಲರಿಯಲ್ಲಿ(೧೯೯೨ ಸೆಪ್ಟೆಂಬರ್ ೨೦ರಿಂದ ೨೮ರವರೆಗೆ) ವ್ಯವಸ್ಥೆಯಗಿತ್ತು. ಇವು ಹಲವು ನೆಲೆಗಳ ಮಾಧ್ಯಮಗಳ ವಿಭಿನ್ನ ಅಭಿವ್ಯಕ್ತಿ. ಕ್ರಿಮ್‌ಸನ್‌ನಲ್ಲಿ(ಸೆಪ್ಟೆಂಬರ್ ೧೨-೨೨, ೧೯೯೫) ನಾಲ್ವರು ಕಲಾವಿದೆಯರ ಕಲಾಕೃತಿಗಳು ಪ್ರದರ್ಶನಗೊಂಡಿದ್ದು, ಹಾಗೆ ಇದೇ ಗ್ಯಾಲರಿಯಲ್ಲಿ(ಅಕ್ಟೋಬರ್ ೨೦-ನವೆಂಬರ್ ೮, ೧೯೯೫) ಜಲವರ್ಣಗಳನ್ನು ದುಡಿಸಿಕೊಂಡ ಅನುಭ ಬರುವ ಭೂದೃಶ್ಯಗಳನ್ನು ಸರ್ರಿಯಲಿಸ್ಟ್ ಹಾದಿಗೆ ಹತ್ತಿರವಾದರಿತ ಕೃತಿಗಳು ಪ್ರದರ್ಶನಗೊಂಡಿವೆ.

ಅಂತಾರಾಷ್ಟ್ರೀಯ ಖ್ಯಾತಿಯ ಕೃಷ್ಣರೆಡ್ಡಿಯವರ ಪ್ರಿಂಟ್‌ಗಳ ಪ್ರದರ್ಶನ ಸಾಕ್ಷಿ ಗ್ಯಾಲರಿಯಲ್ಲಿ(ಅಕ್ಟೋಬರ್ ೪, ನವೆಂಬರ್ ೪, ೧೯೯೫) ನಡೆದಿದ್ದು, ಹೊಸ ರೀತಿಯ ಪ್ರಿಂಟುಗಳು ಪ್ರದರ್ಶನದಲ್ಲಿದ್ದವು. ವೆಂಕಟಪ್ಪ ಆರ್ಟ್ ಗ್ಯಾಲರಿಯಲ್ಲಿ(ಸೆಪ್ಟೆಂಬರ್ ೨೫-೨೬, ೧೯೯೫) ತಾಯಿ ಮತ್ತು ಮಗು ಶೀರ್ಷಿಕೆಯ ವೈವಿಧ್ಯಮ ಶಿಲ್ಪಗಳು ಆಕರ್ಷಿಣೀಯವಾಗಿದ್ದವು ಎಂದು ಹೇಳುತ್ತಾರೆ. ಕಲ್ಕತ್ತೆಯ ಗ್ಯಾಲರಿ ೮೮ ತನ್ನ ಸಮಗ್ರಹದಿಂದಾಯ್ದ ಹಲವಾರು ಪ್ರತಿಷ್ಠಿತ ಕಲಾವಿದರ ಕೃತಿಗಳನ್ನು ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ(ಆಗಸ್ಟ್ ೧೯-೨೬, ೧೯೯೫) ಪ್ರದರ್ಶಿಸಿತು. ತುಮಕೂರಿನಲ್ಲಿ ನಡೆದ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನದಲ್ಲಿ ಬಿ.ಡಿ.ಜಗದೀಶ್ ರೇಖಾ ಚಿತ್ರಗಳನ್ನು(ಸೆಪ್ಟೆಂಬರ್ ೯-೧೦, ೧೯೯೫) ಪ್ರದರ್ಶಿಸಿದರು. ಇದೇ ಸಂದರ್ಭದಲ್ಲಿ 'ತುಳಿತಕ್ಕೊಳಗಾದವರು' ಶೀರ್ಷಿಕೆಯಡಿ ಕ್ರಿಯಾಚೇತನ ಸಾಂಸ್ಕೃತಿಕ ಸಂಸ್ಥೆ ರಾಜ್ಯದ ಹಲವು ಕಲಾವಿದರ ಕಲೆಗಳನ್ನು ಪ್ರದರ್ಶಿಸಿತು.

ಶಾಂತಿನಿಕೇತನದಲ್ಲಿ ೧೯೫೦ರ ನಡುವೆ ಕಲಿತ ಬಿ.ಎನ್. ಅಡಿಗರು ತಮ್ಮ ಕಲೆಯ ಪೂರ್ವಾವಲೋಕನದಂಥ ಪ್ರದರ್ಶನವನ್ನು ಬೆಂಗಳೂರಿನ ವೆಂಕಟಪ್ಪ ಆರ್ಟ್‌ಗ್ಯಾಲರಿಯಲ್ಲಿ(ಸೆಪ್ಟೆಂಬರ್

೧೫–೧೬, ೧೯೯೫) ಭಿತ್ತಿ ಶಿಲ್ಪ ಮತ್ತು ಪ್ರಿಂಟ್‌ಗಳಿದ್ದು ಕಲಾ ಇತಿಹಾಸದ ದೃಷ್ಟಿಯಿಂದ ಅಡಿಗರ ಈ ಸೃಷ್ಟಿಗಳು ಮುಖ್ಯವಾಗುತ್ತವೆ.

ಮೈಸೂರಿನಲ್ಲಿ ಕರ್ನಾಟಕ ಲಲಿತಾ ಕಲಾ ಅಕಾಡೆಮಿ ಮತ್ತು ಕಾವಾ ಆಶ್ರಯದಲ್ಲಿ ಕೋಲೋಗ್ರಾಫಿ ಕಾರ್ಯಾಗಾರ(ಸೆಪ್ಟೆಂಬರ್ ೧೪–೧೯, ೧೯೯೫) ನಡೆಯಿತು. ರಾಜ್ಯದ ಕಲಾವಿದರಲ್ಲದೆ, ಹೈದರಾಬಾದಿನ ಕಲಾವಿದರ ಕ್ಯಾಲಿಗ್ರಾಫಿ ಪ್ರಿಂಟ್‌ಗಳು ಪ್ರದರ್ಶನದಲ್ಲಿದ್ದವು. ರಾಜ್ಯ ಲಲಿತಕಲಾ ಅಕಾಡೆಮಿಯ ಕಾರವಾರದ ಜಲವರ್ಣ ಶಿಬಿರದಲ್ಲಿ ರಾಜ್ಯದ ಹಲವು ಕಲಾವಿದರು ಪಾಲ್ಗೊಂಡು ಸುಂದರ ಪ್ರಕೃತಿಯನ್ನು ಸೃಷ್ಟಿಸಿದರು. ಒಬ್ಬ ಕಲಾವಿದನ(ಗೋಪಿನಾಥ್) ಸೃಷ್ಟಿಗಳಲ್ಲಿ ಸುತ್ತಲಿನ ಜನರ ನೋವು ಕಾಣಿಸಿಕೊಂಡಿತ್ತು. ಈ ರೀತಿಯಲ್ಲಿ ಮನಸೋರೆಗೊಂಡ ಕಲಾಕೃತಿಗಳು ಕಲಾವಿದರು ತಮ್ಮ ಅಭಿವ್ಯಕ್ತಿಗೆ ಕಂಡುಕೊಳ್ಳುವ ರೂಪ–ಬಣ್ಣ–ತಂತ್ರ ಮಾಧ್ಯಮಗಳ ನಿರ್ವಹಣೆಗಳು ಬಹುತೇಕ ಕ್ಲೀಷೆಯ ಅಂಚಿನಲ್ಲೇ ಸುತ್ತಿ ಸುಳಿದರೂ ಆಗ–ಈಗ ಹಳೆಯ ಬೇರಿಗೆ ಹೊಸ ಚಿಗುರು ಮೂಡಿದಂಥ ಪ್ರಕ್ರಿಯೆಯ ಮುಂಚು, ಗಂಭೀರ ಹಾಗೂ ನಾಟಕೀಯ ಭಾವಗಳ ಟಿಸಿಲುಗಳು ಇತ್ತೀಚಿನ ಹಲವು ಕಲಾ ಪ್ರದರ್ಶನಗಳ ಗ್ರಹಿಕೆಗಳಲ್ಲಿದ್ದವು. ಬಹುತೇಕ ಗ್ಯಾಲರಿಗಳಿಗಾಗಿಯೇ ಮೂಡಿಬಂದಿದ್ದ ಈ ಎಲ್ಲ ಸೂಫಿಗಳಲ್ಲಿ ಅಲ್ಲಲ್ಲಿ ಅನನ್ಯತೆಯನ್ನು ಮೆರೆದ ಸೃಷ್ಟಿಗಳೂ ಕಾಣಿಸಿಕೊಂಡದ್ದೊಂದು ಸಮಾಧಾನ ಎಂದು ವಿಮರ್ಶಕರು ಆಶಯವನ್ನು ವ್ಯಕ್ತಪಡಿಸಿದ್ದಾರೆ.

**ಸಮಕಾಲೀನ ಕಲಾ ವಿಮರ್ಶೆಯ ಸಂಕ್ಷಿಪ್ತ ನೋಟ:** ೧೯೯೭–೯೮ರಲ್ಲಿ ಸಂಕುಲ ದ್ವೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ "ಸಮಕಾಲೀನ ಕಲಾ ವಿಮರ್ಶೆಯ ಸಂಕ್ಷಿಪ್ತ ನೋಟ" ಎಂಬ ಲೇಖನದಲ್ಲಿ ಗದುಗಿನ ವಿಜಯ ಫೈನ್ ಆರ್ಟ್ಸ್ ಸೊಸೈಟಿಯ ೫೦ನೆಯ ವರ್ಷದ ಸುವರ್ಣ ಮಹೋತ್ಸವ ಸಮಾರಂಭದ ಅಂಗವಾಗಿ ದಿನಾಂಕ ೩೧–೧–೧೯೯೭ ರಂದು ನಡೆದ ವಿಚಾರ ಸಂಕೀರ್ಣದಲ್ಲಿ ಕರ್ನಾಟಕದ ಕಲಾ ವಿಮರ್ಶೆಯ ಕುರಿತು ಮಾಡಿದ ಭಾಷಣದ ಮುಖ್ಯ ಅಂಶಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಚಿತ್ರವೆಂದರೆ ಹೀಗಿರಬೇಕು. ಶಿಲ್ಪವೆಂದರೆ ಹೀಗೆ ಇರಬೇಕು ಎಂಬ ಕಲಾವ್ಯಾಕರಣ ಮೀರಿದ ಅಭಿವ್ಯಕ್ತಿಯ ಗ್ರಹಿಕೆಗಳನ್ನು ನಾವಿಂದು ನೋಡಿ ಅನುಭವಿಸುತ್ತಿದ್ದೇವೆ. ಯಾವುದೇ ದೇಶ–ಕಾಲಗಳು ತಮ್ಮ ಒಂದು ನಿರ್ದಿಷ್ಟ ಸಂದರ್ಭದ ಅಭಿವ್ಯಕ್ತಿಗೆ, ಅಂದಿನ ಸಮಕಾಲೀನ ವಿಶಿಷ್ಟ ಸಂವೇದನೆಯ ಜೀವಧ್ವನಿಯಂಥ ಅಭಿವ್ಯಕ್ತಿಗೆ ಆ ಸಂದರ್ಭದಲ್ಲಿ ಸಿಗುವ ಸೂಕ್ತ, ವಿಶಿಷ್ಟ ಮಾಧ್ಯಮ, ಮೂಡಿಬಂದ ಹೊಸ ರೂಪಗಳನ್ನು ಆಯ್ಕೆ ಮಾಡಿಕೊಂಡ ನಿರ್ವಹಣೆಗಳು ಕಲಾವಿದನೊಬ್ಬ ತನ್ನ Identity Making process ಕಾರಣಕ್ಕಾಗಿ ಪ್ರಕಟಪಡಿಸುತ್ತಾನೆ.

ಸಮಕಾಲೀನ ಸಂವೇದನೆಯ ಕಲಾ ಇತಿಹಾಸ ಕಾಲದಲ್ಲಿ ಇತಿಹಾಸ ಪೂರ್ವ ಸಂವೇದನೆಗಳು ಪುನಃ ಕಾಣಿಸಿಕೊಳ್ಳುತ್ತಿರುವುದು ಕುತೂಹಲಕಾರಿ ಸಂಗತಿ. ರೊಮ್ಯಾಂಟಿಕ್ ಸಂವೇದನೆಯ

ನಂತರ ಇಂದಿನ ದಿನಗಳ ವಿಕ್ಷಿಪ್ತ ಸಂಕ್ಷೋಭೆಗೊಂಡ ಸಮಕಾಲೀನ ಹಲವು ನೆಲೆಯ ಸಂವೇದನೆಗಳನ್ನು ಇಂದಿನ ಅಭಿವ್ಯಕ್ತಿಗಳಲ್ಲಿ ಕಾಣುತ್ತಿದ್ದೇವೆ. ಈ ಹಲವು ಅಂಶಗಳ ಹಿನ್ನೆಲೆಯಲ್ಲಿ ಇಂದಿನ ಅಭಿವ್ಯಕ್ತಿಗಳನ್ನು ಗಮನಿಸಿದಾಗ ಚಿತ್ರಿಸುವವರೆಲ್ಲ ಕಲಾವಿದರು, ಅವರ ಕೃತಿಗಳೆಲ್ಲ ಕಲಾಕೃತಿಗಳು ಆಗಲಾರವು. ಹೌದು–ಅಲ್ಲ ಎಂಬ ನಿರ್ಧಾರಗಳು ಕಲಾವಿಮರ್ಶೆಯ ನೆಲೆಯಲ್ಲಿ ಆಗುತ್ತವೆ.

The Uses art criticism ಎಂಬ ತಮ್ಮ ಬರಹವನ್ನು ಕೆ.ಜಿ.ಸುಬ್ರಹ್ಮಣ್ಯಂ ".....Art Criticism" ಒಂದು ಶಿಸ್ತಾಗಿ ಕಾಣಿಸಿಕೊಂಡಿದ್ದಾರೆ. "Is a Fairly recent development on our Cultural Scence..." ಎಂದು ಹೇಳುತ್ತಾ "Which does not go back more than a century" ಎನ್ನುತ್ತಾರೆ.

ನಮಗೆ ಇಡೀ ಭಾರತದಲ್ಲಿ ಉತ್ತಮ ಕಲಾವಿಮರ್ಶೆಯ ಮಾದರಿ ಇಂದಿಗೂ ಇಲ್ಲ. ಕೆಲವರು ಅವರದೇ ಆದ ರೀತಿಯಲ್ಲಿ ಉತ್ತಮವಾಗಿ, ಅತ್ಯುತ್ತಮವಾಗಿ ಬರೆಯುತ್ತಿದ್ದಾರೆ. ಹರ್ಬರ್ಟ ರೀಡ್ ತನ್ನ The tenth muse ಬರಹದಲ್ಲಿ ಕಲಾವಿಮರ್ಶೆಗೆ ನಿರ್ದಿಷ್ಟ ಮಾನದಂಡಗಳಿಲ್ಲ. ಪರಿಪಕ್ವ ಕಲಾವಿಮರ್ಶಕರೂ ಇಲ್ಲ ಎಂದಿರುವುದು ಗಮನಾರ್ಹ.

ನಮ್ಮ ಭಾರತೀಯ ಕಲಾ ಇತಿಹಾಸದಲ್ಲಿ ಕಲಾಕೃತಿಯ ವಿಮರ್ಶೆಗಳು ಪಶ್ಚಿಮದ ಪ್ರಭಾವಗಳಿಂದ ಅನ್ನಿಸಿದೆ. ಭಾರತೀಯ Asthetics ಬಗ್ಗೆ ಗಮನ ಹರಿಸಿದರೆ, ವೇದ ಪೂರ್ವ ವೇದಕಾಲೀನ ನಂತರದ ಕಲಾ ಸೂಫಿಯ ಪ್ರಕ್ರಿಯೆಯ ಬಗೆಗಿನ ವಿವರಗಳು ದೊರೆಯುತ್ತವೆ. ಎಸ್.ಎಸ್.ವಾಸುಗುಪ್ತ, ಆನಂದಕುಮಾರಸ್ವಾಮಿಯವರ Oriental Aesthetics ಎಂಬ ಗ್ರಂಥಗಳಲ್ಲಿ ಚಿತ್ರ, ಶಿಲ್ಪಗಳ ಸೃಷ್ಟಿ ಪ್ರಕ್ರಿಯೆಯ ವಿಧಾನದ ವಿವರಗಳು, ಅಗತ್ಯ ಪರಿಕರಗಳು ಇತ್ಯಾದಿಗಳ ಬಗ್ಗೆ ವಿವರಗಳಿವೆ. ಆದರೆ ಕಲಾವಿಮರ್ಶೆಯು ನಿಖರ, ಮಾನದಂಡಗಳು ಇಲ್ಲ. ಕಲೆಯ ಮೆಚ್ಚುಗೆ, ಬರಹಗಳು ವಿಮರ್ಶೆಗಳಾಗುವುದಿಲ್ಲ. ಕಲಾಕೃತಿಗಳ ಶೈಲಿ, ತಂತ್ರ, ಮಾಧ್ಯಮ, ಕಲಾ ಚಳುವಳಿ, ಗುಂಪು ಆ ಸಂದರ್ಭದ ಧೋರಣೆ ಇತ್ಯಾದಿಗಳು ಗಮನ ನೀಡಬೇಕಾಗುತ್ತದೆ. ಹರ್ಬಟ್ ರೀಡ್ ದೃಷ್ಟಿಯಲ್ಲಿ ವಿಮರ್ಶಕರಿಗೆ ಉತ್ತಮ ತಾಂತ್ರಿಕ ತಳಹದಿಯಿರಬೇಕು.

ಇನ್ನು ಪಶ್ಚಿಮದ ಕಲಾವಿಮರ್ಶೆಯ ಇತಿಹಸದಲ್ಲಿ ಕಲಾ ವಿಮರ್ಶಕರ ಬಹುತೇಕ ಬರಹಗಳು ಮೂಲತಃ ಪತ್ರಿಕೆಗಳಿಗಾಗಿಯೇ ಕಲಾಪ್ರದರ್ಶನಗಳ ಸಂದರ್ಭದಲ್ಲಿ ಬರೆದವು. ಅವೆಲ್ಲ ಆ ಕಾಲಕ್ಕೆ ಸಲ್ಲುವ ವಿವರ, ಲಕ್ಷಣಗಳಿಂದ ಕೂಡಿವೆ. ಮನಃಶಾಸ್ತ್ರದ ಬೆಳವಣಿಗೆಯ ಫಲಗಳೂ ಕಲಾ ವಿಮರ್ಶೆಯಲ್ಲಿ, ಸಾಕಷ್ಟು ಕೊಡುಗೆ ನೀಡಿವೆ. ಸಿಗ್ಮಂಡ್ ಪ್ರಾಯ್ಡ ಹಾಗೂ ಅವನ ನಂತರದ ಈ ಶಾಸ್ತ್ರ ಬೆಳವಣಿಗೆಗಳು, Cestalt ಮನಃಶಾಸ್ತ್ರೀಯ ಚಿಂತನೆಗಳು ಇತ್ಯಾದಿಗಳೆಲ್ಲ ಇಂದಿನ ವಿಮರ್ಶಕರಿಗೆ ಹಲವು ನೆಲೆಗಳನ್ನು ಒದಗಿಸುತ್ತವೆ.

ವೈ.ಮೋರಿ ತನ್ನ ಕಲಾ ವಿಮರ್ಶೆಯ ವಿವರಗಳಲ್ಲಿ ವಿರ್ಶವ ಕಲೆಯ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ಕಲೆಯನ್ನು ನೋಡಬೇಕೆಂದು, ವಸ್ತುನಿಷ್ಠ, ವ್ಯಕ್ತಿನಿಷ್ಠ ವಿಮರ್ಶೆಗಳಲ್ಲಿ ಆವರೆಗಿನ ವಿಶಿಷ್ಟ ಕಲಾ ಕೃತಿಗಳ ಅಧ್ಯಯನ ಮತ್ತು ಸಮಕಾಲೀನ ಬದುಕಿನ ಜೀವಂತಿಕೆಯನ್ನು ಗ್ರಹಿಸುವ ಅಗತ್ಯವೆಂದು ಹೇಳುತ್ತಾರೆ. ಕಲಾರೀತಿಯನ್ನು ವಿಮರ್ಶಿಸುವಾಗ ವಿಮರ್ಶಕನಿಗೆ Polished ಆದ Taste or ಅಭಿರುಚಿ ಇದ್ದರೆ some essential features of the art work ಅನ್ನು Identity ಮಾಡುವುದು ಸಾಧ್ಯವಾಗುತ್ತದೆ. ಕಲೆಯು ವೈಯುಕ್ತಿಕ ಅಭಿವ್ಯಕ್ತಿಯಾಗಿರುವಾಗ ವಿಮರ್ಶೆ ವಿಭಿನ್ನ ಮಾನದಂಡಗಳಿಂದ ಇಂಥ ಕಲೆಯನ್ನು ಪರಿಶೀಲಿಸುತ್ತದೆ. ಒಬ್ಬೊಬ್ಬ ಕಲಾವಿದ ನಿಮ್ಮ ಒಂದೊಂದು ದೃಷ್ಟ. ಆದರೆ ವಿಮರ್ಶಕ ಅಂಥ ಕಲೆಯ originality ಕಂಡುಕೊಳ್ಳುವಾಗ ಆ ಸಂದರ್ಭದ, ಆ ಕಲೆಯು ಹುಟ್ಟಿದ ಸುತ್ತಲಿನ ಸಮಾಜದ ಬದುಕಿನ ಜೀವಂತಿಕೆಯನ್ನು ಕಂಡುಕೊಳ್ಳುತ್ತಿರಬೇಕು. ಇದು ಮುಖ್ಯ ಮಾನದಂಡವಾಗಬೇಕು ಎಂದು ರೀಡ್ ಹೇಳುತ್ತಾನೆ.

ಮನಸ್ಸಿನ ಅಭಿರುಚಿ, ಹೊಸತನ್ನು ಅನ್ವೇಷಿಸುವ ಸಾಹಸ ನೋಡುವ ಕಣ್ಣಿನ ಹಿಂದಿರಬೇಕು. ವಿಕೃತಿಯೂ ಸುಂದರವಾಗುವುದು ಹೇಗೆ ಎಂಬುದಕ್ಕೆ ಪುನಃ Believing is seeing ಎಂಬ ದೃಷ್ಟಿಗೆ ಗಮನ ನೀಡಬೇಕೆನ್ನಿಸುವಂಥ ನಮ್ಮ ವಿಮರ್ಶೆಗಳ ಬಗೆಗಿನ ವಿಮರ್ಶೆ ಈಗಷ್ಟೆ ಪ್ರಾರಂಭದ ಹಂತದಲ್ಲಿದೆ ಎನ್ನಬಹುದು.

ಕರ್ನಾಟಕದ ನಮ್ಮ ಇಂದಿನ ವಿಮರ್ಶೆ ಪಶ್ಚಿಮದ ಕಲಾ ವಿಮರ್ಶೆಯ ಪರಿಭಾಷೆಯ ಒಳನೋಟಗಳನ್ನು ಒಳಗೊಳ್ಳಲು ಪ್ರಯತ್ನಿಸುತ್ತಿರುವಂಥದ್ದು. ಹೊಸ ಭಾಷೆಯನ್ನು ಅಳವಡಿಸಿಕೊಳ್ಳಲು, ಅನ್ವೇಷಿಸಿಕೊಳ್ಳಲು, ಅತ್ಯಂತ ಶಕ್ತಿಯುತ ಪ್ರಯತ್ನಗಳು ೧೯೮೦ರ ದಶಕದ ನಡುವೆಯೇ ನಡೆದಿದೆ. ಕರ್ನಾಟಕದ ಕಲಾ ವಿಮರ್ಶೆಯ ಬೇರುಗಳನ್ನು ಹುಡುಕ ಹೊರಟರೆ ಮೊದಲಿಗೆ ನೆನಪಾಗುವುದು ಕಲೆಯ ಕುರಿತ ಪರಿಚಯಾತ್ಮಕ ಬರಹಗಳ 'ಕಲಾ' ಪತ್ರಿಕೆ. ೧೯೩೦ರಲ್ಲಿ ಅ.ನ.ಸುಬ್ಬರಾಯರು ಬೆಂಗಳೂರಿನಲ್ಲಿ ಕಲಾಮಂದಿರದಿಂದ ಆರಂಭಿಸಿದ ಈ ಪತ್ರಿಕೆಯಲ್ಲಿ ಆಗಾಗ ಕಲಾ ಪ್ರದರ್ಶನಗಳನ್ನು ಪರಿಚಯಿಸುತ್ತಿದ್ದರು. ೧೯೪೫-೬೫ರ ನಡುವೆ ಬೆಂಗಳೂರಿನ ಮೈಸಿಂಡಿಯಾ ಪತ್ರಿಕೆಯಲ್ಲಿ ಎಸ್.ಎಸ್.ಕೊಠಾರಿ ಕಲೆಯ ಬಗ್ಗೆ ಕಲಾಪ್ರದರ್ಶನಗಳ ಬಗ್ಗೆ ಬರೆದರೆ, ಅದೇ ಸಂದರ್ಭದಲ್ಲಿ ಶಾಂತಿನಿಕೇತನದಲ್ಲಿ ಚಿತ್ರಕಲೆಯನ್ನು ಕಲಿತು ಬಂದಿದ್ದ ನಾರಾಯಣ ಸಂಗಮರು ಕಲೆಯ ವಿವರಣಾತ್ಮಕ ಬರಹಗಳನ್ನು ಬರೆಯುತ್ತಿದ್ದರಲ್ಲದೆ, ಬೆಂಗಳೂರು ಆಕಾಶವಾಣಿಯಲ್ಲೂ ಕಲೆಯ ಕುರಿತ ತಮ್ಮ ವಿಶಿಷ್ಟ ದೃಷ್ಟಿಯಲ್ಲಿ ಮಾತನಾಡುತ್ತಿದ್ದರೆಂದು ಹೇಳಿದ್ದಾರೆ. ೧೯೪೯ರಲ್ಲಿ ಡಾ.ಎಂ.ಶಿವರಾಮ್ ಅದೇ ಸಂದರ್ಭದಲ್ಲಿ ವೆಂಕಟಾಚಲಂರವರು ಇಂಗ್ಲೀಷ್ ವಿಮರ್ಶೆಯ ಬರಹಗಳು, ೧೯೫೪ರಲ್ಲಿ ಬಿ.ಪಿ.ಕೆ. ಶಾಸ್ತ್ರಿಯವರ ಬರಹ ಪ್ರಜಾವಾಣಿಯಲ್ಲಿ ಪ್ರಕಟವಾಯಿತು. ೧೯೫೬ರಿಂದ ಕಲಾವಿಮರ್ಶೆಯ ಬರಹಗಳನ್ನು ಬರೆಯತೊಡಗಿದರು. ೧೯೭೦ರ ಹೊತ್ತಿಗೆ ಹೆಚ್ಚಾಗಿ ಚಿತ್ರ, ಶಿಲ್ಪಗಳಿಗಿಂತ ಸಂಗೀತ, ನೃತ್ಯಗಳಿಗೆ ಒತ್ತು ನೀಡಿದ ಬರಹಗಳು ಕಾಣಬರುತ್ತವೆ.

೧೯೬೦-೬೪ರ ಕಾಲದಲ್ಲಿ ಎಸ್.ಎನ್.ಚಂದ್ರಶೇಖರ್ 'ಸಂಯುಕ್ತ ಕರ್ನಾಟಕ'ದಲ್ಲಿ ಚಿತ್ರಕಲಾ ಪ್ರದರ್ಶನಗಳ ಕುರಿತು ಬರೆಯಲಾರಂಭಿಸಿದರು(ಇದೇ ಸಂದರ್ಭದಲ್ಲಿ ಎಸ್.ಜಿ.ವಾಸುದೇವ ಸಂ.ಕ.ಪ. ಕ್ಯಾರಿ ಕೇಚರ್‌ಗಳನ್ನು ಬರೆಯುತ್ತಿದ್ದರು). ೧೯೮೦ರ ದಶಕದಲ್ಲಿ ಕಲೆಯ ಬಗ್ಗೆ ಬರೆಯುವ ಸ್ವತಃ ಕಲಾವಿದರೇ ಆಗಿದ್ದ ವಿಮರ್ಶಕರು ಹುಟ್ಟಿಕೊಂಡದ್ದು ವಿಶೇಷ. ಹೊಸ ಸಂದರ್ಭಕ್ಕೆ, ಹೊಸ ದೃಷ್ಟಿಕೋನ ಹೊಂದಿದ ಹೆಚ್.ಎನ್.ಸುರೇಶ್, ಕೆ.ವಿ.ಸುಬ್ರಹ್ಮಣ್ಯಂ, ಚಿ.ಸಂ.ಕೃಷ್ಣ ಶೆಟ್ಟಿಯವರುಗಳು ಕಲಾವಿಮರ್ಶೆ ಹಿಂದಿಗಿಂತಲೂ ವಿಭಿನ್ನ ಹಾದಿಯಲ್ಲಿರುವಂತೆ ನೋಡಿಕೊಂಡವರು. ವಿಮರ್ಶೆಯ ಗಾಂಭೀರ್ಯ, ಪ್ರಾಮುಖ್ಯತೆಗಳನ್ನು ಪ್ರದರ್ಶಿಸಲು ಅವಕಾಸವಾಗುವಂಥ ಹಲವು ಬೆಳವಣಿಗೆಗಳು, ಕಲಾಪ್ರದರ್ಶನಗಳು, ಉತ್ಸವಗಳು ನಡೆದವು. ೧೯೯೦ರ ನಂತರ ಸುರೇಶ್ ಜಯರಾಮ್, ಶ್ರೀನಿವಾಸ ಮೂರ್ತಿ, ಅನಿಲ್ ಕುಮಾರ್, ಹಸ್ಪ್ ಮ್ಯಾರ್ಥಿವ್, ಪದ್ಮಜಾ ಮೊದಲಾದವರು. ತಮ್ಮ ಬರಹಗಳಲ್ಲಿ ವಿಭಿನ್ನ ರೀತಿಯ ವಿಮರ್ಶೆಯ ಗಾಂಭೀರ್ಯತೆಗಳು, ಗುರುತಿಸಬಹುದು. ಇವರಲ್ಲಿ ಬಹುತೇಕ ವಿಮರ್ಶಕರು ಗ್ಯಾಲರಿಗಳ ಕಲಾ ಪ್ರದರ್ಶನ ಕೆಟಲಾಗುಗಳಿಗೂ ಹೆಚ್ಚು ಹೆಚ್ಚು ಬರೆಯುತ್ತಿದ್ದರು. ಈ ಪ್ರಕಾರದ ವಿಮರ್ಶೆಯನ್ನು ಹೆಚ್ಚು ಶ್ರೀಮಂತಗೊಳಿಸುತ್ತಿದ್ದಾರೆ. ಹೀಗಾಗಿ ವೃತ್ತ ಪತ್ರಿಕೆ, ನಿಯತಕಾಲಿಕೆ ಪತ್ರಿಎಗಳೇ ಅಲ್ಲದೆ ಕೆಟಲಾಗುಗಳೂ, ಕಲಾ ಪ್ರಕಟಣೆಗಳೂ ಸೇರಿ ವೈವಿಧ್ಯಮಯ ರೀತಿಯ ಕಲಾ ವಿಮರ್ಶೆಗಳು ಕಾಣಿಸಿಕೊಳ್ಳುತ್ತಿದ್ದು, ಇನ್ನು Post Mordarn ಸಂವೇದನೆಗಳ ನಡುವೆ ಅತ್ಯಂತ ಗಂಭೀರವಾದ ಹೆಜ್ಜೆಗಳನ್ನು ಇಡುತ್ತಿವೆ ಎಂದು ಹರ್ಷವನ್ನು ವ್ಯಕ್ತಿಪಡಿಸಿದ್ದಾರೆ.

**೮.೫.೨. ಸಂಚಯ**

**ಬೆಂಗಳೂರಿನಲ್ಲಿ ಆರ್ಟ್ ಇಂಡಿಯಾ:** ೧೯೯೬ರಲ್ಲಿ ಸಂಚಯ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ "ಬೆಂಗಳೂರಿನಲ್ಲಿ ಆರ್ಟ್ ಇಂಡಿಯಾ" ಎಂಬ ಲೇಖನದಲ್ಲಿ ಇಂಗ್ಲೀಷ್ ಕಲಾ ಪತ್ರಿಕೆಯ ೩ನೇ ಸಂಚಿಕೆಯ ಬಿಡುಗಡೆಗೊಂಡಾಗ ಅದರ ಮಹತ್ವವನ್ನು ಕುರಿತು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಭಾರತದ ಸಮಕಾಲೀನ ಕಲೆಯನ್ನು ಇಂದಿಗೂ ವಿಶ್ವಕಲಾರಂಗ ಅತ್ಯಂತ ಗಂಭೀರವಾಗಿ ಪರಿಗಣಿಸುತ್ತಿಲ್ಲ(ಜಪಾನ ಹೊರತುಪಡಿಸಿ) ಇತ್ತೀಚೆಗೆ ನಮ್ಮ ಕಲಾವಿದರು ಮತ್ತು ಅವರ ಕಲೆ ಅಲ್ಲಿ ಕಲಾ ಹರಾಜು ಸಂಸ್ಥೆಗಳು, ಪಶ್ಚಿಮದ ಮಾಧ್ಯಮಗಳು, ಸ್ವದೇಶಿ ಪಕ್ಷಪಾತಿಗಳು, ಈ ದೃಷ್ಟಿಯಿಂದ Art and Asia Pactfic ಭಾರತೀಯ ಸಮಕಾಲೀನ ಕಲೆಯತ್ತ ಹೆಚ್ಚಿನ ಗಮನ ನೀಡಿ ಪ್ರಕಟಿಸುತ್ತವೆ. ಕಲೆಯ ಕುರಿತು ಸಾಹಿತ್ಯ, ಕಲಾ ಪತ್ರಿಕೆಗಳೂ ಅಷ್ಟೆ. ಈ ದೃಷ್ಟಿಯಿಂದ ಸಣ್ಣಪುಟ್ಟ ಅನಿಯಮಿತ ಪತ್ರಿಕೆಗಳು ಪ್ರಯತ್ನಿಸುತ್ತಿದರು. ೧೯೯೬ ಏಪ್ರಿಲ್-ಜೂನ್‌ರದಂದು ಆರಂಭಗೊಂಡ Art India(The New Magazine of Art India)ಪತ್ರಿಕೆ ಬಹುದೊಡ್ಡ ರೀತಿಯದ್ದು. ಅದರ ಎರಡನೆಯ ಸಂಚಿಕೆ ಆಗಸ್ಟ್-ಅಕ್ಟೋಬರ್ ೧೯೯೬ರಂದು ಬಿಡುಗಡೆಗೊಂಡಿದ್ದರ ವಿಶೇಷವಾಗಿ

ಇಲ್ಲಿ ವಿಶಾಲ ಆಕಾರದ ವೈವಿಧ್ಯಮಯ ಶೀರ್ಷಿಕೆಗಳ ಸಮಕಾಲೀನ ಭಾರತೀಯ ಕಲೆಯ ಈ ಸಂಚಿಕೆ ಮೊದಲಿನ ಸಂಚಿಕೆಯಂತೆಯೇ ಗಂಭೀರವಾಗಿ ರೂಪುಗೊಂಡಿತ್ತು ಎಂದು ಹರ್ಷವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಮೇಲ್ನೋಟಕ್ಕೆ ಕಲಾ ಸಂಗ್ರಹಕಾರರಿಗೆ, ಗ್ಯಾಲರಿಗಳಿಗೆ ಉಪಯುಕ್ತವಾಗುವಂತೆ ಕಾಣುವ ಈ ಪತ್ರಿಕೆ ಭಾರತೀಯ ಸಮಕಾಲೀನ ಕಲೆಯ ಪ್ರಾದೇಶಿಕ ಸೊಗಡನ್ನು ಇನ್ನೂ ಲೇಪಿಸಿಕೊಳ್ಳಬೇಕಿದೆ. ಕಲಾವಿದರು, ಕಲೆ ಕಲಾ ವಿಮರ್ಶಕರು ಕಲಾ ಅಭಿಮಾನಿಗಳ ನಡುವೆ ಸಂವಾದಗಳೂ ನಿಜವಾದ ಅರ್ಥದಲ್ಲಿ ದೇಶದ ಎಲ್ಲ ಭಾಗಗಳ ಸಮಕಾಲೀನ ಕಲೆಯನ್ನು ಅಡ ಮಾಡಿಕೊಳ್ಳುವ ಸಂವೇದನೆಗಳನ್ನು ಒಳಗೊಳ್ಳುವಂತೆ ಆಗಬೇಕಿದೆ. ಈ ಸಾಧ್ಯತೆ Art Indiaಗೆ ಇದೆ. ಎಂದು ಆಶಯವನ್ನು ವ್ಯಕ್ತಪಡಿಸಿದ್ದಾರೆ. ಇನ್ನು ಮುಂದೆ ರಾಷ್ಟ್ರದ ಒಳ ಹಾಗೂ ಹೊರಗಿನ ಕಲಾ ಚಟುವಟಿಕೆಗಳನ್ನು ಬೆಳೆಯಲು ಹತ್ತು ಹಲವು ಬಿಡಿ ಪತ್ರಿಕೆಗಳ ಮೊರೆ ಹೋಗುವ ಬದಲು ''Art India'' ಒಂದನ್ನೇ ಅವಲಂಬಿಸಬಹುದಾಗಿದೆ. ತಾಂತ್ರಿಕವಾಗಿ ಪತ್ರಿಕೆ ಶ್ರೀಮಂತವಾಗಿದೆ. ಆದರೆ ಇಂಗ್ಲೀಷ್ ಭಾಷೆಯ ಈ ಪತ್ರಿಕೆ ವಿವಿಧ ರಾಜ್ಯಗಳ ಸ್ಥಳೀಯ ಭಾಷೆಯ ಕಲಾ ವಿಮರ್ಶಕರ, ಕಲಾವಿದರ ಅಭಿಪ್ರಾಯ, ಧೋರಣೆಗಳನ್ನು, ಆ ಭಾಗದ ಕಲೆಯ ಒಳನೋಟಗಳನ್ನು ಇತರರಿಗೆ ಪರಿಚಯಿಸುವ ದೃಷ್ಟಿಯಿಂದ ಅನುವಾದಿಸಿ ಬಳಸಿಕೊಳ್ಳುವ ಅಂಕಣವೊಂದನ್ನು ಆರಂಭಿಸಬಹುದಾಗಿದೆ. ಒಟ್ಟಾರೆ ಇದೊಂದು ಅಪೂರ್ವ ಪ್ರಯತ್ನವೆಂದು ಇಲ್ಲಿ ಗುರುತಿಸಲಾಗಿದೆ.

**೮.೫.೩. ಹೊಸತು**

**ಸಾಮಾಜಿಕ ಬದ್ಧತೆಯ ಸೃಜನಶೀಲ ಕಲಾವಿದ ಡಾ. ಶಿವಾನಂದ ಬಂಟನೂರು:** ನವೆಂಬರ್ ೨೦೧೨ರಂದು ಹೊಸತು ತಿಂಗಳು ಪತ್ರಿಕೆಯಲ್ಲಿ ಪ್ರಕಟವಾದ "ಸಾಮಾಜಿಕ ಬದ್ಧತೆಯ ಸೃಜನಶೀಲ ಕಲಾವಿದ ಡಾ.ಶಿವಾನಂದ ಎಚ್.ಬಂಟನೂರ" ಎಂಬ ಲೇಖನದಲ್ಲಿ ಸಂಕ್ಷಿಪ್ತ ರೀತಿಯಲ್ಲಿ ಅವರ ಕಲೆ ಮತ್ತು ಬದುಕನ್ನು ಕುರಿತು ಪ್ರಸ್ತಾಪಿಸಿದ್ದಾರೆ.

ಶಿವಾನಂದ ಅವರು ಮೂಲತಃ ಬಿಜಾಪುರ ಜಿಲ್ಲೆಯ ಸಿಂದಗಿ ತಾಲೂಕಿನ ಕೈನೂರಿನವರು. ಚಿತ್ರಕಲೆಯಲ್ಲಿ ಸ್ನಾತಕೋತ್ತರ ಪದವಿ ಮತ್ತು ಶಿಲ್ಪಕಲೆಯಲ್ಲಿ ಪಿ.ಎಚ್.ಡಿ ಪದವಿ ಪಡೆದಿರುವರು. ದೃಶ್ಯಕಲೆ ಮತ್ತು ಕಲಾವಿದರ ಕುರಿತು ಐದು ಪುಸ್ತಕಗಳನ್ನು(ಪ್ರಸ್ತುತ ೯ ಕೃತಿಗಳು ಕಾಣುತ್ತೇವೆ), ಹಲವಾರು ಲೇಖನಗಳನ್ನು ಪ್ರಕಟಿಸಿರುವರು.

ನಮ್ಮ ಸಮಕಾಲೀನ ಶಿಲ್ಪಕಲೆಯ ಸೃಜನಶೀಲ ಕೊಡುಗೆಗಳಿಗೆ ಕಾರಣರಾದ ಬಹುಮುಖ ಪ್ರತಿಭೆಗಳಲ್ಲಿ ಒಬ್ಬರು. ಸುತ್ತಲಿನ ಆಗುಹೋಗುಗಳ ಆಳದ ದರ್ಶನದಂತಹ ಹಲವು ಶಿಲ್ಪ ಸೃಷ್ಟಿಗಳು ಇವರಿಂದ ಮೂಡಿಬಂದಿವೆ. ಐತಿಹಾಸಿಕ ಪ್ರಜ್ಞೆಯ ಜೊತೆ ಜೊತೆಗೆ ಸಮಕಾಲೀನ ಪ್ರಜ್ಞೆಯನ್ನು ಅರಗಿಸಿಕೊಂಡ, ಕೆಲವೊಮ್ಮೆ ಸಮಾಜವನ್ನು ನಿರಚಿಸಿದ ಸೃಷ್ಟಿಗಳು ಇವರವು.

ಲೇಖನದಲ್ಲಿ ಪ್ರಕಟಕೊಂಡ ಶಿಲ್ಪ ಕೃತಿಗಳಲ್ಲಿ ನಾವು ಕಾಣಬಹುದು. ಪ್ರಸ್ತುತ ಹಂಪಿ ಕನ್ನಡ ವಿಶ್ವವಿದ್ಯಾಲಯದಲ್ಲಿ ಸೌಂದರ್ಯ ಶಾಸ್ತ್ರ ಮತ್ತು ಚಿತ್ರಕಲೆಯನ್ನು ಕಲಿಸುತ್ತಿರುವರು.

**೮.೩.೪. ಕರ್ನಾಟಕ ಕಲಾವರ್ತೆ**

**ಹೆಚ್.ಎಸ್.ಇನಾಮತಿ (ಶತಮಾನೋತ್ಸವ):** ಕರ್ನಾಟಕದ ಹಿರಿಯ ಚಿತ್ರಕಲಾವಿದರಲ್ಲೊಬ್ಬರಾಗಿದ್ದ ಹರಿರಾವ್ ರಾಮರಾವ್, ಇನಾಮತಿಯವರು ೧೯೦೦ರಲ್ಲಿ ಜಬ್ಬಲ್‌ಪುರದಲ್ಲಿ ಹುಟ್ಟಿದರು. ವಿಶ್ವವಿದ್ಯಾನಿಲಯದ ಎಂಟ್ರೈನ್ಸ್ ಪರೀಕ್ಷೆಯವರೆಗೆ ಓದಿದ ನಂತರ ಕಲಾಸಕ್ತಿಯ ಪ್ರಭಾವದಿಂದ ಹಾಗೂ ತಂದೆ ಉತ್ತೇಜನದಿಂದ ಮುಂಬೈನ ಸರ್.ಜೆ.ಜೆ.ಸ್ಕೂಲ್ ಆಫ್ ಆರ್ಟ್ಸ್ ಕಲಾಶಾಲೆಯಲ್ಲಿ ಸಮರ್ಥ ಗುರುಗಳ ಮಾರ್ಗದರ್ಶನದಲ್ಲಿ ಐದು ವರ್ಷಕಾಲ ಚಿತ್ರಕಲಾ ವ್ಯಾಸಂಗ ಅವಧಿಯಲ್ಲಿ ನಡೆದ ಸ್ಪರ್ಧೆಯೊಂದರಲ್ಲಿ ಜಯಶಾಲಿಯಾಗಿ 'ಮೇಯೋ ವಿದ್ಯಾರ್ಥಿ ವೇತನ ದೊರೆಯಿತು.

ಇನಾಮತಿಯವರು ಧೋತಿ, ಜುಬ್ಬಾ ಧರಿಸಿ, ಬೆಳ್ಳಿಯ ಬಣ್ಣದ ಉದ್ದನೆಯ ತಲೆಗೂದಲನ್ನು ಹೊಂದಿದ್ದು, ಅಂಗ ಸಾಧನೆಯಿಂದ ಉತ್ತಮ ದೇಹದ ಸಂಪತ್ತನನು ಹೊಂದಿದ್ದರು ಎಂದು ಸಿ.ಹೆಚ್. ಪ್ರಹ್ಲಾದ್‌ರಾವ್ ವ್ಯಕ್ತಪಡಿಸಿದ್ದಾರೆ. ಮುಂಬಯಿಯ ಬ.ವಿ ಅಂಡ್ ಸಿ.ಐ.ರೈಲ್ವೇ ಹಾಗೂ ಬೆಂಗಾಲ್ ನಾಗ್‌ಪುರ ರೈಲ್ವೇ ವಿಭಾಗಗಳಿಗೆ 'ವಿನಟ್ ಬಾಂಬೆ', 'ವಿನೆಟ್ ನಾಗ್‌ಪುರ' ಇತ್ಯಾದಿ ಭಿತ್ತಿ ಪತ್ರಗಳನ್ನು ಪ್ರಚಾರಕ್ಕಾಗಿ ಅತ್ಯಂತ ಆಕರ್ಷಕವಾಗಿ ಸಿದ್ಧಪಡಿಸಿಕೊಟ್ಟಿದ್ದರು. ಈ ಭಿತ್ತಿ ಪತ್ರಗಳನ್ನು ಮೈಸೂರು ಸಂಸ್ಥಾನದ ರೈಲ್ವೇ ಟ್ರಾಫಿಕ್ ಮ್ಯಾನೇಜರ್ ನೋಡಿ ಆಕರ್ಷಿತಗೊಂಡು, ಕಲಾವಿದನ ಬಗ್ಗೆ ವಿಚಾರಿಸಿ, ಆತ ಬೆಂಗಳೂರಿನಲ್ಲಿ ವಾಸಿಸುತ್ತಿದ್ದಾರೆಂದು ಹೆಮ್ಮೆಪಟ್ಟು, ವಿಳಾಸ ಹುಡುಕಿ 'ವಿಸಿಟ್ ಮೈಸೂರು ದಸರಾ' ಬಗ್ಗೆ ಎರಡು ಭಿತ್ತಿಪತ್ರಗಳನ್ನು ಸಿದ್ಧಪಡಿಸಿಕೊಡಲು ಸೂಚಿಸಿದರು. ಆದರೆ ಹಿತ್ತಲು ಗಿಡ ಮದ್ದಲ್ಲ ಎಂಬಂತೆ ಅವರಿಗೆ ಸಂಭಾವನೆಯಾಗಿ ಕೊಡಲು ಬಂದ ಹಣ ಕೇವಲ ಬಂದ ಹಣ ಕೇವಲ ಐವತ್ತು ರೂಪಾಯಿಗಳು ಬೇಸರಗೊಂಡು ಭಿತ್ತಿಪತ್ರಗಳನ್ನು ಕೊಡಲು ನಿರಾಕರಿಸಿದರು.

ಕಲೆಯ ಕುರಿತ ಲೇಖನಗಳನ್ನು ಇನಾಮತಿಯವರು ಇಂಗ್ಲೀಷಿನಲ್ಲಿ ಬರೆಯುತ್ತಿದ್ದರಲ್ಲದೆ, ಕಲಾ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಪಾಲ್ಗೊಳ್ಳುತ್ತಿದ್ದರು. ರಾಜ್ಯದ ಚಿತ್ರಕಲಾವಿದರ ಮಹಾಪರಿಷತ್ತಿನ ಕಾರ್ಯದರ್ಶಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಇನಾಮತಿಯವರು ಜಲವರ್ಣದಲ್ಲಿ ನಿಸರ್ಗ ಚಿತ್ರಗಳನ್ನೂ, ಸಂಯೋಜನೆಗಳನ್ನೂ ರಚಿಸಿ ಜನಪ್ರಿಯರಾಗಿದ್ದರು. ಅವರ ಹಲವಾರು ಕೃತಿಗಳು ಮೈಸೂರಿನ ಜಗನ್ಮೋಹನ ಶಾಲೆಯ ಸಂಗ್ರಹದಲ್ಲಿದ್ದು, ಕೆಟ್ಟದಾಗಿ ಪ್ರದರ್ಶಿಸಲ್ಪಟ್ಟಿದ್ದವು. ೧೯೪೮–೪೯ರ ಅವಧಿಯಲ್ಲಿ ಆ ಗ್ಯಾಲರಿಯನ್ನು ಸುವ್ಯವಸ್ಥೆಗೊಳಿಸಿದ ಜೇಮ್ಸ್, ಕಸಿನ್ಸ್ ಇನಾಮತಿಯವರ ಕೃತಿಗಳನ್ನು ಆಯ್ದು ಒಂದೇ ಗೋಡೆಯಲ್ಲಿ ಪ್ರದರ್ಶಿಸುವ ವ್ಯವಸ್ಥೆ ಮಾಡಿದರು.

ಬೆಂಗಳೂರಿನ ನಿವೃತ್ತ ಹಿರಿಯ ಪತ್ರಕರ್ತ ಬ.ಶ್ರೀನಿವಾಸಮೂರ್ತಿಯವರ ಹಾಗೂ ಇನ್ನಿತರ ಗಣ್ಯರ ಸಂಗ್ರಹಗಳಲ್ಲಿ ಇನಾಮತಿಯವರ ಕೃತಿಗಳಿವೆ. ಇವುಗಳಲ್ಲಿ ಚಿತ್ರಿಸಿದ "ಬಾಂದ್ರಾ ಪೂರ್ವ" ಜಲವರ್ಣದ ಬಾಷ್ ತಂತ್ರದ ಕೃತಿ. ಸರಳ-ಸುಂದರ, ಹಾಗೆಯೇ ಇದರ ಉತ್ತಮ ಕೃತಿಗಳು ದೇಶ-ವಿದೇಶಗಳ ಹಲವಾರು ಸಂಗ್ರಹಗಳಲ್ಲಿ ಹಂಚಿ ಹೋಗಿವೆ. ೧೯೩೦ರಲ್ಲಿ ಲಂಡನ್ನಿನಲ್ಲಿ ನಡೆದ ಕಲಾಪ್ರದರ್ಶನವೊಂದರಲ್ಲಿ ಅವರ 'ನ್ಯಾಯ' ಶೀರ್ಷಿಕೆಯ ಕೃತಿ ವಿಮರ್ಶಕರ ಪ್ರಶಂಸೆಗೆ ಪಾತ್ರವಾಯಿತು. ಇವರ ಕೃತಿಗಳಲ್ಲಿ ವರ್ಣಗಳ ಸ್ವಾಭಾವಿಕ, ಸ್ವಚ್ಛತೆ ಎದ್ದು ಕಾಣುವ ಅಂಶಗಳಾಗಿವೆ.

ಒಮ್ಮೆ ಕಾಶ್ಮೀರದ ಆಶ್ರಯವೊಂದರಲ್ಲಿ ಸ್ವಲ್ಪ ಕಾಲ ಇದ್ದು ಬಂದ ಅವರು ೧೯೮೦ ಆಗಸ್ಟ್ ೫ ರಂದು ನಿಧನರಾದರು. ಮುಂಬಯಿಯ 'ಇಲ ಸ್ಟ್ರೇಟೆಡ್ ವೀಕ್ಲಿ', 'ಟೈಂಸ್ ಆಫ್ ಇಂಡಿಯ'ಗಳಲ್ಲಿ ಸ್ವಲ್ಪ ಕಾಲ ಕಲಾವಿದರಾಗಿ ದುಡಿದಿದ್ದ ಇನಾಮತಿಯವರು ಉತ್ತಮ ಶಿಕ್ಷಕರಾಗಿದ್ದರು. ಸಮಕಾಲೀನ ಕಲಾವಿದರಿಂದ ಜೀನಿಯಸ್ ಎಂದೆನ್ನಿಸಿಕೊಂಡಿದ್ದ ಇನಾಮತಿಯವರನ್ನು ಬೆಂಗಳೂರಿನ ಜ್ಞಾನ ಜ್ಯೋತಿ ಕಲಾಸಂಘ ೧೯೬೮-೬೯ರಲ್ಲಿ ಸನ್ಮಾನಿಸಿತು. ರಾಜ್ಯ ಲಲಿತಕಲಾ ಅಕಾಡೆಮಿ ೧೯೭೫ರಲ್ಲಿ ಪ್ರಶಸ್ತಿ ನೀಡಿ ಸನ್ಮಾನಿಸಿತು.

ಜುಲೈ-ಸೆಪ್ಟೆಂಬರ್ ೨೦೦೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಬೆಂಗಳೂರು, ಇದರ ಕಲಾವಾರ್ತೆ ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ 'ಶತಮಾನೋತ್ಸವ' ಶೀರ್ಷಿಕೆಯಲ್ಲಿ ಎಚ್.ಎಸ್.ಇನಾಮತಿಯವರು ಕುರಿತ ಸಂಕ್ಷಿಪ್ತ ರೀತಿಯ ಬದುಕು ಮತ್ತು ಕಲಾಜೀವಿ ಎಂಬ ಬಗ್ಗೆ ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಕಟಿಸಿದ ದೃಶ್ಯಕಲೆಯ ಆರಾಧಕರು ಪುಸ್ತಕ ಬರೆದು ಕೊಡಲಾಗಿದ್ದು, ಒಂದು ಲೇಖನವು ಕಲಾವಾರ್ತೆಯಲ್ಲಿ ಅವರ ಶತಮಾನೋತ್ಸವ ಅಂಗವಾಗಿ ಕಲಾವಾರ್ತೆಯಲ್ಲಿ ಅದನ್ನು ಪುನರ್ ಮುದ್ರಿತ ಮಾಡಲಾಗಿದ್ದು ಇಲ್ಲಿ ಬಳಸಲಾಗಿದೆ.

**ದೃಶ್ಯಕಲೆಯಿಂದ ಸಾಮಾಜಿಕ ಪಲ್ಲಟ ಸಾಧ್ಯವೆ?:** ಏಪ್ರಿಲ್-ಜೂನ್-೨೦೦೯ರಲ್ಲಿ "ಕಲಾವಾರ್ತೆ" ತ್ರೈಮಾಸಿಕ ಪತ್ರಿಕೆಯಲ್ಲಿ ಪ್ರಕಟವಾದ "ದೃಶ್ಯಕಲೆಯಿಂದ ಸಾಮಾಜಿಕ ಪಲ್ಲಟ ಸಾಧ್ಯವೆ?" ಎಂಬ ಲೇಖನದಲ್ಲಿ ದೃಶ್ಯಕಲೆಯು ಇಂದು, ಅಭಿವ್ಯಕ್ತಿಯ ಸಾಧನವಾಗಿದ್ದು, ಅದರಲ್ಲಿಯೂ ಸಮಾಜದ ಜೊತೆಗೆ ಕಾಲ ಬದಲಾದಂತೆ, ಪ್ರಭಾವದ ಹಿನ್ನೆಲೆಯಲ್ಲಿ ಮಾಧ್ಯಮಗಳನ್ನು ಬಳಸಿಕೊಳ್ಳುವ ಬದಲಾವಣೆಗೊಳ್ಳುತ್ತಾ ಸಾಗುತ್ತಿದೆ. ಅದರಿಂದ ಸಮಾಜದ ಆಗೂ ಹೋಗುಗಳನ್ನು ಮತ್ತು ಪ್ರಭಾವ ಬೀರಿ ಬದಲವಣೆಗಳು ಸಾಧ್ಯವಾಗಬಹುದೇ ಎಂಬ ಪ್ರಶ್ನೆಯನ್ನು ಮುಂದಿಟ್ಟುಕೊಂಡು ವಿಮರ್ಶಕರು ಇಲ್ಲಿ ವಿವರಣೆ ನೀಡುತ್ತಾ ಹೋಗಿದ್ದಾರೆ.

ಕಲಾವಿದ/ಕಲಾವಿದೆಯರ ಅನುಭವ ಲೋಕ ಭಿತ್ತಿ ಬೆಳೆಯುವ ವೇದಿಕೆಗೆ ಭೂಮಿಕೆಯಾಗುವ ಪಂಚಭೂತಗಳ ಪಠ್ಯ ಅವು. ಈ ಪಠ್ಯದ ರಚನೆ ವಿರಚನೆಗಳ ನಡುವೆ ಸೃಷ್ಟಿಯಾಗುವ

ಕಲಾಕೃತಿಯೊಂದರ ಅರ್ಥ ಮುಖ್ಯವಲ್ಲ. ತೋರುವ ಹೊಸ ಅನುಭವ ಲೋಕ ಮುಖ್ಯ. ದೃಶ್ಯಕಲೆಯು ಒಂದು ವೃಕ್ಷದಂತೆ, ಅವರ ಮೌಲ್ಯವು ಅಲ್ಲಿನ ಜನರ ಅಂತರ್ಗತ ಸಾಂಸ್ಕೃತಿಕ ಶಕ್ತಿಯಲ್ಲಿದೆ. ಆ ನೆಲದ ಸತ್ವ ಆ ನಿರ್ದಿಷ್ಟ ಕಾಲದ ಧೋರಣೆಗಳನ್ನು ಸ್ಪಷ್ಟಗೊಳಿಸುತ್ತದೆ. ಇತ್ತೀಚೆಗೆ ಕಲೆ ದುಡಿಮೆಯ ಒಂದು ನಿರ್ದಿಷ್ಟ ಗುಣವಾಗಿ ಕಾಣಿಸಿಕೊಂಡಿದೆ.

ಕಲಾವಿದರ ಅಭಿವ್ಯಕ್ತಿಗಳೂ, ಸುತ್ತಲಿನ ಸಮಾಜಕ್ಕೂ ಒಂದು ರೀತಿಯಲ್ಲಿ ಜೈವಿಕ ಸಂಬಂಧವಿದೆ ಎಂದೇ ಅರಿಸ್ಟಾಟಲ್, ಲಾಂಗಿನೆಸ್, ಹೊರಸೆಯಂಥವರು ಹೇಳಿದ್ದು, ಇಂದಿಗೂ ಸರಿಯಾಗಿಯೇ ಇದೆ. ವರ್ಡ್ಸ್‌ವರ್ತ್, ಟಾಲ್‌ಸ್ಟಾಯ್, ಕಲಾವಿದನೆಂದರೆ "ಒಬ್ಬ ಮನುಷ್ಯ ಇತರ ಮನುಷ್ಯನೊಂದಿಗೆ ಸಂಬವಿಸುವಂತೆ", "ಮನುಷ್ಯರ ಸರಳ, ಭಾಷೆಯಂತೆ" ಅಭಿವ್ಯಕ್ತಿಸಬೇಕು ಎಂದು ಹೇಳಿದ್ದಾರೆ. ಕಾರ್ಲ್‌ಮಾರ್ಕ್ಸ್, ಮನುಷ್ಯನ ನಡವಳಿಕೆಯನ್ನು 'ಹಣ' ನಿಯಂತ್ರಿಸುತ್ತಿದೆ ಎನ್ನುತ್ತಾನೆ.

ಇಂಥ ಮನುಷ್ಯನ ಸಮಾಜವನ್ನು ರೂಪಿಸುವ, ನಿಯಂತ್ರಿಸುವ ಅಥವಾ ಪ್ರಭಾವಿಸುವ ಕೆಲಸವನ್ನು ಮಾಡುವವೆಂದು ದೃಶ್ಯಕಲೆಯ ಕಲಾವಿದ/ಕಲಾವಿದೆಯರು ಹೇಳಿಕೊಳ್ಳಲಾರರು. ಅದು ಸಾಧ್ಯವು ಅಲ್ಲದ್ದು. ವಿಶ್ವದೃಶ್ಯ ಕಲಾ ಇತಿಹಾಸದಲ್ಲಿ ಯಾವುದೇ ಕಲಾಕೃತಿಯಿಂದ ಸಮಾಜ ಬದಲಾವಣೆ ಅಥವಾ ಕ್ರಾಂತಿ ಇತ್ಯಾದಿಗಳು ಆಗಿಲ್ಲ. ಆದರೆ ಯುದ್ಧದ ಸಂದರ್ಭ ಹಾಗೂ ಅನಂತರದಲ್ಲಿ ಆ ತಾಜಾ ಅನುಭವ ಮೂಲದ ಗ್ರಹಿಕೆಗಳ ಕೃತಿಗಳು ಹಲವು ನೆಲೆಗಳಲ್ಲಿ ಮೂಡಿಬಂದಿವೆ.

ನಮ್ಮ ಸಂದರ್ಭದ ಕಲಾವಿದ/ಕಲಾವಿದೆಯರು ಸಮಾಜವನ್ನು ಬದಲಿಸುವ ಪಾತ್ರ ತಮ್ಮ ಅಭಿವ್ಯಕ್ತಿಗೆ ಇದೆ ಎನ್ನುತ್ತಾರೋ? ಇಲ್ಲ ಎನ್ನುತ್ತಾರೋ ಗೊತ್ತಿಲ್ಲ. ಆದರೆ ಅವರು ಸಮಾಜಕ್ಕೆ ಹತ್ತಿರವಾಗಿ ಪೂರಕವಾಗಿ, ಅಭಿವ್ಯಕ್ತಿಸಿ ಪ್ರತಿಕ್ರಿಯಿಸುತ್ತಾರೆ. ಹಬ್ಬ-ಆಚರಣೆ ಕರಕುಶಲಗಳ ಜಾನಪದ ಕಲಾವಿದರು ಹಲವು ರೀತಿಗಳಲ್ಲಿ ತಮ್ಮ ಕುಶಲತೆಯಿಂದ ಸಮಾಜಕ್ಕೆ ನೆರವಾಗುತ್ತ ಬಂದಿದ್ದಾರೆ. ದೃಶ್ಯಕಲೆಗೆ 'ಮಾಂತ್ರಿಕ ಶಕ್ತಿ' ಇದೆ ಎಂದು ನಂಬಿದ ಇತಿಹಾಸ ಪೂರ್ವ ಗುಹಾಚಿತ್ರಗಳ ಕಲಾವಿದರಂತೆ ಇಂದಿಗೂ, ಬಹುತೇಕ ಸಂಖ್ಯೆಯ ನಮ್ಮ ಸಮಕಾಲೀನ ಕಲಾವಿದ/ಕಲಾವಿದೆಯರು 'Art is Magic' ಎಂಬ ಪಿಕಾಸೋನ ನಂಬಿಕೆಯಂತ ಸಹಮತ ಹೊಂದಿದವರಾಗಿದ್ದಾರೆ.

ಎಷ್ಟೋ ಸಲ ಕಲಾವಿದ, ಕಲಾವಿದೆಯರು 'a head of time' ನಂತೆ. ಸಮಾಜದೊಂದಿಗೆ ಹೊಂದಿಕೊಳ್ಳದೆ ತಿರುಗಿ ಬೀಳುವುದೂ ಉಂಟು. ಸುತ್ತ ನೋಡಿದ್ದನ್ನು ಇದ್ದುದನ್ನು ಇದ್ದಂತೆ ಅಭಿವ್ಯಕ್ತಿಸಲಾರರು. ಪಿಕಾಸೋ ಕೇಳುವ ಪ್ರಶ್ನೆಗಳು ಹೀಗಿವೆ. 'ಹಕ್ಕಿಯ ಹಾಡನ್ನು ಅರ್ಥಮಾಡಿ ಕೊಳ್ಳಬೇಕೆಂದು ಏಕೆ ಅನ್ನಿಸುವುದಿಲ್ಲ? ರಾತ್ರಿಗಳೇಕೆ ಪ್ರೀತಿಸುತ್ತೇವೆ? ಎಂದು ಯಾರೋ

ಯೋಚಿಸುತ್ತ ಕೂಡುವುದಿಲ್ಲ. ಅವೆಲ್ಲವನ್ನು ನಮ್ಮದಾಗಿಸಿಕೊಂಡಿದ್ದೇವೆ. ಕಲಾಕೃತಿಯ ವಿಷಯಕ್ಕೆ ಬಂದಾಗ ಮಾತ್ರ ಜನರು ಅರ್ಥಮಾಕೊಳ್ಳಲು ಬಯಸುತ್ತಾರೆ! ಇಲ್ಲಿ ಭಾವನೆಗಳನ್ನು ಅನುಭವಿಸುವುದು ಸಾಧ್ಯವಾಗಬೇಕು. ಏಕೆಂದರೆ 'ಕಲೆ ಸಮಾಜದೊಂದಿಗೆ ಸಹಯೋಗಿಯಾಗಿದೆ; ಪ್ರೀತಿ ಕಲಾಕೃತಿಯೂ ಸಾಮಾಜಿಕ, ರಾಜಕೀಯ ಬೆಳವಣಿಗೆಗಳ ಕ್ರಿಯೆಗಳಿಗೆ ಪ್ರತಿಕ್ರಿಯೆಗಳೇ ಆಗಿರುತ್ತವೆ.

ಸಮಾಜದ ಕಣ್ಣಿನ ಮನಸ್ಸಿನ ಈ ವಿಶಿಷ್ಟ ಅಗಾಧ ಶಕ್ತಿಯನ್ನು ಅರಿತಿರುವ ಕಲಾವಿದ/ಕಲಾವಿದೆಯರು ಸಮಾಜದ ಪರಿವರ್ತನೆ ನಮ್ಮ ಉದ್ದೇಶ ಅಲ್ಲ ಎಂದು ಅರಿತಿದ್ದಾರೆ. ಹಾಗಾಗಿಯೇ ತಾವು ಕಂಡದ್ದನ್ನು ಅದು ಇರುವ ರೀತಿಯಲ್ಲಿಯೇ ಚಿತ್ರಿಸಿದರೆ ಅಪಾಯಗಳನ್ನು ಎದುರಿಸಬೇಕಾಗಿ ಬರಬಹುದು. ಉದಾ: ಹುಸೇನರವರ 'ಗಂಗಾಜಲ್' ಚಿತ್ರದ ಅಭಿವ್ಯಕ್ತಿಗೆ ಕೋರ್ಟಿನ ಮೆಟ್ಟಿಲು ಏರಬೇಕಾಯಿತು. ಜನರು ತಮ್ಮ ಜೀವನದಲ್ಲಿ ಕನಸುಗಳು ನಿಜವಾಗುವುದನ್ನು ನಿರೀಕ್ಷಿಸುತ್ತಾರೆ. ಕಲಾವಿದರಿಂದ ಕಲೆಗಳಿಂದ ಬಹುತೇಕ ಸಮಾಜಗಳ ನಿರೀಕ್ಷೆ ಮನರಂಜನೆ, ಆ ಕ್ಷಣದ ಖುಷಿ ಅಷ್ಟೇ. ಕೇವಲ ೨೦% ರಷ್ಟು ಜನರಷ್ಟೇ ತಮ್ಮ ಬದುಕಿನ ಸೌಂದರ್ಯಾತ್ಮಕ, ಸಂತೋಷಾತ್ಮಕ ಅನುಭವ ವರ್ಧನೆಗೆ ದೃಶ್ಯಕತೆಗಳಿಗೆ ಹತ್ತಿರವಾಗುತ್ತಾರೆ. ಇದರಿಂದ ಇತ್ತೀಚಿನ ದಿನಗಳಲ್ಲಿ ಬಿ.ಟಿ. techno cooly ಸಂಸ್ಕೃತಿಯ ಉದ್ಯೋಗಿಗಳಂತೆ ಕಲಾವಿದರು ಹೆಚ್ಚು ಹಣಗಳಿಸುವ, ಉತ್ತಮವಾಗಿ ಬದುಕಲು ಸಂದರ್ಭ ಸೃಷ್ಟಿಯಾಗುತ್ತಿದ್ದು, ಸಮಾಜದ ಬದಲಾವಣೆಗೆ ಅಲ್ಲದಿದ್ದರೂ ಸುತ್ತಲಿನ ಬದುಕಿನ ಸೌಂದರ್ಯ ವರ್ಧನೆಗೆ, ಜನರಿಗೆ ವಿಶಿಷ್ಟ ಅನುಭವಗಳನ್ನು ನೀಡುವ ಕಲಾಕೃತಿಗಳ ಸೃಷ್ಟಿಗೆ Public Art or ಸಾರ್ವಜನಿಕ ಶಿಲ್ಪ ಚಿತ್ರ ಸೃಷ್ಟಿಗಳಿಗೆ ಮುಂದಿನ ದಿನಗಳಲ್ಲಿ ಕಾಣಬಹುದು.

ಒಂದು ನಿಟ್ಟಿನಲ್ಲಿ ನಮ್ಮ ದೃಶ್ಯಕಲೆಯ ಹಲವು ಪ್ರಕಾರಗಳು ಸದಾ ನಮ್ಮ ಸಮಾಜವನ್ನು ಆರೋಗ್ಯಕರವಾಗಿಡುವಲ್ಲಿ ಆರ್ಥಿಕ ಮೂಲಗಳು(websit) ಹಿಂದೆಂದಿಗಿಂತಲೂ ಹೆಚ್ಚು ಸಶಕ್ತವಾಗಿರುವುದರಿಂದ ಸಾಂಸ್ಕೃತಿಕ ಮೂಲಗಳನ್ನು ಸಶಕ್ತಗೊಳಿಸುವ ಜವಾಬ್ದಾರಿ ದೃಶ್ಯಕಲೆಗಿದೆ. ಈ ರೀತಿಯ ಪ್ರಭಾವವನ್ನು ಬೀರುತ್ತಲೇ ಆದ ಸಾಮಾಜಿಕ ಬದಲಾವಣೆಗಳನ್ನು ಅದು ಹೆಚ್ಚು ಹೆಚ್ಚು ಗ್ರಹಿಸಿ ಅಭಿವ್ಯಕ್ತಿಸಬಲ್ಲದು. ಸುತ್ತಲಿನ ಸಮಾಜವನ್ನು ಬದಲಿಸಬೇಕೆಂಬ ಅಂಶಕ್ಕೆ ಒತ್ತು ನೀಡಿ ಯಾರೂ ಸೃಷ್ಟಿ ಪ್ರಕ್ರಿಯೆಯಲ್ಲಿ ತೊಡಗುವುದು ಸಾಧ್ಯವಿಲ್ಲ ಎಂಬ ಮಾತು ನಿಜಕ್ಕೂ ಅಕ್ಷರಶಃ ನಿಜವೆಂದು ಹೇಳಬಹುದು.

**ಆಧುನಿಕ ಕಲಾಗ್ಯಾಲರಿ ಮುಂಬಯಿ ಚಿತ್ರಲೋಕ:** ಅಕ್ಟೋಬರ್ ೨೦೧೨ರಿಂದ ಜೂನ್ ೨೦೧೩ರವರೆಗೆ ನಡೆದಿರುವ ಅಕಾಡೆಮಿಯ ಒಟ್ಟು ಕಲಾ ಚಟುವಟಿಕೆಗಳನ್ನು ಕರ್ನಾಟಕ ಲಲಿತಕಲಾ ಅಕಾಡೆಮಿಯು ಪ್ರಕಟಿಸಿರುವ ಕಲಾವಾರ್ತೆಯ ೬೨-೬೪ರ ಸಂಚಿಕೆಯಲ್ಲಿ ಮೂಡಿಬಂದಿದ್ದು, ಅದರಲ್ಲಿನ ಕೆ.ಪಿ.ಸುಬ್ರಹ್ಮಣ್ಯಂರವರು ಬರೆದಿರುವ "ಆಧುನಿಕ ಕಲಾಗ್ಯಾಲರಿ ಮುಂಬಾಯಿ ಚಿತ್ರಲೋಕ" ಎಂಬ ಲೇಖನವು ಪ್ರಕಟಗೊಂಡಿರುವುದು.

ಈ ಸಂಚಿಕೆಯಲ್ಲಿನ ಲೇಖನದಲ್ಲಿ ಸಮಕಾಲೀನ ಸಂದರ್ಭದಲ್ಲಿ ದೃಶ್ಯ ಅಭಿವ್ಯಕ್ತಿಯ ಮಾಧ್ಯಮಗಳಲ್ಲಿ ಒಂದಾದ ಸಿನಿಮಾ ಅದರಲ್ಲಿ ದೃಶ್ಯಕಲಾವಿದರು ತೊಡಗಿರುವ ರೀತಿ ಮತ್ತು ಮುಂಬೈ ಸಿನಿಮಾ ಲೋಕದ ಕುರಿತಾದ ಕಲಾಕೃತಿಗಳು ಪ್ರದರ್ಶನಗೊಂಡಿದ್ದು ಆ ಎಲ್ಲಾ ಅಭಿವ್ಯಕ್ತಿಗಳನ್ನು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ವಿಶ್ವದಲ್ಲಿ ಭಾರತೀಯ ಸಿನಿಮಾ ಸಂಖ್ಯೆಯ ದೃಷ್ಟಿಯಿಂದ ಅಗ್ರಗಣ್ಯವಾದುದು. ಒಂದು ನಿರ್ದಿಷ್ಟ ಉದ್ದೇಶವಿಲ್ಲದ, ಹಲವು ಉದ್ದೇಶಗಳತ್ತ ಹೆಜ್ಜೆ ಹಾಕುತ್ತಿರುವ ನಮ್ಮ ಬಹುತೇಕ ಇಂದಿನ ಕಲಾವಿದ/ಕಲಾವಿದೆಯರು 'ಹಣ' ಕೇಂದ್ರಿತ ಉದ್ದೇಶ, ಪ್ರಯೋಜನಗಳನ್ನೇ ಅವಲಂಬಿಸಿರುವುದು ಗಮನಾರ್ಹ. ಆದರೆ ಮುಂಬಯಿ, ಚಿತ್ರಲೋಕ ಬೆಂಗಳೂರು, ಕೊಲ್ಕತ್ತ ಹಾಗೂ ಚೆನ್ನೈ, ಹೈದರಾಬಾದ್‌ಗಳನ್ನು ನಗಣ್ಯವಾಗಿಸಿರುವ ರಾಜಕಾರಣ ಮುಖಗಳು ಹೊಂದಿದ್ದು, ವಿಶಿಷ್ಟ ಸಿನಿಮಾ ಇತಿಹಾಸವನ್ನು ಅರಗಿಸಿಕೊಂಡಿದೆ. ನವೆಂಬರ್ ೨ ರಿಂದ ಡಿಸೆಂಬರ್ ೨, ೨೦೧೨ರವರೆಗೆ ನಡೆದ, ಪ್ರಾಜೆಕ್ಟ್ ಸಿನಿಮಾ ನಟಿ ರಿಸರ್ಚ ಆರ್ಟ್ ಅಂಡ್ ಡಾಕ್ಯುಮೆಂಟರಿ ಪ್ರಾಕ್ಟೀಸನ್ ಶೀರ್ಷಿಕೆಯಡಿಯಲ್ಲಿ ಬೆಂಗಳೂರಿನ ರಾಷ್ಟ್ರೀಯ ಕಲಾ ಗ್ಯಾಲರಿಯಲ್ಲಿ ದೃಶ್ಯಕಲಾ ಪ್ರದರ್ಶನ ನಡೆಯಿತು.

ಪ್ರದರ್ಶನದಲ್ಲಿ ಚಿತ್ರ, ಶಿಲ್ಪ, ಇನ್‌ಸ್ಟಾಲೇಷನ್ ಹೀಗೆ ಹಲವು ಪ್ರಕಾರದ ಅಭಿವ್ಯಕ್ತಿಗಳು ಮುಂಬಯಿಯ ಸಿನಿಮಾ ಲೋಕವನ್ನು ತಮ್ಮದೇ ಆದ ರೀತಿಯಲ್ಲಿ ಗ್ರಹಿಸಿ ಪ್ರದರ್ಶಿಸಲ್ಪಟ್ಟಿವೆ. ನಗರಗಳು ಏನೇನೆಲ್ಲವನ್ನು ಒಳಗೊಂಡು ಬರುವ ಸಿನಿಮಾ, ಒಳಗೊಂಡು ಮೂಡಿ ಬರುವ ಸಿನಿಮಾ, ಸಂಸ್ಕೃತಿ ನಿರ್ಮಿಸುವ ಮೂಲ ಆಕರಗಳನ್ನು ಈಗಾಗಲೇ ಸಂಗ್ರಹಿಸಲ್ಪಟ್ಟು, ಸಂರಕ್ಷಿಸಲ್ಪಟ್ಟಿರುವುದನ್ನು ಈ ಪ್ರಾಜೆಕ್ಟ್‌ನ ಭಾಗವಾಗಿ ಇಲ್ಲಿ ಪ್ರದರ್ಶಿಸಲಾಗಿದೆ.

ಇತಿಹಾಸ, ಕಲ್ಪನೆ, ತಾತ್ರಿಕತೆಗಳನ್ನು ಅರಗಿಸಿಕೊಂಡು ಅನೇಕ ಕಲಾವಿದ/ಕಲಾವಿದೆಯರ ಕೃತಿಗಳನ್ನು ಅಥವಾ ಅಭಿವ್ಯಕ್ತಿಗಳನ್ನು ಒಟ್ಟುಗೂಡಿಸಿ ಇಲ್ಲಿ ಪ್ರದರ್ಶಿಸಲಾಗಿದ್ದು ನೋಡುಗರಿಗೆ ವಿಶಿಷ್ಟ ಕಲಾ ಪರಂಪರೆ ಹೊಸ ತರಹದ ಬೆಳವಣಿಗೆಗೆ ನಾಂದಿಯಾಗಿರುವುದನ್ನು ಲೇಖಕರು ಮಾರ್ಮಿಕವಾಗಿ ಕಟ್ಟಿಕೊಟ್ಟಿದ್ದಾರೆ.

**೮.೬. ಇತರೆ ಬರಹಗಳು**

೮.೬.೧. ವಿಚಾರ ಸಂಕಿರಣ

೮.೬.೨. ಶಿಲ್ಪ ಮತ್ತು ಕರಕುಶಲಕಲೆ

೮.೬.೩. ಅಭಿವ್ಯಕ್ತಿ

೮.೬.೪. ಕಲಾಸೃಷ್ಟಿ

೮.೬.೧. ವಿಚಾರ ಸಂಕಿರಣ

**ವೈವಿಧ್ಯಮಯ ದೃಷ್ಟಿ ಸೃಷ್ಟಿ:** ದಿನಾಂಕ ೨೪-೦೧-೨೦೧೦ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ವೈವಿಧ್ಯಮಯ ದೃಷ್ಟಿ ಸೃಷ್ಟಿ" ಎಂಬ ಲೇಖನದಲ್ಲಿ ಚಿತ್ರಕಲಾವಿದ ಚಂದ್ರನಾಥ್ ಮತ್ತು ಸುದೇಶ್ ಮಹಾನ್‌ರವರು. ಬೆಂಗಳೂರು ಆರ್ಟ್ ಫೌಂಡೇಶನ್, ರಂಗಭೂಮಿಯವರು ರವೀಂದ್ರ ಕಲಾಕ್ಷೇತ್ರದಲ್ಲಿ ಸನ್ಮಾನಿಸಲಾಗಿತ್ತು. ಈ ಸಂದರ್ಭದಲ್ಲಿ ಬಾನುದೇವ್‌ರವರು ಕಲಾವಿದನ ಮತ್ತು ಕಲಾಕೃತಿಗಳ ಮೌಲ್ಯಕತ್ವದ ಕುರಿತಾಗಿ ಮಾತಾಡಿ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿರುವುದರ ಸಂದರ್ಭದ ಬಗ್ಗೆ ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ಡಿಸೆಂಬರ್ ೦೭, ೨೦೦೯ರಂದು ನಡೆದ ಕಲಾಧ್ಯಾನ ಪುರಸ್ಕಾರ, ಕಲಾ ಪ್ರದರ್ಶನ ಹಾಗೂ ಚಿತ್ರಕಲಾ ಶಿಬಿರ ಹೀಗೆ ವಿಶಿಷ್ಟ ರೀತಿಯ ಕಾರ್ಯಕ್ರಮ ಬೆಂಗಳೂರಿನ ಸ್ವಾತಂತ್ರ್ಯ ಉದ್ಯಾನವನದಲ್ಲಿ ನಡೆದಾಗ ಸನ್ಮಾನವನ್ನು ಸ್ವೀಕರಿಸಿರುವ ಸುದೇಶ್ ಮಹಾನ್ ಮತ್ತು ಬಾನುದೇವ್ ಅವರು ಈ ಕಾರ್ಯಕ್ರಮವಾಗಿ ಮಾತನಾಡುತ್ತ ಬೆಂಗಳೂರಿನ ರಸ್ತೆ ಬದಿ ಚಿತ್ರಗಳ ಬಗ್ಗೆ ಆಕ್ರೋಶಗೊಂಡು ಇಂದಿನ ವಿಕ್ಷಿಪ್ತ ರಾಜಕಾರಣ ಕುರಿತು ಪ್ರತಿಭಟಸಿ, ಗೋಡೆಬರಹ, ಚಿತ್ರ ಬರಹಗಳಿಗೆ ಈ ಬೀದಿ ಭಿತ್ತಿ ಚಿತ್ರಗಳಿಂದಾಗಿ ಪ್ರಸ್ತುತ ಅವಕಾಶ ಇಲ್ಲವಾಗಿದೆ, ಜನಸಾಮಾನ್ಯರ ದೃಷ್ಟಿಗೆ ತಾಗುವಂತೆ ಹಲವೆಡೆ ಈ ಗೋಡೆ ಬರಹ-ಭಿತ್ತಿ ಪತ್ರಗಳು, ಕಾಣಿಸುವಂತೆ ವ್ಯವಸ್ಥೆಯಾಗಬೇಕು, ನಗರದ ಸೌಂದರ್ಯ ಅಂದರೆ ಇನ್ನಿತರ ನೈರ್ಮಲ್ಯವನ್ನು ನಿರ್ಮೂಲನೆ ಮಾಡಿ ಕಾಪಾಡಿಕೊಳ್ಳುವ ಜವಾಬ್ದಾರಿ ನಮಗೆ ಬರಬೇಕು ಎಂದು ಮಾತನಾಡಿರುವ ಅಂಶಗಳನ್ನು ನಮ್ಮ ಮುಂದಿಟ್ಟಿದ್ದಾರೆ.

ಹಾಗೆ ಈ ಕಾರ್ಯಕ್ರಮಕ್ಕೆ ಎಂ.ಬಿ.ಪಾಟೀಲ್, ಬಿ.ಎಸ್.ದೇಸಾಯಿ, ವಿಷ್ಣು, ಚಂದ್ರನಾಥ್ ಹಿರಿಯ-ಕಿರಿಯ ಕಲಾವಿದರು ಚಿತ್ರಗಳನ್ನು ಪ್ರದರ್ಶನ ಮಾಡಿದ್ದು ಒಂದು ವಿಶಿಷ್ಟ ರೀತಿಯ ವ್ಯವಸ್ಥೆ ಏರ್ಪಡಿಸಿದ್ದು ದೃಶ್ಯಕಲೆಯ ಕಾರ್ಯಕ್ರಮ ಇದಾಗಿದೆ ಎಂಬುದು ವಿಮರ್ಶಕರ ಅಭಿಪ್ರಾಯವಾಗಿದೆ.

**ದೃಶ್ಯಲೋಕದ ಅಪೂರ್ವ ಅನಾವರಣ:** ದಿನಾಂದ ೧ ಮಾರ್ಚ್ ೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ದೃಶ್ಯಲೋಕದ ಅಪೂರ್ವ ಅನಾವರಣ" ಎಂಬ ಲೇಖನದಲ್ಲಿ "ವಾಸುದೇವ್‌ರವರ ಕಲೆ ಮತ್ತು ಬದುಕು" ಎಂಬ ಪುಸ್ತಕದ ಕುರಿತು ಪರಿಚಯ ರೂಪದ ವಿಮರ್ಶೆಯನ್ನು ಇಲ್ಲಿ ವಿಮರ್ಶಕರು ಮಾಡಲಾಗಿದೆ.

ನಮ್ಮ ದೃಶ್ಯಕಲಾ ಲೇಖಕರಲ್ಲಿ ಒಬ್ಬರಾದ ಎನ್.ಮರಿಶಾಮಾಚಾರರು ಸಂಪಾದಿಸಿರುವ 'ವೃಕ್ಷ ವಾಸುದೇವರವರ ಕಲೆ ಮತ್ತು ಬದುಕು' ಬಿಡುಗಡೆಯಾದಾಗ ತನ್ನ ಗಾತ್ರದಿಂದ ಸಾಕಷ್ಟು ಸುದ್ದಿ ಮಾಡಿತ್ತು ಎಂದು ಪ್ರಾರಂಭಿಸುತ್ತಾ ಅವರ ಕಲಾಕೃತಿಗಳನ್ನು ಪುಸ್ತಕದ ಒಳಪುಟಗಳು

ಬಳಸಿಕೊಂಡಿರುವ ರೀತಿಯನ್ನು ಅವರ ರೇಖೆ ರೂಪಗಳೇ ಅಲ್ಲದೇ ಅವರ ಕುರಿತ ಅಕ್ಷರ ಪದಗಳನ್ನು ಅಲಂಕರಿಸಿದ್ದಾರೆ.

ಚೌಕಟ್ಟು ಕೇಂದ್ರ ಇತ್ಯಾದಿ ಮಿತಿಗಳ ಬಗ್ಗೆ ಮಾತನಾಡಿದ್ದಾರೆ. ಪುಸ್ತಕದ ಅತ್ಯುತ್ತಮ ಭಾಗವೇ ಸಂದರ್ಶನದ ವಾಸುದೇವ್‌ರವರ ಉತ್ತರಗಳು ಅವರೇ ಮಿತ್ರರಾಗಿರುವ ಯು.ಆರ್.ಅನಂತಮೂರ್ತಿ ಹಾಗೂ ಗಿರೀಶ್ ಕಾರ್ನಾಡರವರುಗಳ ಗಾಂಭೀರ್ಯತೆಯನ್ನು ವಾಸುದೇವರವರು ಎನ್ನುತ್ತಾರೆ. ಈ ಉತ್ತರಗಳನ್ನು ಇಂಗ್ಲೀಷ್‌ನಿಂದ ಕನ್ನಡಕ್ಕೆ ಪ್ರತಿಭಾ ನಂದಕುಮಾರ್‌ರವರು ಭಾಷಾಂತರಗೊಳಿಸಿದ್ದಾರೆ. ವಾಸುದೇವರವರು ತಮ್ಮ ಕೃತಿಗಳಲ್ಲಿ ಕನ್ನಡದ ಅಕ್ಷರಗಳನ್ನು ದುಡಿಸಿಕೊಳ್ಳುವುದು ಕಂಡು ಅನಂತಮೂರ್ತಿಯವರು 'ಕನ್ನಡ ಕಲೆ' ಎಂದು ಪ್ರಸ್ತಾಪ ಮಾಡಿ ಮಂಡಿಸಿದ ವಿಷಯ ವಾಸುದೇವ್‌ರವರ ಗ್ರಹಿಕೆ–ಅಭಿವ್ಯಕ್ತಿಗಳು ಯಾವುದೇ ಅಂಶಗಳಿಗೆ ಪೂರಕವಾಗಲಾರದು ಎಂದು ಅಭಿಪ್ರಾಯಪಡಿಸುತ್ತಾರೆ. ಮುಖ್ಯವಾಗಿ ವಾಸುದೇವ್‌ರವರ ದೃಶ್ಯಲೋಕ ಹಲವರ ಪ್ರಭಾವಗಳ ಆತಂಕಗಳನ್ನು ಮೀರಿ ತಮ್ಮದೇ ಆದ ಸಹಿಯನ್ನು ಸಾಧಿಸಿರುವ ಸಂಕಲ್ಪಿಸಿಕೊಟ್ಟಿದ್ದಾರೆ. ಹಾಗೆ ಮರಿಶಾಮಾಚಾರ್‌ರವರ ಭಾಷೆ ಒಂದೆರಡು ರೀತಿಗಳಲ್ಲಿ ಬದಲಾವಣೆ ಕಾಣಬಂದಿದ್ದು; ಜಲಪಾತದಂತೆ ಒಮ್ಮೆಯಾದರೆ ಇನ್ನೊಮ್ಮೆ ಶಾಂತವಾಗಿ ಹರಿವ ನದಿಯಂತೆ ಎಂದಿನಂತೆಯೂ ಕಾಣಿಸಿಕೊಳ್ಳುತ್ತದೆ. ಈ ದಿಢೀರ್, ವಿಶಿಷ್ಟ ಭಾಷಾಶೈಲಿಯ ಬದಲವಣೆಯು ವಾಸುದೇವ್‌ರವರ ದೃಶ್ಯಲೋಕದ ಜೊತೆಗೆ ಅವರ ಬದುಕಿನ ಲೋಕವೂ ಅಪೂರ್ವವಾಗಿ ಈ ರೀತಿಯಲ್ಲಿ ಕಾಣಿಸಿಕೊಂಡಿದ್ದು ಸುಂದರ ಕೊಡುಗೆಯಾಗಿದೆ ಎಂದು ಪ್ರಸ್ತುತ ಈ ಲೇಖನದಲ್ಲಿ ಕಾಣಬಹುದು.

**ತಮ್ಮೊಳಗಿನ ಕಲಾವಿದನತ್ತ ವಾಲುತ್ತಿರುವ ವಿಮರ್ಶಕರು:** ದಿನಾಂಕ ೦೨–೦೨–೨೦೧೪ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ತಮ್ಮೊಳಗಿನ ಕಲಾವಿದನತ್ತ ವಾಲುತ್ತಿರುವ ವಿಮರ್ಶಕರು" ಎಂಬ ಲೇಖನದಲ್ಲಿ, ವಿಮರ್ಶಕರು, ಕಲವಿದರೂ ಮತ್ತು ಬರಹಗಾರರೂ ಆದ ಚಿ.ಸು.ಕೃಷ್ಣ ಶೆಟ್ಟಿ ಮತ್ತು ಎಚ್.ಎ.ಅನಿಲ್‌ಕುಮಾರ್ ಅವರ ಕಲಾಕೃತಿ, ಅಭಿವ್ಯಕ್ತಿ ಮೂಲಗಳನ್ನೇ ಅಲ್ಲದೆ ಅವರುಗಳನ್ನು ತೋರುವಂತ ಕಾರ್ಯಕ್ರಮದ ಒಟ್ಟಾರೆ ಅಂಶಗಳ ಕುರಿತು ವಿಮರ್ಶಕರು ಇಲ್ಲಿ ಸ್ಪಷ್ಟವಾದ ನಿಲುವುಗಳನ್ನು ತೋರ್ಪಡಿಸಿಕೊಂಡಿದ್ದಾರೆ.

ಪ್ರಸ್ತುತ ದೃಶ್ಯಕಲಾ ಸಾಹಿತ್ಯ ಬರಹಗಾರರ ಹೆಸರಿನಲ್ಲಿ ಮುಂಚೂಣಿಯಲ್ಲಿರುವ ಚಿ.ಸು.ಕೃಷ್ಣಶೆಟ್ಟಿ ಮತ್ತು ಎಚ್.ಎ.ಅನಿಲ್‌ಕುಮಾರ್‌ರವರುಗಳ ವ್ಯಕ್ತಿ ಪರಿಚಯ ಮತ್ತು ಕಲಾಕೃತಿಗಳ ಅಭಿವ್ಯಕ್ತಿ ಕುರಿತಂತೆ ವೆಂಕಟಪ್ಪ ಗ್ಯಾಲರಿಯಲ್ಲಿ ನಡೆದ 'ಅನನ್ಯ ದೃಶ್ಯ' ಎಂಬ ಶೀರ್ಷಿಕೆಯಡಿ ನಡೆಯಿತು. ಕಲಾಕೃತಿ, ಅಭಿವ್ಯಕ್ತಿ ಮೂಲಗಳನ್ನೇ ಅಲ್ಲದೆ ಅವರುಗಳನ್ನು ತೋರಿಸಲಾಯಿತು. ಈ ಇಬ್ಬರು ನಮ್ಮ ನಡುವೆ ವಿಮರ್ಶಕರೂ ಇತಿಹಾಸಕಾರರೂ ಆಗಿರುವವರು. ಕಲಾಕೃತಿ, ದೃಶ್ಯಕಲಾ ಸಾಹಿತ್ಯ ಕೃತಿ ಅಥವಾ ಪತ್ರಿಕಾ ಬರಹಗಳ ಓದುಗನಂತಲ್ಲ, ಕಲಾಕೃತಿಯನ್ನು ನೋಡುಗ ಯಾರು?

ದೃಶ್ಯಕಲಾ ಪತ್ರಿಕೆಗಳ ಓದುಗ ಯಾರು ಎಂಬ ಈ ಎರಡು ಆಯೋಮಯ ಸ್ಥಿತಿಯ ಪ್ರೇಕ್ಷಕ/ನೋಡುಗ/ಓದುಗರನ್ನು ಒಂದೇ ಕಡೆ ನೋಡುವುದು ಇಂದಿನ ಗಡಿಬಿಡಿಯ ನಾಟಕೀಯ, ಕೃತಕ ಬದುಕಿನಲ್ಲಿ ಅದು ಕಷ್ಟ ಸಾಧ್ಯವೆನ್ನುತ್ತಾರೆ ಇವರು.

ಮೂಲತಃ ಕಲಾವಿದರಾದ ಕೃಷ್ಣಶೆಟ್ಟಿಯವರು ಈ ಕಾರ್ಯಕ್ರಮದಲ್ಲಿ ಕಲಾವಿದರಾಗಿಯೇ ಪ್ರತಿಸ್ಥಾಪಿಸಲು ಪ್ರಯತ್ನಿಸಿದ್ದರೆಂದು ಇತ್ತೀಚೆಗೆ ಅಭಿವ್ಯಕ್ತಿಯ ಮಾಧ್ಯಮವನ್ನು ಮರೆತು ವಿಮರ್ಶಕರಾಗಿ ಕಂಡಿರುವ ಇವರು. ಇಲ್ಲಿ ಬರೆಯುವುದರ ಬಗ್ಗೆ ಅನಾಸಕ್ತರಾಗುವಂತೆ ತಮ್ಮೊಳಗಿನ ಕಲಾವಿದನ ಮಾತನ್ನು ಕೇಳುವಂತೆ ಮಾತನಾಡಿದ್ದರು. ತಮ್ಮ ಕಲಿಕೆಯ ಸಂದರ್ಭದ ಉತ್ತಮ ಭಾವಚಿತ್ರಗಳೇ ಅಲ್ಲದೆ ರೇಖಾಚಿತ್ರಗಳನ್ನು ತೋರಿಸಿದರು ವಿಮರ್ಶಕರು ಇಲ್ಲಿ ಅದರ ಸ್ಪಷ್ಟತೆಯನ್ನು ವ್ಯಕ್ತಪಡಿಸಿದ್ದಾರೆ.

ಹಾಗೆಯೇ ಇನ್ನೊಬ್ಬ ಕಲಾಬರಹಗಾರರೂ, ವಿಮರ್ಶಕರು ಕಲಾವಿದರೂ ಅನಿಸಿಕೊಂಡಿರುವ ಅನಿಲ್‌ಕುಮಾರ್ ಇಂದು ಇಡೀ ದೇಶದಲ್ಲಿಯೇ ಇಂಗ್ಲೀಷ್‌ನಲ್ಲಿ ಅತ್ಯುತ್ತಮವಾಗಿ ಬರೆಯಬಲ್ಲವರು. ತಮ್ಮ ಒಳಗಿನ ಕಲಾವಿದನ ಹಲವು ಮುಖಗಳನ್ನು ಬಿಚ್ಚಿ ಬಿಚ್ಚಿ ತೋರಿದ ರೀತಿ ಗಮನಾರ್ಹ. ಎಲ್ಲಾ ಕಡೆ ಸುತ್ತಾಡಿಕೊಂಡು ಬಂದರೂ ಕನ್ನಡದಲ್ಲಿ ರೂಪಕದಂತಹ ಸುಂದರ, ಭಾಷೆಯಲ್ಲಿ ಬರೆಯಲಿ ಎಂದು ಆಶಯ ಭಾವನೆಯನ್ನು ಲೇಖಕರು ವ್ಯಕ್ತಪಡಿಸಿದ್ದಾರೆ.

ಒಟ್ಟರೆಯಾಗಿ ಒಬ್ಬ ನಿಜವಾದ ಕಲಾವಿದನು ಅಭಿವ್ಯಕ್ತಿಸದೆ ಹೇಗೆ, ಇರಲಾರನೋ ಹಾಗೆಯೇ ಬರಹಗಾರನೂ ಬರೆಯದೇ ಇರಲಾರ. ಕನ್ನಡದ ಪತ್ರಿಕೆಗಳು ಅವುಗಳ ಮಿತಿಯಲ್ಲಿಯೇ ದೃಶ್ಯಕಲಾ ವಿಮರ್ಶೆ/ಬರಹಗಳನ್ನು ಇಂದಿಗೂ ಪೋಷಿಸುತ್ತಿವೆ. ಈ ನಿಟ್ಟಿನಲ್ಲಿ ದೃಶ್ಯಕಲಾ ಸಾಹಿತ್ಯ ಬರಹಗಳು ಬೆಳೆಯಲಿ, ಕೃಷ್ಣಶೆಟ್ಟಿಯವರೂ ಬರೆಯಲಿ ಎಂಬ ಆಶಯ ಭಾವನೆಗಳನ್ನು ವ್ಯಕ್ತಪಡಿಸಿದ್ದಾರೆ.

**ಮೈಸೂರು ಸಂಪ್ರದಾಯ ಚಿತ್ರ ಶೈಲಿಯ ಸಂವಾದ:** ದಿನಾಂಕ ೧೦-೦೨-೨೦೧೪ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟಗೊಂಡ "ಮೈಸೂರು ಸಂಪ್ರದಾಯ ಚಿತ್ರ ಶೈಲಿಯ ಸಂವಾದ" ಎಂಬ ಲೇಖನದಲ್ಲಿ ಸಮಕಾಲೀನ ಸಾಂಪ್ರದಾಮಿಕ ಶೈಲಿಗಳ ಉಳಿವಿನ ಕುರಿತು ನಡೆದ ವಿಚಾರ ಸಂಕೀರ್ಣದಲ್ಲಿ ಚಿ.ಸು.ಕೃಷ್ಣಶೆಟ್ಟಿ, ರಾಮದಾಸ ಅಡ್ಯಂತಾಯ, ಡಿ.ಎ.ಉಪಾಧ್ಯಾಯ ಮತ್ತು ಶಿವಲಿಂಗಪ್ಪ ಈ ಅಂಕಣಕಾರರು ಸಂವಾದನೆಯಲ್ಲಿನ ಸಂಕ್ಷಿಪ್ತ ವಿವರಣೆ ಇಲ್ಲಿ ವಿಮರ್ಶಕರು ನಮ್ಮ ಮುಂದಿಟ್ಟಿದ್ದಾರೆ.

ದಿನಾಂಕ ೧೩-೦೨-೨೦೧೪ರಂದು ಮೈಸೂರು ಕಲಾಮಂದಿರದ ಮನೆಯಂಗಳದಲ್ಲಿ ನಡೆದ ವಿಚಾರ ಸಂಕೀರ್ಣದಲ್ಲಿ ಮೇಲೆ ತಿಳಿಸಿದ ಹೆಸರುಗಳ ದೃಶ್ಯಕಲಾ ಸಾಹಿತ್ಯ ಬರಹಗಾರರು ತಮ್ಮದೇ ಆದ ದೃಷ್ಟಿಯ ವಿಚಾರಗಳನ್ನು ಮೈಸೂರು ಸಂಪದ್ರಾಯ ಮತ್ತು ಮತ್ತಿತರ ಸಂಪ್ರದಾಯಗಳ ಶೈಲಿಗಳ ಕುರಿತು ಸಭಿಕರೊಂದಿಗೆ ಸಂವಾದಿಸಿ ಹಂಚಿಕೊಂಡರು.

ಮೈಸೂರಿನ ಚಿತ್ರಶೈಲಿಯಲ್ಲಿ ಹೊಸ ಸಾಧ್ಯತೆಗಳ ಅನ್ವೇಷಣೆಗಳ ಅಗತ್ಯವನ್ನು ಒತ್ತಿ ಹೇಳಿದ ಕೃಷ್ಣಶೆಟ್ಟಿ ಕುಶಲತೆ ಇಲ್ಲವಾಗಿದೆ ಅಥವಾ ಮೈಸೂರು ಶೈಲಿಯ ಸೊಗಡೆ ಅಲ್ಲದೆ ಕೇವಲ ಕರಕುಶಲ ವಸ್ತುವಿನಂತೆ ಆಗಿವೆ ಎಂಬರ್ಥದಲ್ಲಿ ಹೇಳಿದರು.

ಸಂಪ್ರದಾಯ ಚಿತ್ರಕಲೆ ಬೆಳವಣಿಗೆ ಆಗಿಲ್ಲ ಎಂದೇ ಪ್ರಾರಂಭಿಸಿದ ಶಿವಲಿಂಗಪ್ಪ ಆ ಕಲಾ ಪ್ರಕಾರದ ಇತಿಹಾಸವೇ ಅಲ್ಲದೇ ಇಂದಿನ ಸಂದರ್ಭದಲ್ಲಿ ಮೈಸೂರು ಶೈಲಿಯ ಸ್ಥಿತಿಗತಿಗಳ ಲೋಕ ಕಟ್ಟಿಕೊಟ್ಟರು. ಮೈಸೂರು ಸಂಪ್ರದಾಯ ಮತ್ತಿತರ ಸಂಪ್ರದಾಯಗಳ ಚಿತ್ರಶೈಲಿಯ ತಂತ್ರಗಳನ್ನು ಹಡಪದರವರ ಮಾರ್ಗದರ್ಶನದಲ್ಲಿ ಗಾಜು ಚಿತ್ರಗಳಾಗಿಸಿದ ವಿಶಿಷ್ಟ ಸಂದರ್ಭದ ಮೆಲುಕು ಹಾಕಿದ ರಾಮ್‌ದಾಸ್ ಅಡ್ಯಂತಾಯ ಸಂಪ್ರದಾಯ ಕಲೆ, ಶೈಲಿ, ಇತ್ಯಾದಿಗಳ ಸ್ವಚ್ಛತೆ, ನಿಷ್ಕಪ್ಪತೆಗಳ ಬಗ್ಗೆ ಪ್ರಸ್ತಾಪಿಸಿದ ರೀತಿ ಪ್ರಸ್ತುತವೇ ಆಗಿದೆ. ನಕಲು ಮಾಡುವಿಕೆಯನ್ನು ಪ್ರಸ್ತಾಪಿಸಿ, ಮೈಸೂರು ಸಂಪ್ರದಾಯ ಶೈಲಿಯ ಕಲಾವಿದರು ಉತ್ತಮ ರೇಖಾ ಪ್ರಾವೀಣ್ಯತೆ ಪಡೆಯುವ ಅಗತ್ಯಕ್ಕೆ ಒತ್ತು ನೀಡಿದ್ದೂ ಗಣನೀಯ.

ದೃಶ್ಯಕಲಾ ಶಿಕ್ಷಣದಲ್ಲಿ ತಮ್ಮನ್ನು ತೀವ್ರತೆಯಿಂದ ತೊಡಗಿಸಿಕೊಂಡಿರುವ ಕಲಾವಿದ, ಬರಹಗಾರರೂ, ಆಗಿರುವ ಡಿ.ಎ.ಉಪಾಧ್ಯ ದೇಶೀ ಮತ್ತು ಮಾರ್ಗಶೈಲಿಯ ಹಾದಿಗಳ ಬಗ್ಗೆ ಪ್ರಸ್ತಾಪಿಸಿ, ಆ ದೃಷ್ಟಿಯಿಂದ ಮೈಸೂರು ಶೈಲಿಯನ್ನು ನೋಡಲು ಪ್ರಯತ್ನಿಸಿದ್ದು, ಕಲಾಶಿಕ್ಷಣ ಮೈಸೂರು ಶೈಲಿಯ ಕಲಿಕೆ, ದೀರ್ಘ ಅಧ್ಯಯನಗಳ ಅಗತ್ಯ ಕುರಿತು ಚರ್ಚೆಗಳಿಗೆ ಉತ್ತರ ನೀಡಿದ್ದು ಸಭಿಕರಿಗೆ ಉಪಯುಕ್ತವಾಯಿತು ಎಂದು ಅಭಿಪ್ರಾಯಿಸಿದ್ದಾರೆ.

ದೃಶ್ಯಕಲೆಯಲ್ಲಿ ಸಂಪ್ರದಾಯ ಹಾಗೂ ಜಾನಪದ ಚಿತ್ರಕಲೆಗಳು ಬೇರುಗಳಿದ್ದಂತೆ, ಅವುಗಳ ಸಂರಕ್ಷಿಸಿಕೊಳ್ಳುವಿಕೆ ಅತಿ ಅಗತ್ಯ ಈ ವಿಚಾರ ವಿನಿಯಮದ ಸಂದರ್ಭದ ನಂತರ ಮೈಸೂರು ಸಂಪ್ರದಾಯ ಚಿತ್ರಕಲೆಯ ಸಾಕ್ಷ್ಯಚಿತ್ರ ಪ್ರದರ್ಶನವೂ ಇದ್ದಿತು ಎಂದು ಈ ಅಂಕಣಕಾರರೂ ತಮ್ಮ ಆ ಸಂದರ್ಭದಲ್ಲಿನ ಅನಿಸಿಕೆಗಳನ್ನು ತೋರಿಸಿದ್ದಾರೆ.

ಒಟ್ಟಾರೆ ಮೈಸೂರು ಶೈಲಿಯ ಚಿತ್ರಗಳೇ ಅಲ್ಲದೇ ರೇಖಾಚಿತ್ರಗಳು, ಲೋಹದ ಚಿತ್ರಗಳು, ಗಾರೆಶಿಲ್ಪಗಳೇ ಅಲ್ಲದೆ ದೇವಾಲಯ ವಾಸ್ತುಶಿಲ್ಪ ಇತ್ಯಾದಿಗಳ ಕುರಿತು ಗಂಭೀರ ನೆಲೆಯ ಅಧ್ಯಯನಗಳಾಗಿರುವ ವಿಷಯವನ್ನು ಕುರಿತು ಚರ್ಚಿಸಲಾಗಿದೆ ಎನ್ನುತ್ತಾರೆ.

**ಸಮಕಾಲೀನ ಕನ್ನಡ ದೃಶ್ಯಕಲಾ ಸಾಹಿತ್ಯ:** ದಿನಾಂಕ ೧೪–೦೪–೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಸಮಕಾಲೀನ ಕನ್ನಡ ದೃಶ್ಯಕಲಾ ಸಾಹಿತ್ಯ" ಎಂಬ ಲೇಖನದಲ್ಲಿ ನಮ್ಮ ದೃಶ್ಯಕಲಾ ಸಾಹಿತ್ಯದಲ್ಲಿನ ಬೆಳವಣಿಗೆ ಮತ್ತು ಕಲಾ ಸಾಹಿತ್ಯಗಳ ಪಾತ್ರದ ಕುರಿತು ವಿಮರ್ಶಕರು ತಮ್ಮ ಅಭಿಪ್ರಾಯಗಳನ್ನು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ.

೧೯೮೦ರ ದಶಕದಲ್ಲಿ ಸಂಗೀತ ಹಾಗೂ ನೃತ್ಯ ಕಲೆಯ ರಂಗಗಳಲ್ಲಿ ಬರೆಯುತ್ತಿದ್ದವರೇ ಇಂದಿಗೂ ಬಹುಮುಖ್ಯವಾಗಿ ಬರೆಯುತ್ತಿದ್ದಾರೆ. ಆದರೆ ನಮ್ಮ ದೃಶ್ಯಕಲೆಯ ವಿಷಯದಲ್ಲಿ ಬಹುಮುಖ್ಯ ಇತಿಹಾಸಕಾರರು, ವಿಮರ್ಶಕರ ಜತೆಜತೆಗೇ ಇತರೇ ಕ್ಷೇತ್ರದಲ್ಲಿನ ಸಾಹಿತಿಗಳೂ, ನಮ್ಮ ದೃಶ್ಯಕಲೆಯ ಕುರಿತು ಬರೆಯುತ್ತಿರುವುದು ಮುಕ್ತ ಸಂದರ್ಭಕ್ಕೆ ಸಾಕ್ಷಿ. ಈ ದೃಶ್ಯಕಲೆಯ ಸಾಹಿತ್ಯ ದಕ್ಷಿಣ ಭಾರತದಲ್ಲಿ ವೈವಿಧ್ಯಮಯವಾಗಿ ಕಾಣಿಸಿಕೊಳ್ಳುತ್ತಿದ್ದು, ಇಂಗ್ಲೀಷ್ ಒಳಗೊಂಡಂತೆ ಕನ್ನಡವನ್ನು ಬಹುಮುಖ್ಯವಾಗಿ ಆವರಿಸಿದ್ದು ಕರ್ನಾಟಕದಲ್ಲಿ ಮಾತ್ರ.

ಈ ಅಂಕಣದ ಲೇಖಕನನ್ನು ಒಳಗೊಂಡಂತೆ ಅ.ಲ.ನರಸಿಂಹನ್, ಎನ್.ಮರಿಶಾಮಾಚಾರ್, ಚಿ.ಸು.ಕೃಷ್ಣಶೆಟ್ಟಿ, ಎಚ್.ಎ.ಅನಿಲ್‌ಕುಮಾರ್ ಹಿರಿಯ ವಿಮರ್ಶಕರಾಗಿರುವ ಎಸ್.ಎನ್.ಚಂದ್ರಶೇಖರ್, ಎಚ್.ಎನ್.ಸುರೇಶ್, ದಿ.ಬಿ.ವಿ.ಕೆ.ಶಾಸ್ತ್ರಿ, ದಿ.ಪಿ.ಆರ್.ತಿಪ್ಪೇಸ್ವಾಮಿಯವರ ಕೊಡುಗೆಗಳೂ ಗಮನಾರ್ಹ. ಈ ನಡುವೆ ಯಾವುದೋ ಬರಹ ಯಾರದೋ ಹೆಸರಿನಲ್ಲಿ ಪ್ರಕಟವಾಗುವ ಸಾಧ್ಯತೆಗಳ ಸಂದರ್ಭವನ್ನು ಕನ್ನಡ ದೃಶ್ಯಕಲಾರಂಗ ಎದುರಿಸಿದ್ದು ಉಂಟು. ನಮ್ಮ ದೃಶ್ಯಕಲೆಯ ಎಲ್ಲ ಬರಹಗಳಲ್ಲಿ ಯಾರು ಮಾತನಾಡುತ್ತಿದ್ದಾರೆ? ಎಂಬ ಪ್ರಶ್ನೆಗೆ ಉತ್ತರ ಸಿಗುವುದು ಅಪರೂಪ. ನಾವಿನ್ನೂ ಬರಹಗಾರನ ವ್ಯಕ್ತಿತ್ವ, ಮನಸ್ಸು, ಎಚ್ಚರ, ವಿಶಿಷ್ಟ ಉದ್ದೇಶಗಳ ಬದುಕಿನ ಜೀವ ಧ್ವನಿಯ ಹಾಜರಿಯ ಬರಹಗಳಿಗಾಗಿ ಹುಡುಕುವಂತಾಗಿದೆ. ಎಂಬಂತೆ ಸ್ಪಷ್ಟ ನಿಲುವಿನ ವಿಮರ್ಶಕರ ಮಾತುಗಳು ನಮ್ಮ ಮುಂದಿನ ಯುವ ಪೀಳಿಗೆಯ ದೃಶ್ಯಕಲಾ ಸಾಹಿತ್ಯಗಳಾಗಳೂ ಪೂರಕ ಶಕ್ತಿಯನ್ನು ನೀಡುವಂತಿವೆ.

**೮.೬.೨. ಶಿಲ್ಪ ಮತ್ತು ಕರಕುಶಲ ಕಲೆ**

**ದೇವಾಲಯ ದ್ವಾರಗೋಪುರ ಶಿಲ್ಪ:** ದಿನಾಂಕ ೦೯-೦೬-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ದೇವಾಲಯ ದ್ವಾರಗೋಪುರ ಶಿಲ್ಪ' ಎಂಬ ಲೇಖನದಲ್ಲಿ ದೇವಾಲಯ ಗೋಪುರಗಳ ವೈಶಿಷ್ಟತೆ, ಶಿಲ್ಪಗಳ ಬಗ್ಗೆ ವಿಮರ್ಶಕರು ಇಲ್ಲಿ ಚರ್ಚಿಸಿದ್ದಾರೆ.

ದೇವಾಲಯವು ಒಂದು ಕಲಾಕೃತಿ: ವಾಸ್ತುಶಿಲ್ಪ ಕೃತಿ; ಮನುಷ್ಯನ ದೇಹದ ವಿವರಗಳು, ದೈವೀ ಪ್ರಕಾರಗಳು ದೇವಾಲಯದ ಮುಕ್ತ ರೂಪದಲ್ಲಿವೆ. 'ದೇಹವೇ ದೇಗುಲ, ದೇಹದೊಳಗಿರುವ ಜೀವವೇ ದೇವಾಲಯದೊಳಗಿರುವ ದೇವರು' ಎನ್ನುವ ಕಲ್ಪನೆಗೆ ಪೂರಕವಾಗಿ ಶಿಲ್ಪಶಾಸ್ತ್ರದ ಹಲವಾರು ಗ್ರಂಥಗಳಲ್ಲಿ ವಿವರಗಳಿವೆ. ೧೧ನೇಯ ಶತಮಾನದ ನಂತರ ಮುಖ್ಯ ಬಾಗಿಲ ಮೇಲೆ ಗೋಪುರ ಕಟ್ಟುವ, ಪರಿಪಾಠ ಬೆಳೆಯಿತು ಎಂದು ಅದರ ಪೂರ್ವೇತಿಹಾಸವನ್ನು ಪರಿಚಯಿಸುತ್ತಾರೆ. ಇದೇ ದ್ವಾರಗೋಪುರವಾಗಿದೆ. ಮಯಮತ, ಈಶಾನವಗುರು ಪದ್ಧತಿ ಮೊದಲಾದ ಶಿಲ್ಪಶಾಸ್ತ್ರ ಪಠ್ಯಗಳಲ್ಲಿ ಗೋಪುರಗಳ ಉಲ್ಲೇಖಗಳು ಸಿಗಬಹುದು ಎನ್ನುತ್ತಾರೆ.

ದೇವಾಲಯಗಳ ದ್ವಾರಗೋಪುರಗಳು ಹಲವಾರು ನೆಲೆಗಳನ್ನು ಹೊಂದಿವೆ. ಮೇಲೆ ಹೋಗಿ ಸಣ್ಣದಾಗಿ ತೋರುವ, ಮೇಲ್ಭಾಗದಲ್ಲಿ ಕೀರ್ತಿಮುಖಗಳುಳ್ಳ 'ನಾಸಿ' ಎಂಬ ಕಟ್ಟೋಣವು ಆಕರ್ಷಕ. ಎರಡೂ ಕಡೆ ಎತ್ತಿನ ಕೋಡುಗಳಂತೆ ಇರುವ ನಾಸಿಗಳ ನಡುವೆ ಕಳಶಗಳಿರುತ್ತವೆ. ಇದೇ ಗೋಪುರ ಶಿಖರ, ಗೋಪುರವನ್ನು ನಾಸಿಗಳ ನಡುವೆ ಕಳಶಗಳಿರುತ್ತವೆ. ಇದೇ ಗೋಪುರ ಶಿಖರ, ಗೋಪುರವನ್ನು ಇಟ್ಟಿಗೆ ಗಾರೆಗಳಿಂದಲೇ ನಿರ್ಮಿಸಿದ ನಂತರ ಗಾರೆಗಚ್ಚು ಅಥವಾ ಸುಣ್ಣಕಲ್ಲಿನಲ್ಲಿ ಅಲಂಕರಿಸುತ್ತಾರೆ. ವಿನ್ಯಾಸಗಳೊಂದಿಗೆ ಹಾಗೂ ಪುರಾಣ ಮೂರ್ತಿಗಳೊಂದಿಗೆ ಗೋಪುರವನ್ನು ರೂಪಿಸುತ್ತಾರೆ ಎಂದು ಅದರ ನಿರ್ಮಾಣ, ರೂಪ, ವೈವಿಧ್ಯತೆಗಳ ಬಗ್ಗೆ ತಿಳಿಸುತ್ತಾರೆ.

ಆದರೆ ಈ ಗೋಪುರ ವಿವರವು ಗುಡಿಗೆ ಅನಿವಾರ್ಯ ಅಲ್ಲ. ಆದರೂ ನಮ್ಮ ದೇವಾಲಯ ಗೋಪುರಗಳ ಸೌಂದರ್ಯ ದೈವಿಕವಾದುದೇ ಸರಿ ಎಂದು ಅದರ ಮಹತ್ವದ ಬಗ್ಗೆ ಮುಖ್ಯವಾಗಿ ತಿಳಿಸಿದ್ದಾರೆ.

**ಶಿಲ್ಪಕಲೆ ಗುಣಲಕ್ಷಣ-ಶಾಶ್ವತ:** ದಿನಾಂಕ ೨೦-೦೧-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಶಿಲ್ಪಕಲೆ ಗುಣಲಕ್ಷಣ-ಶಾಶ್ವತ" ಎಂಬ ಲೇಖನದಲ್ಲಿ ಶಿಲ್ಪದ ಶಾಶ್ವತ ನೆಲೆಯನ್ನು ಮತ್ತು ಕಲಾವಿದರು ತಮ್ಮ ಅಭಿವ್ಯಕ್ತಿಗೆ ಕಲ್ಲನ್ನು ದುಡಿಸಿಕೊಂಡಿರುವುದು, ಕಲ್ಲಿನ ಒಟ್ಟು ವಿಶೇಷತೆಯನ್ನು ದೃಶ್ಯಕಲಾ ಮಾಧ್ಯಮದ ನಿಟ್ಟಿನಲ್ಲಿ ವಿಮರ್ಶಕರು ಇಲ್ಲಿ ಪ್ರಸ್ತಾವನೆ ಮಾಡಿಕೊಟ್ಟಿದ್ದಾರೆ.

ಹಂಪೆಯಲ್ಲಿ ನಡೆಯುವ 'ರಾತ್ರಿಯಲ್ಲಿ ಹಂಪಿ', 'ಶಬ್ದ ಮತ್ತು ಬೆಳಕು' ಕಾರ್ಯಕ್ರಮ, ಪ್ರಸಿದ್ಧಿಯನ್ನು ಪಡೆದಿರುವುದು ನಮಗೆಲ್ಲ ಗೊತ್ತಿರುವ ವಿಷಯ. ಈ ಎಲ್ಲ ವಿಶೇಶತೆಗೆ ಕಾರಣ. ಹಂಪೆಯ ಬಂಡೆ, ಕಲ್ಲುಗಳೇ, ಅಭಿವ್ಯಕ್ತಿಗೆ ಒಂದು ಅದ್ಭುತ ಮಾಧ್ಯಮ, ಶಿಲಾಯುಗವೇ ಅಲ್ಲದೆ ಅದಕ್ಕೂ ಮೊದಲಿನಿಂದಲೂ, ಇಂದಿಗೂ ಕಲ್ಲನ್ನು ಅಭಿವ್ಯಕ್ತಿಗೆ ದೃಶ್ಯ ಕಲಾವಿದರು/ಕಲಾವಿದೆಯರು ದುಡಿಸಿಕೊಳ್ಳುತ್ತಾ ಬಂದಿದ್ದಾರೆ. ಹಲವು ರಾಜರ ಆಳ್ವಿಕೆಯ ಸಂದರ್ಭದಲ್ಲಿ ಕಲ್ಲನ್ನು ಅನನ್ಯವಾಗಿ ಬಳಸಿಕೊಂಡು ನಮ್ಮ ವಾಸ್ತುಶಿಲ್ಪ ಪರಂಪರೆಯನ್ನು ಮೆರೆಸಿದ್ದಾರೆ. ನಂತರದ ದಿನಗಳಲ್ಲಿ ಕಲ್ಲನ್ನು ಸಂಪ್ರದಾಯ ಶಿಲ್ಪಿಗಳು ಅಪರೂಪಕ್ಕೆ ಬಳಸುತ್ತಿದ್ದು ಅಚ್ಚರಿಯೆಂಬಂತೆ ಸಮಕಾಲೀನ ಶಿಲ್ಪಿಗಳನೇಕರು ಕಲ್ಲನ್ನು ಬಳಸಿಕೊಂಡದ್ದು ವಿಶೇಷವಾಗಿದೆ. ನಮ್ಮಲ್ಲಿ ವೆಂಕಟಾಚಲಪತಿ, ಭಾಸ್ಕರ್‌ರಾವ್, ಯುಸೋಫ್, ಅರಕ್ಕಲ್, ದೇವರಾಜ್, ಶಿವಾನಂದ ಬಂಟನೂರು ಮೊದಲಾದವರು ಸೃಜನಶೀಲ ದೃಷ್ಟಿಯಿಂದ ನೆನಪಾಗುತ್ತಾರೆ. 'ಕರಗುವ ಸಮಯ' ಮೀರಿದ ಸಂವೇದನಾತ್ಮಕ ಅಭಿವ್ಯಕ್ತಿಗಳಿಗೆ ಕಲ್ಲಿನ ಶಾಶ್ವತತೆಯೂ ಅಪೂರ್ವ ಸೊಬಗನ್ನು ನೀಡಿ ಬಂದಿದ್ದು, ಕಲ್ಲಿನ ಶಾಶ್ವತತೆಯ ಗುಣಲಕ್ಷಣ ಹೊಂದಿರುವುದರಿಂದ ಶಾಶ್ವತ ನಿಲುವನ್ನು ಪಡೆದುಕೊಂಡಿದೆ ಎಂಬ ಮಾತನ್ನು ವಿಮರ್ಶಕರು ಸ್ಪಷ್ಟಪಡಿಸಿದ್ದಾರೆ.

**ಜಾಗತೀಕರಣದ ಅಬ್ಬರದಲ್ಲಿಯೂ ಅರಳಿದ ಕರಕುಶಲ ಕಲೆ:** ೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಜಾಗತೀಕರಣದ ಅಬ್ಬರದಲ್ಲಿಯೂ ಅರಳಿದ ಕರಕುಶಲ ಕಲೆ' ಎಂಬ ಲೇಖನದಲ್ಲಿ ಇತ್ತೀಚಿನ ದಿನಗಳಲ್ಲಿ ಕರಕುಶಲ ಕಲೆಗಳಿಗೆ ನೀಡಿರುವ ಪ್ರೋತ್ಸಾಹ ಅದರ ಬೆಳವಣಿಗೆಗೆ ನಡೆಯುತ್ತಿರುವ ಚಟುವಟಿಕೆಗಳ ಕುರಿತು ವಿಮರ್ಶಕರು ಇಲ್ಲಿ ಪ್ರಸ್ಥಾವನೆ ಮಾಡಿದ್ದಾರೆ.

ಆನಂದ ಕುಮಾರಸ್ವಾಮಿಯವರು ೧೯೧೦ರ ಸಂದರ್ಭದಲ್ಲಿ ಕರಕುಶಲ ಕಲೆಯ ಬೆಳವಣಿಗೆ ನೀಡಿದ ಪ್ರಯತ್ನಗಳು ಇಂದು ಸ್ವಲ್ಪ ಮಟ್ಟಿಗೆ ಸಡಿಲಗೊಂಡು ಸೂಕ್ಷ್ಮ ಬದಲಾವಣೆಗಳನ್ನು ಕಂಡಿದೆ. ಕರಕುಶಲ ಕಲೆ ಹಾಗೂ ಕರಕುಶಲಿಗಳನ್ನು ಬೆಳೆಸುವ ಉದ್ದೇಶದಡಿ ಎನ್.ಜಿ.ಓ.ಗಳು ವರ್ಷದ ಹಲವು ವಿಶೇಷ ಸಂದರ್ಭಗಳಲ್ಲಿ ದೇಶದ ಪ್ರಮುಖ ನಗರಗಳಲ್ಲಿ ಕರಕುಶಲ ಕಲಾವಸ್ತುಗಳ ಪ್ರದರ್ಶನಗಳನ್ನು ಹಲವಾರು ವರ್ಷಗಳಿಂದ ನಡೆಸುತ್ತಾ ಬಂದಿವೆ.

ನಮ್ಮ ರಾಜ್ಯ, ದೇಶಗಳಲ್ಲಿ ಕಂಡುಬರುವ ಕರಕುಶಲ ಕಲೆಗಳು ಸಂಪ್ರದಾಯ ಚಿತ್ರಗಳಲ್ಲಿ ಮೈಸೂರು, ತಂಜಾವೂರು, ಓರಿಸ್ಸಾ, ಕಾಳಿಘಾಟ್, ವಾರ್ಲಿ, ಹಸೆ, ಅಲ್ಲದೆ ಇತ್ತೀಚೆಗೆ ಆಂಧ್ರ ಪ್ರದೇಶದ ತೊಗಲುಗೊಂಬೆಯ ಚಿತ್ರಕಲೆ ಟೇಬಲ್ ಲ್ಯಾಂಪ್‌ಗಳು, ಕಾಳ ಹಸ್ತಿಯ ಅಲಂಕಾರಿಕ ಚಿತ್ರಗಳು, ಸೀರೆ, ಪಂಚೆ, ಕೈವಸ್ತ್ರ, ತೆರೆಗಳಲ್ಲಿಯೇ ಅಲ್ಲದೆ ಇತ್ಯಾದಿಗಳ ಮೇಲೂ ಅಲಂಕರಿಸಿಕೊಂಡಿವೆ.

ಮರುಹುಟ್ಟು ಪಡೆದ ಕೊಂಡಪಲ್ಲಿ ಗೊಂಬೆಗಳು, ಕಿನ್ನಾಳದ ವಿಶಿಷ್ಟ ಗೊಂಬೆಗಳು, ಜನಜನಿತವಾಗಿ ಕಂಡುಬರುತ್ತಿವೆ. ಕುಟೀರ, ರಾಮಸನ್ಸ್, ಕಾವೇರಿ, ಮೊದಲಾದ ಹಲವು ಸಂಸ್ಥೆಗಳು ನಮ್ಮ ಕರಕುಶಲ ಕಲೆಗಳ ಬೆಳವಣಿಗೆ ಶ್ರಮವಹಿಸಿ ನಡಯುತ್ತಿವೆ ಎಂಬುದು ಸಂತೋಷದ ವಿಷಯವೆನ್ನುವಂತಹದ್ದನ್ನು ವಿಶೇಷವಾಗಿ ಇಲ್ಲಿ ಹೇಳಲು ಮುಂದಾಗಿದ್ದಾರೆ.

**೮.೬.೩. ಅಭಿವ್ಯಕ್ತಿ**

**ಭೂತಕಾಲೀನ ಪ್ರಭಾವ ಆತಂಕ ಇರಲಿ:** ದಿನಾಂಕ ೦೯-೦೯-೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಭೂತಕಾಲೀನ ಪ್ರಭಾವದ ಆತಂಕ ಇರಲಿ" ಎಂಬ ಲೇಖನದಲ್ಲಿ ಕಲಾಕೃತಿಯನ್ನು ಸೃಷ್ಟಿಸಬೇಕಾದರೆ ಕಲಾವಿದನು ತನ್ನ ಗ್ರಹಿಕೆಗಳು ಹಲವು ಕಡೆ ಹಿಂದೆ ಮುಂದಿನದರ ಬಗ್ಗೆ, ಯೋಚನೆ ಮಾಡಿ ಹಿಂದಿನದರ ಪ್ರಭಾವಗಳಿಂದ ಪ್ರೇರಿತಗೊಂಡು ತನಗೆ ಕಂಡ ಸೂಕ್ತ ರೀತಿಯಲ್ಲಿ ಅರಗಿಸಿಕೊಂಡು ತನ್ನ 'ಅನನ್ಯತ'ಯನ್ನು ಸಾಧಿಸಬೇಕಾಗುವುದು ಮುಖ್ಯ ಎಂಬುದನ್ನು ವಿಮರ್ಶಕರು ಇಲ್ಲಿ ತಿಳಿಸಿಕೊಟ್ಟಿದ್ದಾರೆ.

ಯಾವುದೇ ಕಲಾಕೃತಿಯೊಂದನ್ನು ನಾವು ನೋಡುವಾಗ ಅರ್ಥವನ್ನು ಕಲಾವಿದನಿಂದ ತಿಳಿಸಿಕೊಂಡರೆ ಅದರ ಸೀಮಿತತೆ ನಮಗೆ ಬೇಗನೆ ಅರ್ಥವಾಗಿಬಿಡುತ್ತದೆ. ಕಲಾವಿದನಾದವನು ತನ್ನ ಹಿಂದಿನ ಕಲಾಕೃತಿಗಳಿಂದ ಅನುಭವಿಸಿದ್ದನ್ನು ಮೂಡಿಸಿದ್ದು ಸ್ಪಷ್ಟವಾಗಿಬಿಡುತ್ತದೆ. ಆದರೆ ಹಾಗೆ ಮಾಡುವ ಸಹೃದಯನಿಗೆ ಆ ಕಲಾಕೃತಿಯ ಅರ್ಥವನ್ನು ಕಂಡುಕೊಳ್ಳಲು ಬಿಟ್ಟರೆ

ಕಲಾಕೃತಿಯು ಮುಗಿದಿದ್ದರು ವೀಕ್ಷಕನ ಮನಸ್ಸಿನಲ್ಲಿ ಅದು ಅಪೂರ್ಣವಾಗಿಯೇ ಉಳಿದುಬಿಡುತ್ತದೆ. ಅಲ್ಲದೆ ಮುಖ್ಯವಾಗಿ ತನ್ನ ಸ್ವ ಅನುಭವಗಳೂ ಅಲ್ಲಿ ವ್ಯಕ್ತಪಡಿಸಿ ಕಲಾಕೃತಿಯಲ್ಲಿ ತನ್ನದೇ ಆದ ರೀತಿಯಲ್ಲಿ ಪ್ರತಿಬಿಂಬಿಸಿಕೊಳ್ಳುತ್ತಾ ಹೋಗುತ್ತಾನೆ. ಈ ನಿಟ್ಟಿನಲ್ಲಿ ಕೃತಿಯ ಅರ್ಥ/ಅನುಭವ ಇದು ಇರಬಹುದು, ಬೇರೆಯೇ ಇರಬಹುದು. ಯಾವುದೂ ಖಚಿತವಲ್ಲ; ಅರ್ಥ, ಅನುಭವಗಳೂ ಸದಾ ಬದಲಾಗುವ ಮುಂದೂಡಲ್ಪಡುವ ಒಂದು ಪ್ರಕ್ರಿಯೆ ಮಾತ್ರ.

ಮುಖ್ಯವಾಗಿ ಇಲ್ಲಿ ತಿಳಿಸಿದ್ದು ಕಲಾವಿದನು ಕಲಾಕೃತಿಯನ್ನು ಹೊಸದು ಎಂದೂ ಸೃಷ್ಟಿಸಲಾರ, ಇರುವುದನ್ನೇ ತನ್ನ ಅನುಭವದ ಹಿನ್ನೆಲೆಯಲ್ಲಿ ಸ್ವಲ್ಪ ಬದಲಾವಣೆ ಮಾಡಿಕೊಂಡು ಸೃಷ್ಟಿಸಿರುತ್ತಾನೆ. ಹೊರತು ತಾನೇ 'ಭೂತಕಾಲದ ಪ್ರಭಾವ' ಇಲ್ಲದೆ ಸೃಷ್ಟಿಯಾಗಿಲ್ಲ.

ಒಟ್ಟಾರೆ ಇಂದಿನ ಸಂದರ್ಭದಲ್ಲಿ ಕೃತಿಯೊಂದರ ಸೃಷ್ಟಿಶೀಲತೆಗೆ ಹಿಂದಿನ ಶ್ರೇಷ್ಠ, ಮೌಲಿಕ ಕೃತಿಕಾರರ, ಅಧ್ಯಯನ ಉಪಯುಕ್ತ ಹಾಗೆ ನಮ್ಮ ಪೂರ್ವದ ಹಿರಿಯರ ಅನುಭವ ಲೋಕದ ಲಾಭ ಪಡೆಯುವಂತೆಯೂ ನಿರಚನ ಚಿಂತನೆ ಪ್ರೇರೇಪಿಸುತ್ತದೆ. ನಮ್ಮವರ ಮನಸ್ಸುಗಳು ಭವಿಷ್ಯದ ಫಲಗಳಿಗಾಗಿ 'ಭೂತಕಾಲೀನ ಪ್ರಭಾವ'ಗಳನ್ನು ತೀವ್ರತೆಯಿಂದ ಅರಗಿಸಿಕೊಳ್ಳಬೇಕೆಂದು ವಿಮರ್ಶಕರು ಈ ಮೂಲಕವಾಗಿ ಕಲಾಸೃಷ್ಟಿಯ ಬಗ್ಗೆ ಯುವ ಹಾಗೂ ಹಿರಿಯ ಕಲಾವಿದರಿಗೆ ಒಂದು ಸೂಚನೆ ನೀಡಿದ್ದಾರೆ ಎನ್ನಬಹುದು.

**ಕಲೆಯಲ್ಲಿ ನಕಲು:** ದಿನಾಂಕ ೨೬-೦೫-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕಲೆಯ ನಕಲು"ಎಂಬ ಲೇಖನದಲ್ಲಿ ಇತ್ತೀಚಿನ ದಿನಗಳಲ್ಲಿ ಪೌರಾಣಿಕ ಕೃತಿಗಳನ್ನು ಅದೇ ತೆರನಾಗಿ ತಾಂತ್ರಿಕತೆಯ ಮೂಲಕ ನಕಲು ಮಾಡುವ ಪರಂಪರೆ ಬೆಳೆದಿರುವುದನ್ನು ವಿಮರ್ಶಕರು ಇಲ್ಲಿ ಚರ್ಚಿಸಿದ್ದಾರೆ.

ದೃಶ್ಯಕಲಾವಿದರು ನಕಲು ಮಾಡುವ ಉದ್ದೇಶಗಳು ಹಲವು; ಅವು ಬದಲಾಗುತ್ತಲೇ ಇವೆ. ಇತಿಹಾಸ ಪೂರ್ವ ಕಲೆಯಲ್ಲಿ ಒಂದೇ ರೂಪವನ್ನು ಮತ್ತೆ ಮತ್ತೆ ರೇಖಿಸಲಾಗಿದೆ. ಪುನರ್ ಸೃಷ್ಟಿಸಲಾಗಿದೆ. ಇತ್ತೀಚೆಗೆ ನಮ್ಮ ಸಂಪ್ರದಾಯ ಚಿತ್ರ ಪರಂಪರೆ ನಕಲು ಮಾಡುವುದರಿಂದಲೇ ಬೇರೂರಲ್ಪಟ್ಟಿವೆ. ಒಂದನ್ನು ಅಥವಾ ಒಂದು ಕೃತಿಯನ್ನು ಆಧಾರಿಸಿದ ಮತ್ತೊಂದು, ಮಗದೊಂದರ ಸೃಷ್ಟಿ, ಹೆಚ್ಚಿನ ಬೇಡಿಕೆಯ ಸಂದರ್ಭ ಕಲೆಯ ವಿವಿಧ ಆಯಾಮಗಳಿಗೆ ಕಾರಣವಾಗಿರಬೇಕು ಎನ್ನುತ್ತಾರೆ.

ಕುಶಲತೆಗೆ ಹೆಸರಾದ ಮೈಸೂರು, ತಂಜಾವುರು, ಸುರಪುರದ ಚಿತ್ರಪ್ರಕಾರಗಳು ಪ್ರಕೃತಿಗೆ ಕನ್ನಡಿಯನ್ನು ಹಿಡಿಯುವ ಉದ್ದೇಶದ ವಿಶಿಷ್ಟ ದೃಷ್ಟಿಗೆ ಕ್ಯಾಮೆರಾ ದೊರೆತಾಗ ಏನಾಗಬಹುದು? ರೋಮಾಂಚನ. ಈ ಒಂದು ಅಂಶದಿಂದಲೇ ಮನುಷ್ಯನ ಸಾಹಸ ಬುದ್ಧಿಯ ಕ್ಯಾಮೆರಾ, ಯಂತ್ರ ಇತ್ಯಾದಿ ಮೂಲಗಳಿಂದ ಕಲೆಯ ಪುನರ್ ಸೃಷ್ಟಿ ನಕಲುಗಳು ಹೆಚ್ಚಾಗುತ್ತಿವೆ. ಇದರಿಂದ

ಕಲಾಕೃತಿಗಳ ಉದ್ದೇಶಗಳೂ ಹಲವು ಆಯಾಮಗಳನ್ನು ಪಡೆದುಕೊಳ್ಳುತ್ತಿವೆ. ಇತ್ತೀಚೆಗೆ ನಕಲು ಮಾಡುವ ಉದ್ದೇಶ ಮೀರಿ ಇಡೀ ಕೃತಿಯನ್ನೇ ದತ್ತು ಪಡೆದಂತೆ ಬಳಸಿಕೊಳ್ಳುವ ಪರಿಪಾಠಗಳು ಬೆಳೆದುಬಂದಿವೆ. ಮೈಸೂರು, ಸುರಪುರ ಚಿತ್ರಕಲೆಯ ಕ್ಯಾಮೆರಾದ 'ನಕಲು' ಮಾಡುವ ಶಕ್ತಿಯನ್ನು ತಮ್ಮ ಕೃತಿಗಳಲ್ಲಿ ತುಂಬಿಕೊಂಡಿರುವುದು ಗಣನೀಯ. ಛಾಯಾಚಿತ್ರ ಮಾಧ್ಯಮದ ಮುಖ, ವ್ಯಕ್ತಿಗಳನ್ನು ಕೆಲವು ಕಲಾವಿದರು ಸುರಪುರ, ಮೈಸೂರು ಶೈಲಿಯ ಚಿತ್ರಗಳ ನಡುವೆ ೧೮-೧೯ನೆಯ ಶತಮಾನಗಳಲ್ಲಿ ಬಳಸಿದ್ದಾರೆ.

ಒಟ್ಟಾರೆ ಚಿತ್ರಗಳಲ್ಲಿ ನಕಲು ಮಾಡುವ ಕಾರಣಗಳು ಹಲವಿದ್ದರು. ಕಲಾವಿದನು ಸಮಕಾಲೀನ ಸಂದರ್ಭಕ್ಕೆ ರೇಖಿಸುವ ಸಾಮರ್ಥ್ಯದ, ಸಮಯದ ಅಭಾವದಿಂದ ಇಂತಹ ಬೆಳವಣಿಗೆಗೆ ಸಾಧ್ಯವಾಗಬಹುದೆಂದು ವಿಮರ್ಶಕರು ಸ್ಪಷ್ಟ ನಿಲುವುಗಳನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ.

**ಕಪ್ಪು ವೈಭವೀಕೃತ ಆಕಾರದ ಸೃಷ್ಟಿಯ ಸೌಂದರ್ಯ:** ೨೦೧೩ ರಲ್ಲಿ ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕಪ್ಪು ವೈಭವೀಕೃತ ಆಕಾರದ ಸೃಷ್ಟಿಯ ಸೌಂದರ್ಯ" ಎಂಬ ಲೇಖನದಲ್ಲಿ ರವೀಂದ್ರನಾಥ್ ಠ್ಯಾಗೋರ್ ದೃಶ್ಯಕಲಾ ಸೃಷ್ಟಿಯಲ್ಲಿ ತಮ್ಮನ್ನು ತೊಡಗಿಸಿಕೊಂಡ ರೀತಿ ಮತ್ತು ಕಲಾಕೃತಿಯ ವಸ್ತು ವಿಷಯ, ಶೈಲಿ ಕುರಿತು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಿದ್ದಾರೆ.

ತಮ್ಮ ಬದುಕಿನ ರಸಯಾತ್ರೆಯಲ್ಲಿ ರವೀಂದ್ರನಾಥ್ ಠ್ಯಾಗೋರರು ಪಯಣವನ್ನು ನಿಲ್ಲಿಸಿದರೂ, ಅವರ ರಸಯಾತ್ರೆಯನ್ನು ಅವರ ಕಲಾಕೃತಿಗಳು ಇಡೀ ವಿಶ್ವವನ್ನು ತಲುಪಿಬರುತ್ತಿದೆ. ಅವರ ಕಾವ್ಯ, ಸಂಗೀತ, ನಾಟಕಗಳೇ ಅಲ್ಲದೇ ರೇಖಾಚಿತ್ರ ವರ್ಣಚಿತ್ರಗಳಲ್ಲಿಯ ಸೃಷ್ಟಿ ಶೀಲತೆಯು ಕಾಣಬರುತ್ತದೆ. ಪೆನ್ನು, ಬಣ್ಣದ ಇಂಕು ಜಲವರ್ಣ, ಪೇಷ್ಟಲ್, ಪಾರದರ್ಶಕ ಬಣ್ಣ ಇತ್ಯಾದಿಗಳನ್ನು ದುಡಿಸಿಕೊಂಡಿರುವ ಇವರು ಸುಮಾರು ೧೩ ವರ್ಷಗಳ ಕಾಲ ದೃಶ್ಯಕಲಾ ಸೃಷ್ಟಿಯಲ್ಲಿ ಮೌಲ್ಯಯುತವೇ ಅಲ್ಲದೆ ಸಂಖ್ಯಾತ್ಮಕವಾಗಿ ಗಣನೀಯ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ.

ಠಾಗೂರರ ಕಪ್ಪು ಇಂಕಿನ ವೈಭವದ ಕೃತಿಗಳು ಬಹುತೇಕ ಕಾಗದದ ಮೇಲೆಯೇ ಚಿತ್ರದ ಆಟವಾಡಿದ್ದಾರೆ. ಕಪ್ಪು ಬಣ್ಣಗಳಿಂದ ಹಲವು ಮುಖಗಳನ್ನು ಗ್ರಹಿಸಿರುವ ರೀತಿಯಲ್ಲಿ ವಿಕೃತ ಸೌಂದರ್ಯದ ಹಾಜರಿ ಇದ್ದು ಕಪ್ಪುನಾರಿ ಎರಡು ಮುಖಗಳ ಕೃತಿಯೊಂದನ್ನು ಇಲ್ಲಿ ಉಲ್ಲೇಖಿಸಬಹುದು. ಈ ಕೃತಿಯಲ್ಲಿ ವಿಕ್ಷಿಪ್ತ ಮನಸ್ಥಿತಿಯ ಮುಖಗಳೊಂದಿಗೆ ಹಲವು ಪ್ರಾಣಿ, ಕೀಟಗಳೂ ಕಾಣಿಸಿಕೊಂಡಿವೆ.

ಆಗಸ್ಟ್ ೨೦೧೩ರಲ್ಲಿ ಬೆಂಗಳೂರಿನಲ್ಲಿ ಎನ್.ಜಿ.ಎಂ.ಎ.ಗ್ಯಾಲರಿಯಲ್ಲಿ ಪ್ರದರ್ಶನಗೊಂಡಿರುವ ಈ ಕಲಾಕೃತಿಗಳಲ್ಲಿ ಕಪ್ಪು ಇಂಕಿನ ಕೃತಿಗಳೂ ತಮ್ಮ ತೀಕ್ಷಣೆಯಿಂದ ಹತ್ತಿರಕ್ಕೆ ಆಕರ್ಷಿಸಿ ನೋಡುಗರಿಗೆ ಠಾಗೂರರು ತೀವ್ರತೆಯಿಂದಲೇ ಒಂದೇ ಬಣ್ಣದ ಹಲವು ಛಾಯಾಂತರಗಳನ್ನು ಆರಗಿಸಿಕೊಂಡಿರುವ ನೋಟಗಳನ್ನು ನೀಡುತ್ತವೆ. ವಿಶ್ವದ ಹಲವು ಶ್ರೇಷ್ಠರ ಸಂಪರ್ಕ ಹಾಗೂ

ಅವರ ಕೃತಿಗಳನ್ನು ಕಂಡಿದ್ದವರು ಹಾಗಾಗಿ ಎಷರ್ ರೂಪಸೃಷ್ಟಿಯ ದೃಷ್ಟಿ ಕ್ಯೂಬಿಸ್ಟರ ಆಳವನ್ನು ಅರಿತಿದ್ದವರು ಇನ್ನು ಎಷ್ಟೋ ನೋಟುಗಳು ನೀವು ನೋಡಬೇಕಿದೆ ಎಂದು ಓದುಗರ ಮನಸ್ಸು ಕೇಂದ್ರೀಕರಿಸುವಂತ ಆಕರ್ಷಣೆಗೆ ಒಳಪಡಿಸುವಂತ ಕಲಾಕೃತಿಗಳು ಇವರದ್ದು ಎಂದು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**ದೃಶ್ಯಕಲೆ ಮತ್ತು ಮಾಂತ್ರಿಕ ಶಕ್ತಿ:** ದಿನಾಂಕ ೨೨-೦೭-೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ದೃಶ್ಯಕಲೆ ಮತ್ತು ಮಾಂತ್ರಿಕ ಶಕ್ತಿ" ಎಂಬ ಲೇಖನದಲ್ಲಿ ದೃಶ್ಯ ಕಲೆಯಲ್ಲಿ ತಂತ್ರ ಮತ್ತು ಮಂತ್ರಗಳು ಆದಿಮಾನವನಿಂದ ತನ್ನ ಕಲೆಯಲ್ಲಿ ಯಾವ ರೀತಿಯಲ್ಲಿ ಬಳಕೆಗೊಳ್ಳುತ್ತಾ ಬಂದಿವೆ ಎಂಬುದನ್ನು ಇಲ್ಲಿ ವಿಮರ್ಶಕರು ಸ್ಪಷ್ಟಪಡಿಸಿರುತ್ತಾರೆ.

ಮಾಂತ್ರಿಕತೆಯೆಂದರೆ ಈ ನಿಟ್ಟಿನಲ್ಲಿ ಇದರ ಅರ್ಥ ಬೇರೆಯೇ ಆಗುತ್ತದೆ. ಆಯಾ ರಂಗದ ದಿಗ್ಗಜರನ್ನು ಮಾಂತ್ರಿಕರೆಂದು ಹೇಳುವರು. ಕೆಲವರು ತಮ್ಮದೇ ಆದ ಕೆಲವು ಕಾರಣಗಳಿಗಾಗಿ ಮಾಂತ್ರಿಕತೆಯ ಲೇಪ ಹೊಂದಿದ ಸಾಧನೆಗಳಿಗೆ, ಕೊಡುಗೆಗಳಿಗೆ ಕಾರಣರಾಗುತ್ತಾರೆ. ದೃಶ್ಯಕಲೆಯಲ್ಲಿ ತಂತ್ರ ಮತ್ತು ಮಂತ್ರ ಬಹುಹಿಂದೆಯೇ ಕಾಣಿಸಿಕೊಂಡಿವೆ. ಇತಿಹಾಸ ಪೂರ್ವ. ಆದಿಮ ಸತ್ವಗಳನ್ನು ಸಂರಕ್ಷಿಸಿಕೊಂಡಿರುವ ಹಲವು ನೆಲೆಗಳನ್ನು ಸಂದರ್ಶಿಸಿದಾಗ, ಮೋಹಕ, ಆಕರ್ಷಕ, ಅಷ್ಟೇ ಏಕೆ ಮಂತ್ರ ಮೋಹಕ, ವಶೀಕೃತ ಆಟ-ಮಾಟ ಎಷ್ಟೋ ಕಾಲದ ಹಿಂದೆ ಹೋಗಿ ನಿಂತಂತೆ ಭಾಸವಾಗುತ್ತದೆ. ಈ ಶಬ್ಧ-ನಿಶ್ಯಬ್ಧ ಲೋಕದ ನಡುವೆ ದೃಶ್ಯಲೋಕವು ಇದ್ದಿತಲ್ಲ! ಪ್ರಕೃತಿಯಲ್ಲಿ ಸಿಗುವ ಹಲವು ವಸ್ತುಗಳ ಮೂಲದಿಂದ ಆಯುಧ ಪರಿಕರಗಳನ್ನು ರೂಢಿಸಿ, ಹೊರ ಜಗತ್ತನ್ನು ಪ್ರಭಾವಿಸುವ ಸಾಧ್ಯತೆ ಮತ್ತೊಂದು ಪ್ರಯತ್ನಕ್ಕೆ ಕಾರಣವಾಯಿತು. ಹಾಗಾಗಿ 'ಮಾಂತ್ರಿಕ-ಪರಿಕರ'ಗಳಾದ ಪ್ರಕೃತಿಯನ್ನೇ 'ಮಾಟ' ಮಾಡುವ ಚಟುವಟಿಕೆ, ಆಚರಣೆಗಳು ಬೆಳೆದವು. ಚಿತ್ರಕಲೆಯನ್ನು ಮಾಂತ್ರಿಕ ಆಯುಧವಾಗಿ ಪ್ರಕೃತಿಯನ್ನು ಗೆಲ್ಲಲು ಮನಷ್ಯ ಸಂಬಂಧಗಳನ್ನು ಉತ್ತಮಪಡಿಸಿಕೊಳ್ಳಲು ದುಡಿಸಿಕೊಳ್ಳಲಾಯಿತು.

ಈ ಮಾಂತ್ರಿಕ ಶಕ್ತಿಯನ್ನು ಹೊಂದಿದವನು ದೇವಮಾನವ ಸ್ಥಾನವನ್ನು ಹೊಂದಿದ್ದನು. ತನಗೆ ಬೇಕಾದಾಗ ಧ್ಯಾನಸ್ಥಿತಿಗೆ ಹೊರಟು ನಂತರ ತನ್ನ ಅನುಭವಗಳನ್ನು ಶಿಲಾಶ್ರಯದ ಮೇಲ್ಮೈಯಲ್ಲಿ ಚಿತ್ರಿಸಿ ಬಿಡುವ ಸಾಮರ್ಥ್ಯ ಹೊಂದಿರುತ್ತಿದ್ದನು ಎಂದು ಊಹಿಸಲಾಗಿದೆ. ಈ ವಿಶಿಷ್ಟ ಮಾಂತ್ರಕತೆಯ ಕಲ್ಪನೆ ಇಂದಿಗೂ ಇದರ ಪ್ರಭಾವ, ಪ್ರಯೋಗ ಶೀಲತೆ ನಮ್ಮ ಸಾಂಸ್ಕೃತಿಕ ಕೊಡುಗೆಗಳಲ್ಲಿ ಮತ್ತು ದೃಶ್ಯಕಲೆಗಳಲ್ಲಿ ಕಲಾವಿದನು ಉಳಿಸಿ ಬೆಳೆಸಿಕೊಂಡು ಬರುತ್ತಿದ್ದಾನೆ ಎಂದು ಇಲ್ಲಿ ಪ್ರಮುಖವಾಗಿ ಹೇಳಿದ್ದಾರೆ.

**ದೃಶ್ಯಕಲೆಯಲ್ಲಿ ಕರಕುಶಲತೆ:** ದಿನಾಂಕ ೧೨ ಮೇ ೨೦೧೩ರಂದು ಸಂಯುಕ್ತ ಕರ್ನಾಟಕ ಪತ್ರಿಕೆವಾದ "ದೃಶ್ಯಕಲೆಯಲ್ಲಿ ಕರಕುಶಲತೆ" ಎಂಬ ಲೇಖನದಲ್ಲಿ ಸಮಕಾಲೀನ ಕಲಾವಿದ/

ಕಲಾವಿದೆಯರು ತಮ್ಮ ಸೃಜನಶೀಲ ಸೃಷ್ಟಿಗೆ ಅದರ ಐಡಿಯಾಲಜಿಗೆ ಹೊಂದುವ ಅಥವಾ ಪೂರಕವಾದ ಕರಕುಶಲ ಕಲಾ ಪ್ರಕಾರವನ್ನು ನೆರವಾಗಿಸಿಕೊಳ್ಳುವ ಪರಂಪರೆಯನ್ನು ಬಳಸಿಕೊಂಡಿರುವುದರ ಬಗ್ಗೆ ವಿಮರ್ಶಕರು ಇಲ್ಲಿ ಚಿಕ್ಕ ಉದಾಹರಣೆಯಲ್ಲಿ ಒಬ್ಬ ಕಲಾವಿದೆಯನ್ನಿಟ್ಟುಕೊಂಡು ಹೇಳಲು ಮುಂದಾಗಿದ್ದಾರೆ.

ಆನಂದ ಕುಮಾರಸ್ವಾಮಿಯವರು ಭಾರತೀಯ ಕುಶಲಿಗಳ ಬಗ್ಗೆ ಬರೆದಾಗ ನಮ್ಮ ಕಲೆಯ ಬೇಕುಗಳು, 'ಕುಶಲತೆ' ಎಂಬುದರ ಸುತ್ತ ಆವರಿಸಿಕೊಂಡಿರುವಂತೆ ವಿವರಿಸಿದ್ದಾರೆ. ನಮ್ಮ ಸಾಂಪ್ರದಾಯಿಕ ಚಿತ್ರ, ಶಿಲ್ಪಗಳು ಕುಶಲತೆಯನ್ನು, ಅಲಂಕರಣವನ್ನು ಹೆಚ್ಚಾಗಿ ಅವಲಂಬಿಸಿರುವುದನ್ನು ಕಾಣುತ್ತೇವೆ. ಇತ್ತೀಚೆಗೆ ನಮ್ಮಲ್ಲಿಯೂ ಆರಂಭಗೊಂಡಿದ್ದು ಹಾಗೆಯೇ ಕುಶಲತೆಯನ್ನು ಹೊಸ ಸಾಧ್ಯತೆಗಳೊಂದಿಗೆ ನೋಡುತ್ತಿರುವವರು ಕಾಣಿಸಿಕೊಳ್ಳುತ್ತಿದ್ದಾರೆ. ಇದೇ ನಿಟ್ಟಿನಲ್ಲಿ ಚಿತ್ರ ರಚನೆ ಆರಂಭಿಸಿದವರು ಪಿ.ಸರಸ್ವತಿ ವೆಂಕಟೇಶ್. ಖ್ಯಾತ ಮಿಣಜಗಿಯವರ ಶಿಷ್ಯರಾದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್‌ನ ಎಂ.ಕೆ.ಸುಂಕಿದ್‌ರವರಲ್ಲಿ ಕಲಾ ಸೃಷ್ಟಿಯ ಸೂಚನೆಗಳನ್ನು ಪಡೆದು, ಹಾಗೆಯೇ ಗ್ಲಾಸ್ ಪೇಂಟಿಂಗ್‌ನ ಕೆಲವು ತಂತ್ರಗಳನ್ನು ಹಲವರಿಂದ ಅರಿತು, ಕುಶಲ ಕಲಾ ಪ್ರಪಂಚದ ಇನ್ನೆಷ್ಟೋ ಸೂಕ್ಷ್ಮಗಳನ್ನು ನೋಡುವುದರಿಂದ ಕಲಿತು ಸೃಜನಶೀಲ ಸೃಷ್ಟಿಗೆ ಕಾರಣವಾಗಿದ್ದಾರೆ. ಬೆಂಗಳೂರು ಹಾಗೂ ಹಿಂದೂಪುರಗಳಲ್ಲಿ ಓಂ ಕ್ರಿಯೇಷನ್ ಅಡಿಯಲ್ಲಿ ಮತ್ತು ಬೆಂಗಳೂರಿನ ಚಿತ್ರಕಲಾ ಪರಿಷತ್ತನಲ್ಲಿ ಇವರ ಕೃತಿಗಳು ಪ್ರದರ್ಶನಗೊಂಡು ಹೆಚ್ಚು ಗಮನಸೆಳೆದಿದ್ದರೆನ್ನಲಾಗಿದೆ.

ಒಟ್ಟಾರೆ ಸೃಜನ ಶೀಲತೆಯೆನ್ನುವುದು ಕಲಾಕೃತಿಯೊಂದರ ಸೃಷ್ಟಿಯಲ್ಲಿ ಪಾತ್ರ ಮೂಲಭೂತವೆಂಬುದನ್ನು ಇಲ್ಲಿ ಸ್ಪಷ್ಟಪಡಿಸಲಾಗಿದೆ.

**ಕ್ಯಾಮೆರಾ ಕಲೆ ಮತ್ತು ಅಭಿವ್ಯಕ್ತಿ:** ೨೦೧೨ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕ್ಯಾಮೆರಾ ಕಲೆ ಮತ್ತು ಅಭಿವ್ಯಕ್ತಿ" ಎಂಬ ಲೇಖನದಲ್ಲಿ ಮೊದಲಿಗೆ ಗುಲ್ಬರ್ಗಾದ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ ನಡೆದ ಛಾಯಾಚಿತ್ರ ದಿನದಂದು ಛಾಯಾಚಿತ್ರ ಪ್ರದರ್ಶನವನ್ನು ಏರ್ಪಡಿಸಿದ್ದುದರ ವಿವರಣೆಯ ನಂತರ ಕ್ಯಾಮೆರಾ ಕಲೆಯು ಅಭಿವ್ಯಕ್ತಿ ಮಾಧ್ಯಮಗಳಲ್ಲಿ ಒಂದು ಹೇಗೆ? ಎಂಬುದನ್ನು ವಿಮರ್ಶಕರು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕಲ್ಬುರ್ಗಿಯಲ್ಲಿ ದಿ ಐಡಿಯಲ್ ಫೈನ್ ಆರ್ಟ್ ೧೯-೦೮-೨೦೧೩ರಂದು ಛಾಯಾಚಿತ್ರ ದಿನವಾಗಿ ಆಚರಿಸಿದ್ದು, ಛಾಯಾಚಿತ್ರಗಳನ್ನು ಪ್ರದರ್ಶಿಸಲಾಗಿದೆ. ಅಲ್ಲದೆ ಮುಖ್ಯವಾಗಿ ಆಳಂದ್‌ನ ಶಿರೀಶ್ ಮಾಣಿಕಲಾಲ್ ಶೆಟ್ಟಿರವರಿಗೆ ಸನ್ಮಾನವನ್ನು ಮಾಡಿತು. ಛಾಯಾಚಿತ್ರ ಪ್ರದರ್ಶನ ಆಯ್ದು ಕೃತಿಗಳಿಗೆ ಪುರಸ್ಕಾರವನ್ನು ನೀಡಲಾಯಿತು ಎಂದು ಮುಂದುವರೆಸುತ್ತಾ ಛಾಯಾಚಿತ್ರ ಕಲೆಯ ಓನ್ನೆಲೆಯನ್ನು ಪರಿಚಯಿಸಲಾಗಿದೆ. ಸಾವಿರಾರು ವರ್ಷಗಳ ಹಿಂದೆ ಇತಿಹಾಸಪೂರ್ವ ಕಾಲದಿಂದಲೇ

'ನಕಲು' ಮಾಡುವ ಮನುಷ್ಯ ಮೂಲ ಪ್ರವೃತ್ತಿಯೊಂದು ಪ್ರಕಟವಾಯಿತು. ಕ್ಯಾಮೆರಾ ಕಾಣಿಸಿಕೊಳ್ಳುವುದಕ್ಕಿಂತಲೂ ಮೊದಲು ಕಲಾವಿದರ ವಸ್ತು, ರೂಪಗಳನ್ನು ನೈಜವಾಗಿ ಚಿತ್ರಿಸಲು ನೀಡುತ್ತಿದ್ದ ಪ್ರಾಮುಖ್ಯತೆ ಕಡಿಮೆಯಾಗಿ 'ರಿಯಲಿಸಂ'ನ ವಿಶಿಷ್ಟ ಇತಿಹಾಸ ಮಸುಕುಗೊಂಡು ಫೋಟೋರಿಯಲಿಸಂ ಚಿತ್ರಕಲೆಯಲ್ಲಿ 'ಸೂಪರ್ ರಿಯಲಿಸಂ' ಶಿಲ್ಪಕಲೆಯು ಕಾಣಿಸಿಕೊಂಡವು. ಹಾಗೂ ಕ್ಯಾಮೆರಾದಿಂದ ಸಾಧ್ಯವಾಗದ ಸೃಷ್ಟಿಗಳಿಗೆ ಕಲಾವಿದರು ಕಾರಣರಾದರು. ಆದರೆ ಕ್ಯಾಮೆರಾಗೆ ಇಂದಿಗೂ ಇರುವ ಪ್ರಾಮುಖ್ಯತೆ ಅಷ್ಟಿಷ್ಟೆ ಎಂದು ಮನಗಾಣಿಸುತ್ತಾ, ದೃಶ್ಯಕಲೆಯ ಅಭಿವ್ಯಕ್ತಿಗೆ ಕ್ಯಾಮೆರಾ ಸಹ ಒಂದು ಮಾಧ್ಯಮವಾಗಿದೆ ಎಂದು ಮಾನ್ಯರೇ, ಪೈಪೀಸ್, ಕ್ಲೈನ್‌ರವರುಗಳು ಈ ದೃಷ್ಟಿಯಿಂದ ಗಮನರ್ಹರೇ, ಛಾಯಾಚಿತ್ರ ಮೂಡಿಬಂದಿದ್ದು ಒಂದು ಅಪೂರ್ವ ಸಂದರ್ಭವನ್ನು ಉದಾಹರಣೆಗೆ ತೆಗೆದುಕೊಂಡಿರುವುದು ವಿಶೇಷ.

ಒಟ್ಟಾರೆ ಕ್ಯಾಮೆರಾ ಕಣ್ಣಿಗೆ ನಮ್ಮ ಒಳಗಣ್ಣು, ತಾಂತ್ರಿಕ ಪರಿಕರಗಳೊಂದಿಗೆ ಸಂಯೋಗಗೊಂಡು ಸೃಷ್ಟಿಶೀಲತೆಯನ್ನು ಸಾಧಿಸಬೇಕಿದೆ. ಕಂಡದ್ದು ಕ್ಲಿಕ್ಕಿಸುವುದಲ್ಲ. ಅದರ ಜೊತೆಗೆ ನಮ್ಮ ಅನುಭವವೂ ಆವರಿಸಿಕೊಂಡಿರಬೇಕಾಗುತ್ತದೆ ಎಂಬ ಸೂಚನೆಯನ್ನು ನೀಡುವಂತಹ ಮಾತುಗಳನ್ನು ಇಲ್ಲಿ ತೋರಿಸಿಕೊಟ್ಟಿದ್ದಾರೆ.

**ಅಭಿವ್ಯಕ್ತಿಯ ಮಾಧ್ಯಮವಾಗಿ ಭೂಮಿ....:** ೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಅಭಿವ್ಯಕ್ತಿಯ ಮಾಧ್ಯಮವಾಗಿ ಭೂಮಿ" ಎಂಬ ಲೇಖನದಲ್ಲಿ ಪ್ರಕೃತಿಯನ್ನೇ ಮಾಧ್ಯಮವನ್ನಾಗಿ ದುಡಿಸಿಕೊಳ್ಳುತ್ತಿರುವ ಸಂದರ್ಭವೊಂದು ಇತ್ತೀಚೆಗೆ ಕಲಾವಿದನು ಸೃಷ್ಟಿಸಿಕೊಂಡಿರುವುದು ವಿಶಿಷ್ಟ ರೀತಿಯದ್ದು ಎಂಬ ನಿಲುವನ್ನು ವಿಮರ್ಶಕರು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

೨೧ನೇ ಶತಮಾನದಲ್ಲಿ ಸಮಕಾಲೀನ ದೃಶ್ಯಕಲಾವಿದ/ಕಲಾವಿದೆಯರು ಪ್ರಕೃತಿಯ ಹಲವು ಅಂಶಗಳನ್ನು ಅಂದರೆ ನದಿ, ಕೆರೆ, ಗುಡ್ಡ, ನಿರ್ದಿಷ್ಟ ಭೂಪ್ರದೇಶಗಳನ್ನು ಅಭಿವ್ಯಕ್ತಿ ಮಾಧ್ಯಮವನ್ನಾಗಿ ಅನೇಕ ಕಲಾವಿದರು ಬಳಸಿಕೊಳ್ಳುತ್ತಿದ್ದಾರೆ. ಇತಿಹಾಸ ಪೂರ್ವ ಸಂದರ್ಭದಲ್ಲಿ ಭೂಮಿಯನ್ನು ಕಲೆಯ ಅಭಿವ್ಯಕ್ತಿಯ ಉದ್ದೇಶ, ನಿರ್ದಿಷ್ಟತೆಗಾಗಿಯೇ ದುಡಿಸಿಕೊಂಡ ಉದಾಹರಣೆ ಕಾಣಬರುವುದಿಲ್ಲ ಎಂದು ಸ್ಪಷ್ಟಪಡಿಸುತ್ತಾರೆ. ಅಲ್ಲದೆ ಪ್ರಕೃತಿಯ ಎಷ್ಟೋ ವಸ್ತುಗಳನ್ನು ಬಣ್ಣಗಳಾಗಿಸಿ ಕುಂಚವನ್ನಾಗಿಸಿ ಬಳಸಿಕೊಂಡು ಗುಹೆಗಳ ಕಲ್ಲು ಮಣ್ಣುಗಳ ಗೋಡೆ, ಸೂರುಗಳು, ತೆರೆದ ಶಿಲಾಶ್ರಯಗಳು, ಬಂಡೆಗಳನ್ನಲ್ಲದೆ ನಂತರ ಮಣ್ಣು ಎಲುಬು ಕಲ್ಲು ಇತ್ಯಾದಿಗಳೂ ಅವರ ಅಭಿವ್ಯಕ್ತಿಗಳಲ್ಲಿ ಭೂಮಿಯನ್ನೂ ಕೂಡ ಹಲವು ಕಾರಣಗಳಿಗಾಗಿ ಬಳಸಿಕೊಂಡಿರುವುದೂ ನಾವು ಈಗಲೂ ಆದಿಮ ನೆಲೆಗಳಲ್ಲಿ ಕಂಡುಬರುತ್ತವೆ. ಇತ್ತೀಚೆಗೆ ಸಂಸ್ಥೆಗಳು ಭೂಮಿಯನ್ನು ಜನಾಕರ್ಷಣೆಗೆ ಬಳಸಿಕೊಂಡಿದ್ದು ಕರ್ನಾಟಕ, ಆಂಧ್ರ ಪ್ರದೇಶಗಳ ಗಡಿಭಾಗವೊಂದರಲ್ಲಿನ ಬೆಟ್ಟಗುಡ್ಡಗಳ ಭೂ ದೃಶ್ಯದಲ್ಲಿ ಹಸಿರಿನ ನಡುವೆ ಗಂಡು, ಹೆಣ್ಣು ಮಗುವಿನ ಚಿತ್ರರೂಪಗಳು ಮೂಡಿಸಿರುವುದು ಒಂದು ಉತ್ತಮ ಉದಾಹರಣೆಯನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**ಜೀವಂತಿಕೆಯಿಂದಿರುವ ಕ್ಯಾಲೆಂಡರ್ ಕಲಾ ಪರಂಪರೆ:** ದಿನಾಂಕ ೦೯-೦೨-೨೦೧೪ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಜೀವಂತಿಕೆಯಿಂದಿರುವ ಕ್ಯಾಲೆಂಡರ್ ಕಲಾ ಪರಂಪರೆ" ಎಂಬ ಲೇಖನದಲ್ಲಿ ಕ್ಯಾಲೆಂಡರ್ ಕಲೆಯ ಹುಟ್ಟು, ಬೆಳವಣಿಗೆ ಮತ್ತು ಮುಖ್ಯವಾಗಿ ಅದನ್ನು ಪೋಷಿಸಿಕೊಂಡು ಬರುತ್ತಿರುವ ಕಲಾವಿದರು ಈ ಎಲ್ಲಾ ಅಂಶಗಳ ಕುರಿತಾಗಿ ಸಂಕ್ಷಿಪ್ತ ರೀತಿಯಲ್ಲಿ ವಿಮರ್ಶಕರು ಪರಿಚಯಿಸಿದ್ದಾರೆ.

ಕ್ರಿ.ಶ.೧೮೯೦ ರ ದಶಕದಲ್ಲಿ ಈ ಕ್ಯಾಲೆಂಡರ್ ಕಲೆಯು ಬೆಳಕಿಗೆ ಬಂದಿದ್ದು ಮೊಟ್ಟ ಮೊದಲು ರಾಜಾ ರವಿವರ್ಮನು ತನ್ನ ಪ್ರಿಂಟಿಂಗ್ ಪ್ರೆಸ್‌ನಿಂದ ನಮ್ಮ ಪುರಾಣಗಳ ದೇವ/ದೇವಿಯರನ್ನು ಎಲ್ಲರ ಮನೆ/ಮನಸ್ಸುಗಳನ್ನು ತಲುಪಲು ಮುಖ್ಯವಾಗಿ ಕ್ಯಾಲೆಂಡರ್‌ಗಳ ಮೂಲಕವೇ ಅಲ್ಲದೆ ಚಿತ್ರಗಳ ಮೂಲಕವೂ ಬಿಡಿ ಬಿಡಿಯಾಗಿಯೂ ಇಡೀ ಭಾರತದಲ್ಲಿ ಹರಡಿದ್ದು, ಪ್ರಾರಂಭದಲ್ಲಿ ಜರ್ಮನಿಯಿಂದ ಪೂರೈಸಲ್ಪಡುತ್ತಿದ್ದ ಚಿತ್ರಗಳು ಕರಾಚಿಯಿಂದಲೇ ಅಲ್ಲದೆ ನಮ್ಮ ದೇಶದ ಹಲವು ಕೇಂದ್ರಗಳಲ್ಲಿ ಕ್ಯಾಲೆಂಡರ್ ಕಲೆ ಎಂದು ಕರೆಯಲಾಗುತ್ತಿದ್ದ ಜನಪ್ರಿಯ ಕಲಾ ಪ್ರಕಾರವೊಂದಾಗಿತ್ತು.

ಇತ್ತೀಚೆಗೆ ಕಲ್ಕತ್ತ ಮುಂಬಯಿಗಳ ಕಲಾವಿದರು ಅಲ್ಲದೆ ಮೈಸೂರಿನಲ್ಲಿ ಸಿದ್ದಲಿಂಗಸ್ವಾಮಿ, ಅವರ ಪುತ್ರರಾದ ಎಸ್.ಎನ್.ಸ್ಥಪತಿ, ಮಧುಗಿರಿ ರಾಮು, ಬೆಂಗಳೂರಿನಲ್ಲಿ ಹಲವು ಕಲಾವಿದರು ಕ್ಯಾಲೆಂಡರ್ ಕಲೆಯೇ ಅಲ್ಲದೆ ಬಿಡಿ ಚಿತ್ರಗಳ ಪ್ರಿಂಟ್‌ಗಳ ಸೃಷ್ಟಿಯಲ್ಲಿ ತೊಡಗಿರುವುದು ಗಮನಾರ್ಹ ವಿಷಯವಾಗಿದೆ. ಎಸ್.ಎಂ.ಪಂಡಿತ್, ಬಿ.ಕೆ.ಎಸ್.ವರ್ಮ, ಎಂ.ಟಿ.ವಿ. ಆಚಾರ್ಯ ಗದುಗಿನ ವಿಶಿಷ್ಟ ಕಲಾವಿದ(ಜನನ: ೧೯೬೮) ಎಂ.ಕಮಲ್ ಅಹ್ಮದಾ ಇತ್ತೀಚೆಗೆ ಭಾರತೀಯ ಚಿಕಣಿ ಚಿತ್ರಗಳ ಮೂಲವಲ್ಲದೆ ವಿಜಯನಗರ ಸುರಪುರ ಚಿತ್ರಶೈಲಿಯಲ್ಲಿ ಜನಪದೀಯ ಸ್ಪರ್ಶಗಳೊಂದಿಗೆ ಅವರದೇ ಆದ ವಿಶಿಷ್ಟ ಶೈಲಿಯ ಕಾವ್ಯಮಯ ರೇಖೆಗಳ ಪರಂಪರೆಯ ಪ್ರಜ್ಞೆಯ ಚಿತ್ರಗಳು ಮೂಡಿಬಂದಿವೆ.

ಇಂದಿಗೂ ಈ ಎಲ್ಲ ಪರಂಪರೆಗಳು ಮುಂದುವರೆದಿದ್ದು ಎಷ್ಟೋ ಕಾರ್ಖಾನೆಗಳು, ಬ್ಯಾಂಕುಗಳು, ಸರ್ಕಾರಿ ಸಂಸ್ಥೆಗಳು ಕಲಾವಿದರ ನೆರವಿನಿಂದ ಕ್ಯಾಲೆಂಡರ್‌ಗಳನ್ನು ಹೊರತರುತ್ತಿವೆ. ಈ ನಿಟ್ಟಿನಲ್ಲಿ ಮೈಸೂರಿನ ಖ್ಯಾತ ರಾಮಸನ್ಸ್ ಕಲಾಪ್ರತಿಷ್ಠಾನ ಪ್ರತೀ ವರ್ಷ ಕಲಾವಿದರಿಂದ ಈ ಕೃತಿಗಳನ್ನು ಸಂಗ್ರಹಿಸಿ 'ಮುದ್ದು ಮುಕುಂದ' ಶೀರ್ಷಿಕೆಯಡಿ, ಕ್ಯಾಲೆಂಡರ್‌ಗಳನ್ನು ಬಿಡುಗಡೆ ಮಾಡಲಾಗುತ್ತಿರುವುದು ಗಮನಾರ್ಹ ವಿಷಯಗಳಲ್ಲಿ ಒಂದಾಗಿದೆ ಎಂದು ಇಲ್ಲಿ ಹೇಳಲಾಗಿದೆ.

**೮.೬.೪. ಕಲಾಸೃಷ್ಟಿ**

**ದೃಶ್ಯಕಲಾ ಲೋಕದ ಅಪೂರ್ಣತೆ ಆಯಾಮಗಳು:** ದಿನಾಂಕ ೧೨-೦೮-೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ದೃಶ್ಯಕಲಾ ಲೋಕದ ಅಪೂರ್ಣತೆಯ ಆಯಾಮಗಳು"

ಎಂಬ ಲೇಖನದಲ್ಲಿ ಚಿತ್ರ, ಶಿಲ್ಪ, ವಾಸ್ತುಶಿಲ್ಪ, ಯಾವುದೇ ಇರಲಿ, ಅಪೂರ್ಣ ಚಿತ್ರ ಕಲಾ ಕೃತಿಗಳಾಗಿಯೇ ಉಳಿದು, ಬೆಳೆದುಕೊಂಡು ಬರುವಂತವು, ಅವುಗಳ ಪೂರ್ಣತೆಯು ಅಸ್ಪಷ್ಟ ಎಂಬುದನ್ನು ವಿಮರ್ಶಕರು ಇಲ್ಲಿ ತುಂಬ ಸೂಕ್ಷ್ಮ ರೀತಿಯಲ್ಲಿ ವಿವೇಚಿಸಿ ನಮ್ಮ ಮುಂದಿಟ್ಟಿದ್ದಾರೆ.

ಕಲಾಕೃತಿಗಳು ಪೂರ್ಣಗೊಳ್ಳುವುದು ಎಂದರೇನು? ನಿಜವಾಗಿಯೂ ಒಂದು ಕಲಾಕೃತಿ ಪೂರ್ಣಗೊಳ್ಳಬಹುದೇ? ಸೃಷ್ಟಿಕಾರನ ಸಹಿಯನ್ನು ಹಾಕಿಸಿಕೊಂಡ ಕೂಡಲೇ ಆ ಕಲಾಕೃತಿ ಪೂರ್ಣಗೊಂಡಂತೆಯೇ? ಹಾಗೆಯೇ ಒಂದು ವೇಳೆ ಕೃತಿಯೊಂದು ಪೂರ್ಣಗೊಂಡಿದೆ ಎಂದು ಕಲಾವಿದರು ಸಹಿ ಮಾಡಿದರೂ ಆ ನಿರ್ದಿಷ್ಟ ಕಲಾಕೃತಿಯು ಪೂರ್ಣಗೊಂಡಿದೆ ಎಂದು ಹೇಳಬಹುದೇ? ಈ ರೀತಿಯಲ್ಲಿ ತಮ್ಮನ್ನು ತಾವೇ ಪ್ರಶ್ನಿಸಿಕೊಳ್ಳುತ್ತ ಓದುಗರಿಗೆ ಇದರ ಒಂದು ಮೂಲ ಸತ್ಯ ಏನೆಂಬುದರ ಬಗ್ಗೆ ಯೋಜಿಸಲು ಕುತೂಹಲ ಹುಟ್ಟಿಸುತ್ತಾ ಉತ್ತರವನ್ನು ನೀಡುತ್ತಾರೆ. ಮುಂದೆ....

ನಿಜವಾದ ತೀವ್ರತೆಯಿಂದ ಸೃಷ್ಟಿಸುವವರ ಆ ಪ್ರಕ್ರಿಯೆಯೊಂದು ನಿಲ್ಲದ ಪಯಣ, ನಿರಂತರ ಸೃಷ್ಟಿ ಪ್ರಕ್ರಿಯೆಯ ಆಯನ, ಕಲಾಕೃತಿಯ ಸೃಷ್ಟಿಯೊಂದರ ಜೊತೆಗೆ ಕಲಾವಿದರ ಪಯಣ ಆರಂಭಗೊಳ್ಳುತ್ತದೆ. ಎಷ್ಟೋ ಕಲಾವಿದರು ತಮ್ಮ ಕೃತಿಗಳಿಗೆ ಶೀರ್ಷಿಕೆಗಳನ್ನೇ ನೀಡುವುದಿಲ್ಲ! ಕೆಲವರಂತೂ 'ಪಯಣ' ೧, ೨ ಹೀಗೆ ಮುಂದುವರೆಸುತ್ತಾ ನಡೆದಿದ್ದು ಇವುಗಳಿಗೆ ಉದಾಹರಣೆಗಾಗಿ ಗೆರ್ನಿಕಾ ಪೇಂಟಿಂಗ್, ಬಿ.ಕೆ.ಎಸ್.ವರ್ಮ, ರಾಮಕಿಂಕರ ಬೈಜ್ ಅವರ ಕಲಾಕೃತಿಗಳನ್ನು ಕೊಡುತ್ತಾರೆ.

ಒಟ್ಟಾರೆ ಈ ಕಲಾಕೃತಿಗಳ ಸೃಷ್ಟಿಗಳ 'ಸಂದರ್ಭ' ಹಾಗೂ 'ಸೃಷ್ಟಿಕಾರರ ಸಂಬಂಧ'ಗಳ ಕಾರಣಕ್ಕಾಗಿ ಅವುಗಳು ಹೆಚ್ಚಿನ ರೀತಿಯಲ್ಲಿ ಗಮನ ಸೆಳೆಯುತ್ತವೆ. ಅಂತಿಮವಾಗಿ ಕಲಾಸೃಷ್ಟಿ ಶೀಲತೆಯಲ್ಲಿ 'ಆರಂಭ'ವೂ ಇಲ್ಲ 'ಅಂತ್ಯ'ವೂ ಇಲ್ಲ; ಸಂಪೂರ್ಣತೆಯೂ ಇಲ್ಲ ಎಂದು 'ಡೆರಿಕಾ' ಥೆರಿಯ ಪ್ರಕಾರ ವಿಮರ್ಶಕರು ಒಂದು ಕಲಾಕೃತಿಯ ಅಪೂರ್ಣ ಮತ್ತು ಪೂರ್ಣ ಎಂಬುದನ್ನು ತುಂಬ ಸರಳ ರೀತಿಯಲ್ಲಿ ಸ್ಪಷ್ಟಪಡಿಸಿದ್ದಾರೆ.

**ಕಲಾ ಸೃಷ್ಟಿಯ ಉದ್ದೇಶ ಸಂಹಿತ:** ದಿನಾಂಕ ೧೨-೦೨-೨೦೧೨ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ "ಕಲಾ ಸೃಷ್ಟಿಯ ಉದ್ದೇಶ ಸಂಹಿತೆ" ಎಂಬ ಲೇಖನದಲ್ಲಿ ಕಲಾವಿದನು ಯಾವ ರೀತಿ ಕಲಾಕೃತಿ ಸೃಷ್ಟಿ ಮಾಡುತ್ತಾನೆ. ಆದಿ ಮಾನವ ಕಾಲದಿಂದ ಈವರೆಗೆ ಕಲಾಕೃತಿಯಲ್ಲಿನ ಬದಲಾವಣೆ ಮತ್ತು ಉದ್ದೇಶಗಳು ಯಾವುವು ಎಂಬುದನ್ನು ವಿಮರ್ಶಕರು ಇಲ್ಲಿ ಹಂತ ಹಂತವಾಗಿ ತಿಳಿಸುತ್ತಾ ಹೋಗಿದ್ದಾರೆ.

ಕಲಾಕೃತಿಯೊಂದರ ಸೃಷ್ಟಿಶೀಲತೆ ಎಂದರೇನು? ಎಂದು ಪ್ರಶ್ನೆ ಹಾಕಿಕೊಳ್ಳುತ್ತಾ ಇಂದು ಗಮನಹರಿಸಿದರೆ ಏನೆಲ್ಲ ಮಾಂತ್ರಿಕ ಅವತಾರಗಳನ್ನು ಕಲಾಕೃತಿಗಳು ಎದುರಿಸಿ ಕಾಣಿಸಿಕೊಳ್ಳುತ್ತಿವೆ

ಎಂಬ ಅದ್ಭುತ ಮಜಲು ಪ್ರತ್ಯಕ್ಷವಾಗುತ್ತದೆ. ಯಾದಗಿರಿಯ ಒಳಚಕ್ರದಲ್ಲಿನ ಬಂಡೆಗಳ ಮೇಲೆ ಇತಿಹಾಸ ಪೂರ್ವ ಕಾಲದ ರೇಖಾಚಿತ್ರಗಳಿದ್ದು, ಅವು ಕೆಂಗಾವಿ ಬಣ್ಣದ ಉಬ್ಬು ಮುಖವೊಂದರ ರೂಪವು ಕಂಡುಬಂದಿದೆ. ಮಧ್ಯಪ್ರದೇಶದ ಭಿಂಬೇಟ್ಕಾದ ಶಿಲಾಶ್ರಯ ಚಿತ್ರಗಳನ್ನು ಗಮನಿಸಿದರೆ ಅಲ್ಲಿನ ಉದ್ದೇಶ ಕಾಲ ಬದಲಾದಂತೆ ಕಲಾರೂಪಗಳು ಬದಲಾಗಿದ್ದು ಕಂಡುಬಂದಿವೆ.

ಮುಂಬಯಿಯ ಇಂಡಿಯಾ ಆರ್ಟ್ ಫೇರ್‌ನಲ್ಲಿ ಮನುಷ್ಯರನ್ನು ಜೀವಂತ ಕಲಾಕೃತಿಯಾಗಿಸಿ, ಅವರನ್ನು ಮಾರಾಟಕ್ಕೆ ಇಟ್ಟಿದ್ದ ಸಂದರ್ಭ ಹಾಗೆ ಕಲಾವಿದ ಪ್ರಿತಿ ಚಂದ್ರಕಾಂತ ತಮ್ಮ ಕಾನ್ಸ್‌ಪ್ಚಾಯಲ್ ಕಲಾಪ್ರಕಾರದ ಅಡಿ ನಮ್ಮ ದೇಶದ ಮೂವರನ್ನು ಇಂಗ್ಲೀಷ್ ಬರಹವಿದ್ದ ಟೀ ಶರ್ಟ್ ನಂತಹ ಶರ್ಟ ಹಾಕಿ ಪ್ರದರ್ಶಿಸಿದರು, ಇದೊಂದು ವಿವಾದಾಸ್ಪದ ನಡೆ ಎಂದು ಕಾರಣವಾಗಿದೆ.

ಇನ್ನು ಲೆಕ್ಕ ಪಕ್ಕ ಇಲ್ಲದ, ಇಂಗ್ಲೀಷ್ ಕಲಾಪತ್ರಿಕೆಗಳು, ನಿರ್ದಿಷ್ಟ ಅವಧಿಯಲ್ಲಿ ಕಲಾವಿದರು ಪಾಲ್ಗೊಂಡು, ಕಲಾಪ್ರದರ್ಶನ ಅಥವಾ ದಾಖಲಾಗುವ ಪರಿಪಾಠ ಇವು ಸೂಕ್ತ ಅಭಿವ್ಯಕ್ತಿಯನ್ನಿಟ್ಟು ಕೊಳ್ಳದೆ ಕೇವಲ ಹಣ ಖ್ಯಾತಿಗಾಗಿ, ಮಾಡುವಂತಹವು.

ಈ ಎಲ್ಲ ಉದ್ದೇಶಗಳ ನಡುವೆ ಹೊಟ್ಟೆಯ ಪಾಡು ಎನ್ನುವ ಎಲ್ಲರೂ ಕಡೆಗಣ್ಣಿನಿಂದ ನೋಡುವ, ಕರಕುಶಲಿಗಳ ನೆರವು ಪಡೆದು ಶಿಲ್ಪ, ಚಿತ್ರ ವಸ್ತ್ರ ಇತ್ಯಾದಿಗಳನ್ನು ಸೃಷ್ಟಿಸುವ ಉದ್ದೇಶ ಇನ್ನು ಸರ್ಕಾರ ಸವಲತ್ತು ಪಡೆಯಲು ಸರ್ಕಾರದ ಗಮನ ಸೆಳೆಯಲೆಂದೇ "ಪ್ರದರ್ಶನಗಳ ಕಲಾಕೃತಿಗಳು ಕಲಾಕೃತಿಗಳೆಂಬ ಹಣೆ ಪಟ್ಟಿಯಡಿ ಪ್ರದರ್ಶಿಸಲ್ಪಟ್ಟಿರುತ್ತವೆ. ಕಲಾವಿದರ ಆತ್ಮವೇ ಇಲ್ಲದ, ಡೆರಿಡಾ ಹೇಳುವ 'ಡೆತ್ ಆಫ್ ಆಥರ್' ನೆನಪಾಗುವಂತ ಅಭಿವ್ಯಕ್ತಿ.

ಈ ರೀತಿಯಲ್ಲಿ ಒಟ್ಟಾರೆ ಕಲಾವಿದನು ಅಭಿವ್ಯಕ್ತಿಸಬೇಕು ಎಂಬ ಒತ್ತಡಕ್ಕೆ ಸಿಲುಕಿ ಮನಸ್ಸಿನ ಅಭಿವ್ಯಕ್ತಿಸಬೇಕೆಂದು ಬಿಟ್ಟು ಹಣದ ರಾಜಕಾರಣದೊಂದಿಗೆ ತಳುಕು ಹಾಕಿಕೊಂಡು ನಡೆಯುತ್ತಿದ್ದಾನೆ. ಕಣ್ ಕೊರೈಸುವಂತೆ ರೇಖೆ ಬಣ್ಣ ಕಾಣಿಸಿಕೊಳ್ಳುತ್ತಿವೆ ಈ ಎಲ್ಲವುಗಳ ನಡುವೆ ನನ್ನ ವೈಯಕ್ತಿಕ ಒತ್ತಡದಿಂದ ಬಿಡುಗಡೆ ಪಡೆಯಲು ಅಭಿವ್ಯಕ್ತಿಸುತ್ತೇನೆ ಎನ್ನುವವರು ಅಪರೂಪಕ್ಕೆ ಇದ್ದಾರೆ ಎಂದು ಕಲಾಸೃಷ್ಟಿ ಎನ್ನುವ ಅಂಶವನ್ನೇ ತುಂಬ ಅಭೂತಪೂರ್ವವಾಗಿ ಇಲ್ಲಿ ಚರ್ಚಿಸಿದ್ದಾರೆ.

**ವಿಕೃತಿ ಸೌಂದರ್ಯದ ಆಟ-ಮಾಟ:** ದಿನಾಂಕ ೨೨-೧೨-೨೦೧೩ ರಂದು ಸಂಯುಕ್ತ ಕರ್ನಾಟಕ ಪತ್ರಿಕೆಯಲ್ಲಿ ಪ್ರಕಟವಾದ 'ವಿಕೃತ ಸೌಂದರ್ಯದ ಆಟ-ಮಾಟ' ಎಂಬ ಲೇಖನದಲ್ಲಿ ಸಮಕಾಲೀನ ಶಿಲ್ಪ ಪ್ರಕಾರಗಳಲ್ಲಿನ ಮಾಧ್ಯಮ, ತಂತ್ರ ಶೈಲಿಗಳ, ಬಳಕೆಗಳನ್ನು ಕುರಿತು ಇಲ್ಲಿ ವಿಮರ್ಶಕರು ಪ್ರಸ್ತಾಪಿಸಿದ್ದಾರೆ.

ಸಮಕಾಲೀನ ಶಿಲ್ಪ ಪ್ರಕಾರವು ನಮ್ಮ ಹಲವಾರು ಶಿಲ್ಪಿಗಳ ಮೂಲಕ ಅಭಿವ್ಯಕ್ತಿಗೊಂಡಿದೆ. ಕೃಷ್ಣಮೂರ್ತಿ, ಪುಷ್ಪಮಾಲಾ, ಯುವ ಪೀಳಿಗೆಯ ಜಗನ್ನಾಥ ಜಕ್ಕೇಪಲ್ಲಿ, ಶಿವಾನಂದ ಬಂಟನೂರು,

ರಮೇಶ್, ಗೋಪಾಲ್ ಕಮ್ಮಾರ್. ಹಾಗೆ ಹೊರಗಿನಿಂದ ಬಂದು ನಮ್ಮವರೇ ಆಗಿರುವ ತೇಜೇಂದ್ರಸಿಂಗ್ ಬೌನಿ, ನಾರಾಯಣ ಸೂತ್ರದಾರರಂಥವರೂ, ಬಾಲನ್ ನಂಬಿಯಾರ್‌ನಂತಹ ಅನುಭವಿಗಳೂ ಕಾಣಿಸಿಕೊಳ್ಳುತ್ತಾರೆ.

ವೆಂಕಟಪ್ಪ, ಸುಬ್ಬುಕೃಷ್ಣರ ವಿಕೃತಿ ಸೌಂದರ್ಯ ವ್ಯಂಗ್ಯ ವಿಡಂಬನೆ, ರಾಜಾರಾಮ್‌ರವರ ಮಾಧ್ಯಮದೊಂದಿಗಿನ ಆಟ–ಮಾಟಗಳು ಕಾಣಬಹುದು. ಈ ಎಲ್ಲದರ ನಡುವೆ ಮೈಸೂರಿನ ಚಾಮರಾಜ ದೃಶ್ಯಕಲಾ ಅಕಾಡೆಮಿ(ಕಾವಾ) ಅಖಿಲ ಭಾರತ ಕಲಾಶಿಬಿರದಲ್ಲಿ ಮೂಡಿಬಂದ ರಾಮ್‌ದಾಸ ಅಡ್ಯಂತಾಯರ ಶಿಲ್ಪ, ಹಲವು ವಿಶೇಷ ಇನ್‌ಸ್ಟಾಲೇಷನ್‌ಗಳ ನಡುವೆ ಇದ್ದು, ಅಪೂರ್ವ ಅನುಭವ ನೀಡುವಂತಿದೆ ಎನ್ನುತ್ತಾರೆ. ಉಳಿದ/ಬೇರೆಲ್ಲಾ ನೋಟಗಳಲ್ಲಿ ಅದೊಂದು ಉಳಿ, ಚಾಣಗಳಿಂದ ಕೆತ್ತಿಸಿಕೊಂಡ ಸಾಮಾನ್ಯ ರೂಪ/ಯಾವುದೋ ಮುಖರೂಪವನ್ನು ಬಿಂಬಿಸಿದಂತಿತ್ತು. ಈ ಲೇಖನದಲ್ಲಿರುವ ಇನ್ನೊಂದು ನೋಟವು ಶಿಲ್ಪ ಛಾಯಾಚಿತ್ರದ ವಿಕೃತ ಸೌಂದರ್ಯದ ದರ್ಶನದಂತಿದ್ದು ಸಾಂಕೇತಿಕವಾಗಿ ಅಥವಾ ಕಣ್ಣುಗಳೇ ಇಲ್ಲದ ಈ ಮುಖದ ಮೂಗು, ತುಟಿ, ಗಲ್ಲಗಳ ರೂಪಕಲ್ಪನೆ ನೋಡುಗರ ಮನಸ್ಥಿತಿಗೆ ಪೂರಕವಾದ ಭಾವವನ್ನು ತೋರಬಲ್ಲದು. ಮೋನಾಲಿಸಾಳ ತುಟಿಗಳ ಅಪೂರ್ವ ನಗುವಿನಂತೆ ಇದು ನಾರಾಯಣ ಸೂತ್ರದಾರರ ಅಭಿವ್ಯಕ್ತಿಯಾಗಿದೆ.

ಒಟ್ಟಾರೆ ಈ ಮೇಲಿನ ಎಲ್ಲ ಕಲಾವಿದರು ಅಥವಾ ಶಿಲ್ಪಗಳು ತಮ್ಮ ತಮ್ಮ ಸಂತೋಷದ ಅನುಭಾವಕ್ಕಾಗಿ ಹಾತೊರೆದವರಿಂದ ರಚಿಸಿದ ಕಲಾಕೃತಿಗಳಾಗಿದ್ದು, ವೀಕ್ಷಕರಿಗೆ ಬಹುಕಾಲ ಕಾಡುವ ನೋಟಗಳನ್ನು ಪಡೆದುಕೊಂಡಿವೆ ಎನ್ನುತ್ತಾರೆ.

ಹೀಗೆ ಕೆ.ವಿ.ಸುಬ್ರಹ್ಮಣ್ಯಂರವರು ದಿನಪ್ರತಿಕೆ, ನಿಯತಕಾಲಿಕೆಗಳಿಗೆ ಬರೆದಂತಹ ನೂರಾರು ವಿಭಿನ್ನ ವಿಷಯಗಳನ್ನೊಳಗೊಂಡ ಲೇಖನಗಳನ್ನು ಬರೆದಿದ್ದು, ಅವುಗಳಲ್ಲಿ ಲಭ್ಯವಾದಂತಹ ಕೆಲವೊಂದು ಪ್ರಮುಖ ಲೇಖನಗಳನ್ನು ಆಯ್ದುಕೊಂಡು ಅಧ್ಯಯನ ಮಾಡಿಲಾಗಿದ್ದು, ಇನ್ನೂ ಹಲವಾರು ಲೇಖನಗಳು ದೊರೆತಿದ್ದರೂ ಕೂಡ ಸೀಮಿತ ಚೌಕಟ್ಟಿಗೆ ಈ ಅಧ್ಯಯನ ಒಳಪಟ್ಟಿರುವುದರಿಂದ ಎಲ್ಲ ಲೇಖನಗಳನ್ನು ಬಳಸಿಕೊಂಡಿರುವುದಿಲ್ಲ. ಆದ್ದರಿಂದ ಇನ್ನುಳಿದ ಕೆಲವು ಲೇಖನಗಳ ಪಟ್ಟಿಯನ್ನು ಈ ಕೆಳಗೆ ನೀಡಲಾಗಿದೆ.

೧. ಬಣ್ಣ ಭಾವಗಳ ಆಟದ ದೃಶ್ಯಲೋಕ

೨. ಬುದ್ದನ ನಿರ್ವಾಣ ವೈಭವ

೩. ಗೋವಾ ಕಲಾವಿದನ ಬದುಕಿನ ಸಂಭ್ರಮ

೪. ನೋಡಿದ ದೃಶ್ಯಲೋಕ ಅಭಿವ್ಯಕ್ತಿಗೊಂಡಾಗ...

೫. ರೆಂಬ್ರಾಂಟ್ ಜರ್ನಿಯ ಕಲಾಕೃತಿಗಳು

೬. ದೈವಿಕ ಆನಂದದ ಅನುಭವ ಸಮಕಾಲೀನವಾಗಬಲ್ಲದೇ?

೭. ದೃಶ್ಯಕಲೆ ಇತಿಹಾವಾಗುವುದು ಯಾವಾಗ?

೮. ಗುಲ್ಬರ್ಗಾದಿಂದ ಮುಂಬಯಿಯ ಗ್ಯಾಲರಿಗೆ

೯. ಬೌದ್ಧ ಭಿಕ್ಷುಗಳ–ಮಹಾಪಯಣ ೨೦೧೩.ಪಯಣದ ಸ್ಥಿತಿಪ್ರಜ್ಞೆಯ ನಿರಚನೆ

೧೦. ನೋಡುವ ಕಣ್ಣು ಮತ್ತು ಮನಸ್ಸುಗಳ ನಡುವೆ

೧೧. ರಾಷ್ಟ್ರ–ರಾಜ್ಯ ವ್ಯಾಪ್ತಿಯ ಹಣೆ ಪಟ್ಟಿಯ ಪ್ರದರ್ಶನಗಳು

೧೨. ಮೈಸೂರಿನಲ್ಲಿ ಇದ್ದು ಹೋದ ಕಲಾವಿದರ ಅಭಿವ್ಯಕ್ತಿಗಳು

೧೩. ಚಿತ್ರ ರೂಪಗಳು ಕುಶಲತೆಯಿಂದ ಮಾತ್ರ ಚಿತ್ರಿಸಿಕೊಳ್ಳುತ್ತವೆಯೇ?

೧೪. ಕೇರಳದಲ್ಲಿ ವಿವಾನ್ ಸುಂದರಂ ಅಭಿವ್ಯಕ್ತಿ

೧೫. ಕರ್ನಾಟಕದ ಕೌತುಕಮಯ ಆದಿಯ ಕಲೆ

೧೬. ಆದಿಮ ಚಿತ್ರಕಲೆಯ ಅತ್ಯಂತಿಕ ಕುಶಲತೆ

೧೭. ಹಂಪೆಯ ಇತಿಹಾಸಪೂರ್ವ ಚಿತ್ರನೆಲೆ

೧೮. ಘಟ್ಟ ಮಾದಮಂಗಲದ ಆದಿಮ ಚಿತ್ರಗಳು

೧೯. ಲೌಕಿಕ–ಅಲೌಕಿಕ ಸೌಂದರ್ಯದ ಅನ್ವೇಷಣೆ

೨೦. ಚಿತ್ರವಸ್ತ್ರ–ಛಾಯಾಚಿತ್ರ–ಗಾಜುಲೇಪ

೨೧. ಚಿತ್ರ ವ್ಯಕ್ತಿಯ ಆನಂದದ ಅಭಿವ್ಯಕ್ತಿಯ ಗತಿಬಿಂಬಗಳು

೨೨. ಪ್ರಭಾವಗಳನ್ನು ಅರಗಿಸಿಕೊಳ್ಳುವ ಅನ್ವೇಷಣಾ ಹಾದಿಯಲ್ಲಿ

೨೩. ರಷ್ಯನ ಕಲಾವಿದನನ್ನು ಕಾಡಿದ ಹಿಮಾಲಯ

೨೪. ಹುಸೇನರ ಕುಂಚದಲ್ಲಿ ಕಲ್ಕತ್ತೆಯ ಏಳುಬೀಳುಗಳು

೨೫. ಕುಂಚಗಳಲ್ಲಿ ಮೂಡಿದ ಹೆಣ್ಣು ಮತ್ತು ಪ್ರಕೃತಿ

೨೬. ಚಿಂತನೆ–ಅನ್ವೇಷಣೆಗಳ ಹಾದಿಯಲ್ಲಿ

೨೭. ಮಕ್ಕಳ ಛಾಯಾಚಿತ್ರಗಳು

೨೮. ಆರ್ಟ್ ಮೇಳ ೯೨ ಮತ್ತು ಕುಂಭಕಲೆ

೨೯. ಬ್ರಿಟನ್ನಿನ ಭೂಮಿಯ ಬಣ್ಣಗಳು

೩೦. ಸಾಂಪ್ರದಾಯಿಕ ಸೊಬಗೆ

# ಅಧ್ಯಾಯ ಒಂಬತ್ತು

# ಸಂಕೀರ್ಣ ದೃಶ್ಯಕಲಾ ಸಾಹಿತ್ಯ

೯.೧. ಅಭಿನಂದನ ಗ್ರಂಥಗಳು

೯.೨. ಸ್ಮರಣ ಸಂಚಿಕೆಗಳು

೯.೩. ಇತರೆ ಬರೆಹಗಳು

## ಅಧ್ಯಾಯ ಒಂಬತ್ತು

# ಸಂಕೀರ್ಣ ದೃಶ್ಯಕಲಾ ಸಾಹಿತ್ಯ

ಕೆ.ವಿ.ಸುಬ್ರಹ್ಮಣ್ಯಂ ರವರು ಬರಹ ತಾತ್ವಿಕ ಬರೆದ ಕೃತಿಗಳು, ವ್ಯಕ್ತಿಕೇಂದ್ರಿತ ಕೃತಿಗಳು, ಪತ್ರಿಕಾ ಲೇಖನಗಳು, ಸಂಶೋಧನಾ ಬರಹಗಳನ್ನು ಹೊರತುಪಡಿಸಿ ವಿಚಾರ ಸಂಕರಣದಲ್ಲಿ ಮಂಡಿಸಿದ ಪ್ರಬಂಧಗಳನ್ನು, ಇತರ ಸಂಘ ಸಂಸ್ಥೆಗಳ ವರ್ಷಾಚರಣೆಯ ಸಂದರ್ಭದಲ್ಲಿ ಬರೆದುಕೊಟ್ಟ ಲೇಖನಗಳನ್ನು ಮತ್ತು ಅಭಿನಂದನ ಗ್ರಂಥಗಳಲ್ಲಿ ಬಂದಿರುವ ಲೇಖನಗಳು ಸಾಕಷ್ಟು ಕಾಣಬಹುದಾಗಿದೆ. ಇವೆಲ್ಲವನ್ನು ಒಟ್ಟುಗೂಡಿಸಿ ಸಂಕೀರ್ಣ ದೃಶ್ಯಕಲಾ ಸಾಹಿತ್ಯ ಎಂದು ಕರೆಯಲಾಗಿದೆ. ಈ ಹಿನ್ನೆಲೆಯಲ್ಲಿ ಬಂದಿರುವ ಲೇಖನ, ಬರಹಗಳನ್ನು ಅಧ್ಯಯನದ ಅನುಕೂಲಕ್ಕಾಗಿ ವಿಷಯವಾರು ವಿಂಗಡನೆ ಮಾಡಿಕೊಂಡು ಪ್ರಸ್ತುತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

೯.೧. ಅಭಿನಂದನ ಗ್ರಂಥಗಳು

೯.೨. ಸ್ಮರಣ ಸಂಚಿಕೆಗಳು

೯.೩. ಇತರೆ ಬರೆಹಗಳು

### ೯.೧. ಅಭಿನಂದನ ಗ್ರಂಥಗಳು

ಕಲಾಕ್ಷೇತ್ರದಲ್ಲಿ ಸಾಧನೆ ಮಾಡಿರುವ ವ್ಯಕ್ತಿಗಳಿಗೆ ಐವತ್ತು ವರ್ಷಗಳು ತುಂಬಿದಾಗ ಇಲ್ಲವೇ ಅರವತ್ತು ವರ್ಷಗಳು ತುಂಬಿದಾಗ ಅವರ ಅಭಿಮಾನಿಗಳು, ಆಪ್ತರು ಮತ್ತು ಶಿಷ್ಯವರ್ಗ ಹೀಗೆ ಅನೇಕರು ಸೇರಿ ಅವರಿಗೆ ಅಭಿನಂದನೆ ಕಾರ್ಯಕ್ರಮ ಹಮ್ಮಿಕೊಂಡು ಆ ಗ್ರಂಥವನ್ನು ಹೊರತರುವ ಸಂಪ್ರದಾಯವು ಇತ್ತೀಚೆಗೆ ಕಲಾಕ್ಷೇತ್ರದಲ್ಲಿ ನಡೆದು ಬರುತ್ತಿವೆ. ಕೆ.ವಿ.ಸುಬ್ರಹ್ಮಣ್ಯಂ ರವರು ಬರೆದ ಕೆಲವು ಅಭಿನಂದನಾ ಗ್ರಂಥಗಳಲ್ಲಿನ ಲೇಖನ ಬರಹಗಳನ್ನು ಕಾಣಬಹುದು. ಅವುಗಳನ್ನು ಈ ಕೆಳಗಿನಂತೆ ವಿಷಯದ ವಿವರಣೆಯನ್ನು ನಾವು ನೋಡಬಹುದು.

**೯.೧.೧. ಅಂದಾನಿ ಐವತ್ತು:** ಈ ಕೃತಿಯು ಗುಲಬರ್ಗಾದ ಹಿರಿಯ ಕಲಾವಿದರಲ್ಲಿ ಒಬ್ಬರಾದ ವ್ಹಿ.ಜಿ.ಅಂದಾನಿಯವರಿಗೆ ಐವತ್ತು ವರ್ಷಗಳು ತುಂಬಿದಾಗ ಅಂದಾನಿ ಗೆಳೆಯರ ಬಳಗದಿಂದ ಈ ಗ್ರಂಥವನ್ನು ಹೊರತರಲಾಗಿದೆ. **'ಕಲಾವಿದ ಅಂದಾನಿ ಐವತ್ತು'** ಎಂದು ಹೆಸರಿಸಲಾಗಿರುವ ಈ ಗ್ರಂಥವನ್ನು ಚಂದ್ರಹಾಸ, ವೈ.ಜಾಲಿಹಾಳ ಸಂಪಾದಿಸಿದ್ದಾರೆ. ಈ ಕೃತಿಯಲ್ಲಿ ಅಂದಾನಿಯವರ ಜೀವನ ಕಲಾಬದುಕು, ಕಲಾಕೃತಿ ವಿಮರ್ಶೆ ಮುಂತಾದ ವಿಷಯಗಳ ಬಗ್ಗೆ ಹದಿಮೂರು ಕನ್ನಡ ಮತ್ತು ಆರು ಇಂಗ್ಲೀಷ್ ಲೇಖನಗಳಿವೆ. ಮತ್ತೊಂದು ಭಾಗದಲ್ಲಿ ಅಂದಾನಿಯವರು ವಿವಿಧ ಸಂದರ್ಭಗಳಲ್ಲಿ ಬರೆದ ಕಲೆಯ ಕುರಿತಾಗಿರುವ ಆರು ಲೇಖನಗಳಿದ್ದರೆ, ಬೇರೆ ಬೇರೆ ಪತ್ರಿಕೆಗಳು ಅಂದಾನಿಯವರ ಕಲಾಜೀವನ ಕಲೆ, ಕಲಾಕೃತಿಗಳ ಬಗ್ಗೆ ಬರೆದಂತಹ ಎಂಟು ಲೇಖನಗಳೂ ಇಲ್ಲಿವೆ. ಇದರ ಜೊತೆಗೆ ಅಂದಾನಿಯವರು ರಚಿಸಿದ ಹನ್ನೊಂದು ಚಿತ್ರಕಲಾ ಕೃತಿಗಳನ್ನು ಈ ಪುಸ್ತಕದಲ್ಲಿ ಅಲ್ಲಲ್ಲಿ ಮೂಡಿಸಲಾಗಿದೆ.

ಪ್ರಸ್ತುತ ಕೃತಿಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಂತಹ 'ಅಂದಾನಿ: ಅಪರೂಪದ ಸಂವೇದನಾಶೀಲ ಕಲಾವಿದ' ಮತ್ತು 'ಸಮಕಾಲೀನ ಸಂಬಂಧಗಳ ರೇಖಾಗ್ರಹಿಕೆಗಳು' ಎಂಬ ಲೇಖನಗಳು ಕಂಡುಬರುತ್ತವೆ.

'ಅಂದಾನಿ: ಅಪರೂಪದ ಸಂವೇದನಾಶೀಲ ಕಲಾವಿದ' ಲೇಖನದಲ್ಲಿ ಗುಲಬರ್ಗಾ ದಂಥ ಹಿಂದುಳಿದ ಪ್ರದೇಶದಲ್ಲಿ ವ್ಹಿ.ಜಿ.ಅಂದಾನಿ ಅವರು ಚಿತ್ರಕಲಾ ರಂಗದಲ್ಲಿ ಸಾಧಿಸಿದ ಸಾಧನೆಯ ಕುರಿತಾಗಿ ಮತ್ತು ಹುಟ್ಟು, ಬೆಳವಣಿಗೆ, ಕಲಾಶಿಕ್ಷಣ ಮತ್ತು ಕಲಾಕೃತಿಯಲ್ಲಿ ಮೂಡಿಸಿದಂತ ತಮ್ಮದೇ ಆದ ಶೈಲಿ ತಂತ್ರಗಳನ್ನು ಹಾಗೆ ಕಲಾ ಕ್ಷೇತ್ರಕ್ಕೆ ಅವರ ಕೊಡುಗೆ ಸಂದಿರುವಂತ ಪ್ರಶಸ್ತಿ ಗೌರವಗಳನ್ನು ಸಂಕ್ಷಿಪ್ತ ರೀತಿಯಲ್ಲಿ ಪರಿಚಯ ಮಾಡುವಂತದಾಗಿದೆ.

ಗುಲಬರ್ಗಾದ ಶ್ರೀಮಂತ ಸಾಂಸ್ಕೃತಿಕ ಪರಂಪರೆಯ ಮನೆತನದಲ್ಲಿ ೧೯೪೬ರಲ್ಲಿ ಹೊನ್ನ ಕಿರಣಗಿ ಎಂಬ ಹಳ್ಳಿಯಲ್ಲಿ ಜನಿಸಿದ ಅಂದಾನಿಯವರು ಸಾಮಾನ್ಯ ಶಿಕ್ಷಣ, ಕಲಾಶಿಕ್ಷಣವನ್ನು ೧೯೬೭ರಲ್ಲಿ ಗಳಿಸಿ ನಂತರದ ದಿನಗಳ ಕಲಾಸೃಷ್ಟಿ ದಿ ಆಲಮೇಲಕರ್‌ರ ರೇಖೆ, ಬಣ್ಣ, ವಸ್ತುಗಳಿಂದ ಸ್ಫೂರ್ತಿಗೊಂಡು ಅಲಂಕೃತಗೊಂಡವಾಗಿವೆ. ೧೯೭೭ರಲ್ಲಿ ಭಿತ್ತಿಚಿತ್ರ ರಚಿಸುವ ತರಬೇತಿಯನ್ನು ರಾಜಸ್ಥಾನದ ಬನಸ್ಥಳದಲ್ಲಿ ಪಡೆದರೂ ಸಮಕಾಲೀನ ಚಿತ್ರ ತಂತ್ರಗಳು ಇವರ ಕೃತಿಗಳಲ್ಲಿ ಹೊಸ ಚೇತನದಿಂದ ಕಾಣಿಸಿಕೊಂಡಿರುವಂಥವು. ಆಕಾಡೆಮಿಕ್ ಆದ ಚಿತ್ರ, ರೂಪ, ಶೈಲಿಗಳಿಂದ ಭಿನ್ನವಾಗಿ ಅಭಿವ್ಯಕ್ತಿಗೆ ಅನುವಾಗುವಂಥ ಹಾದಿಗಳನ್ನರಸಿಕೊಂಡಿರುವ ಅಂದಾನಿಯವರ ಕಲಾಪಯಣದಲ್ಲಿ ನಡೆದ ವೈವಿಧ್ಯತೆಯನ್ನು ಉತ್ತಮವಾಗಿ ಇಲ್ಲಿ ಕಂಡರಿಸಿದ್ದಾರೆ.

ನಂತರ ಕೃತಿಗಳಲ್ಲಿ ಪ್ರಭಾಪಿಸಿಕೊಂಡ ಪಶ್ಚಿಮ ಕಲಾಶೈಲಿಗಳು ಸುತ್ತಲಿನ ತಾಜಾತನದಿಂದ ವಿಶಿಷ್ಟ ರೇಖಾ ಚಿತ್ರಗಳು ರಚನೆಯಾಗಿವೆ ಎನ್ನಲಾಗಿದೆ. ಅವರ ಚಿತ್ರಸರಣಿಯ ಶೀರ್ಷಿಕೆ

'ಪ್ಯಾಟ್'ಎಂಬುದಾಗಿದ್ದು ಇವುಗಳಲ್ಲಿನ ಕೃತಿಗಳ ರೇಖಾಕಾರಗಳು, ವಿಕೃತ ಕಲ್ಪನಾ ಸೌಂದರ್ಯ ಜಲವರ್ಣದ ಆಕರ್ಷಕ ವಾಷ್ ತಂತ್ರದ ಸಂಯೋಜನೆಗಳು ಮತ್ತು ಇನ್ನಿತರ ಕೃತಿಗಳಲ್ಲಿ ರೇಖೆ ಮತ್ತು ಮೈವಳಿಕೆಗಳನ್ನು ದುಡಿಸಿಕೊಂಡಿರುವುದನ್ನು ಲೇಖಕರು ಇಲ್ಲಿ ಪರಿಚಯಿಸುತ್ತಾ ವಿವಿಧ ಮಾಧ್ಯಮಗಳಲ್ಲಿನ ಕೃತಿಗಳು, ಕಲಾಕೃತಿಗಳಲ್ಲಿನ ಮಿಶ್ರಮಾಧ್ಯಮದ ರಚನೆ ಇವು ಬದುಕಿನ ಆದಿ ಅಂತ್ಯಗಳ ಆಟದ ದಾಖಲೆಗಳಿಂದ ಸೃಷ್ಟಿಗಳಾಗಿವೆ ಎನ್ನುತ್ತಾರೆ.

ಅಂದಾನಿಯವರ ವಿಶಿಷ್ಟ ವ್ಯಕ್ತಿತ್ವವನ್ನು ಇಲ್ಲಿ ಲೇಖಕರು ಪರಿಚಯಿಸಿದ್ದು, ಇದಕ್ಕೆ ಕಾರಣವೆಂಬಂತೆ ಕರ್ನಾಟಕ ಲಲಿಕಲಾ ಅಕಾಡೆಮಿಯ ಸದಸ್ಯತ್ವವನ್ನು ಪಡೆದವರಾಗಿದ್ದಲ್ಲದೆ, ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯನ್ನು ನಡೆಸಿಕೊಂಡು ಹೋಗುತ್ತಿರುವ ರೀತಿ ಅನುಕರಣೀಯ. ಇವರ ಅಧ್ಯಕ್ಷತೆಯಲ್ಲಿ ಹಲವು ಬಾರಿ ರಾಷ್ಟ್ರೀಯ ಮಟ್ಟದ ಚಿತ್ರ, ಶಿಲ್ಪ ಶಿಬಿರಗಳು ಕೇಂದ್ರ ರಾಜ್ಯ ಲಲಿತಕಲಾ ಅಕಾಡೆಮಿ ಸಹಯೋಗದೊಂದಿಗೆ ನಡೆದಿವೆ. ೧೯೯೩ರಲ್ಲಿ ನಡೆದ ಸಿಂಪೋಸಿಯಂ ಹಲವಾರು ದೃಷ್ಟಿಗಳಿಂದ ಗಮನಾರ್ಹ. ಗುಲಬರ್ಗಾದಂಥ ತೀರಾ ಹಿಂದುಳಿದ ಪ್ರದೇಶದಲ್ಲಿದ್ದುಕೊಂಡು ಆ ಪ್ರದೇಶದ ಯುವ ಪ್ರತಿಭೆಗಳಿಗೆ ಉತ್ತೇಜನ ನೀಡಿ ಮಹತ್ವದ ಸಾಧನೆ ಮಾಡಿರುವ ಅಂದಾನಿಯವರಿಗೆ ಕೇಂದ್ರ ಲಲಿತಕಲಾ ಅಕಾಡೆಮಿ ಪ್ರಶಸ್ತಿ(೧೯೯೨), ರಾಜ್ಯೋತ್ಸವ ಪ್ರಶಸ್ತಿ(೧೯೯೨), ರಾಜ್ಯ ಲಲಿತ ಕಲಾ ಅಕಾಡೆಮಿ ಪ್ರಶಸ್ತಿ ಅವರಿಗೆ ದೊರೆತಿದೆ. ಇತ್ತೀಚೆಗೆ ಗುಲಬರ್ಗಾ ವಿಶ್ವವಿದ್ಯಾಲಯದಿಂದ ಗೌರವ ಡಾಕ್ಟರೇಟ್ ಪ್ರಶಸ್ತಿಯು ತಂದಿರುವುದು ಪ್ರಶಂಸನೀಯ ವಿಚಾರ. ಈ ಹಿನ್ನೆಲೆಯಲ್ಲಿ ಅಂದಾನಿಯವರ ಅನ್ವೇಷಣೆ ಈ ಪ್ರಶಸ್ತಿಗಳಿಂದ ನಿರಂತರವಾಗಿರಿ ಎಂದು ಲೇಖಕರು ಈ ಕೃತಿಯ ಮೂಲಕ ಹಾರೈಕೆಯನ್ನು ವ್ಯಕ್ತಿಪಡಿಸಿದ್ದಾರೆ.

ಇದೇ ಕೃತಿಯಲ್ಲಿನ ಇನ್ನೊಂದು ಲೇಖನ 'ಸಮಕಾಲೀನ ಸಂಬಂಧಗಳ ರೇಖಾಗ್ರಹಿಸಕೆಗಳು' ಎಂಬುದನ್ನು ಮೊದಲಿಗೆ ರೇಖಾ ಪ್ರಾಮುಖ್ಯತೆಯನ್ನು ತಿಳಿಸುತ್ತಾ ವಿ.ಜಿ.ಅಂದಾನಿಯವರು ದುಡಿಸಿಕೊಂಡಿರುವ ರೇಖೆಗಳ ವೈವಿಧ್ಯತೆ ಸಮಸಮಕಾಲೀನ ಕಲೆಯ ಎಲ್ಲ ಪ್ರಭಾವ ಹಾಗೂ ವೈರುಧ್ಯಗಳನ್ನು ಅರಗಿಸಿಕೊಂಡು ಅನನ್ಯತೆಯನ್ನು ಸಾಧಿಸಿರುವ ವಿವರಣೆಯನ್ನು ಇಲ್ಲಿ ಕಾಣಬಹುದಾಗಿದೆ.

ಬಾಲ್ಯದಲ್ಲಿಯೇ ರೇಖೆಗಳಲ್ಲಿ ಚಿತ್ರರೂಪಗಳನ್ನು ರಚನೆ ಮಾಡಿ ದಿ॥ ಆಲಮೇಲಕರ್‌ರವರ ಚಿತ್ರಗಳಲ್ಲಿನ ರೇಖೆಗಳ ಬೆಡಗು, ಅಲಂಕರಣ ಬೀರಿದ ಪ್ರಭಾವಗಳನ್ನು ಇವರ ಇತ್ತೀಚಿನ ರೇಖಾಕೃತಿಗಳಲ್ಲಿ ಕಾಣಬಹುದು. ಹಾಗೆ ಕಲಾಕೃತಿಗಳಲ್ಲಿ ರೇಖೆಗಳನ್ನು ದುಡಿಸಿಕೊಂಡ ರೀತಿ, ಮೈವಳಿಕೆ, ವಿಶಿಷ್ಟ ಮಾಧ್ಯಮ ವರ್ಣಗಳ ಬಳಕೆ ಹೆಚ್ಚು ಪ್ರಾಧಾನ್ಯತೆ ಪಡೆದುಕೊಂಡಿದ್ದು, ಅವುಗಳ ವಿಕೃತಿ ನಮ್ಮ ಕಲಾ ಇತಿಹಾಸದ ದಿಗ್ಗಜಗಳ ನೆನಪು ಕಾಡುವಂತೆ ಕಾಣಿಸಿಕೊಂಡವಾದರು ಬದುಕಿನ ದ್ವಂದ್ವ ದ್ವಿತ್ರಿಮುಖಗಳ ಮಾನವ, ಪ್ರಾಣಿ, ಪಕ್ಷಿ, ಸಸ್ಯರೂಪಗಳು ಯೌವನ ಮತ್ತು

ಮಧ್ಯ ವಯಸ್ಕರ ಒಳನೋಟಗಳ ಗ್ರಹಿಕೆಗಳನ್ನು ಬಳಸಿಕೊಂಡಿರುವ ರೀತಿ, ರೇಖೆಗಳ ರೂಪಗಳು, ಸುಂದರವಾಗಿ ಮೂಡಿಬಂದಿವೆ ಎಂದು ಲೇಖಕರು ಇಲ್ಲಿ ವ್ಯಕ್ತಪಡಿಸಿದ್ದಾರೆ.

**೬.೧.೨. ನಿಜದ ನೆಲೆ:** ಕರ್ನಾಟಕ ಕಲೆ ಮತ್ತು ಸಾಹಿತ್ಯ ಉಭಯ ಕ್ಷೇತ್ರಗಳಲ್ಲಿ ಸಾಧನೆಗೈದವರು ಡಾ.ಬಿ.ಕೆ.ಹಿರೇಮಠರು. ಚಿತ್ರಕಲಾವಿದರಾಗಿ, ಕಲಾಸಾಹಿತಿಯಾಗಿ ಸಂಶೋಧಕರಾಗಿ ಮಾಡಿದ ಕಾರ್ಯ, ನೀಡಿದ ಕೊಡುಗೆ ಅನನ್ಯವಾದುದು. ಉತಮ ಅಧ್ಯಾಪಕರಾಗಿ ಶ್ರೇಷ್ಠ ಕಲಾವಿದರಾಗಿ ಕನ್ನಡ ನಾಡು–ನುಡಿಗೆ ಕಲೆ ಹಾಗೂ ಸಾಹಿತ್ಯದ ಕೊಡುಗೆ ನೀಡಿದ ಇಂತಹ ವಿದ್ವಾಂಸರಾದ ಡಾ.ಬಿ.ಕೆ.ಹಿರೇಮಠರಿಗೆ ಅವರವತ್ತು ತುಂಬಿದಾಗ ಅವರ ವಿದ್ಯಾರ್ಥಿಗಳು ಮತ್ತು ಅಭಿಮಾನಿಗಳು ಸಮರ್ಪಿಸಿದ ಅಭಿನಂದನಾ ಗ್ರಂಥವನ್ನು ಡಾ.ಎಸ್.ಸಿ.ಪಾಟೀಲ ಮತ್ತು ಸತ್ಯಾನಂದ ಪಾತ್ರೋಟ ಅವರು ಸಂಪಾದಿಸಿದ್ದಾರೆ. ಈ ಬೃಹತ್ ಗ್ರಂಥದಲ್ಲಿ ಒಟ್ಟು ೧೩೭ ಲೇಖನಗಳಿದ್ದು ಮೂರು ಭಾಗಗಳನ್ನು ಮಾಡಲಾಗಿದೆ. ಒಂದನೆಯ ಭಾಗದಲ್ಲಿ ನಾಡಿನ ವಿವಿಧ ವಿದ್ವಾಂಸರು ಬರೆದ ಕಲೆಯ ಬಗೆಗಿನ ಎಪ್ಪತ್ತನಾಲ್ಕು ಲೇಖನಗಳಿವೆ. ಎರಡನೆಯ ಭಾಗದಲ್ಲಿ ಕನ್ನಡ ಸಾಹಿತ್ಯಕ್ಕೆ ಸಂಬಂಧಿಸಿದ ಲೇಖನಗಳಿವೆ. ಮೂರನೆಯ ಭಾಗದಲ್ಲಿ ಡಾ.ಬಿ.ಕೆ.ಹಿರೇಮಠರ ಒಡನಾಡಿಗಳಾದ ಮಕ್ಕಳು, ಅಳಿಯಂದಿರು, ವಿದ್ಯಾರ್ಥಿಗಳು, ಮಿತ್ರರು, ವಿದ್ವಾಂಸರು, ಗುರುಗಳು, ಸಹಪಾಠಿಗಳು ಹೀಗೆ ಅನೇಕ ಜನರು ಬರೆದಿರುವ ಅನಿಸಿಕೆಗಳನ್ನು ಕಾಣಬಹುದು.

'ನಿಜದ ನೆಲೆ' ಕೃತಿಯಲ್ಲಿರುವ ಲೇಖನಗಳು ಚಿತ್ರಕಲೆಯ ದೃಷ್ಟಿಯಿಂದ ಮಹತ್ವದ್ದಾಗಿದೆ. ಭಿತ್ತಿ ಚಿತ್ರಕಲೆ, ಹಸ್ತಪ್ರತಿ ಚಿತ್ರಕಲೆ, ಜನಪದ ಕಲಾ ಪ್ರಾಕಾರಗಳು, ಕಲಾವಿಮರ್ಶೆಗೆ ಸಂಬಂಧಿಸಿದ ಲೇಖನಗಳು, ಕಲಾ ಶಿಕ್ಷಣವನ್ನು ಕುರಿತ ಲೇಖನಗಳು ಈ ಕಲಾಕೋಶದಲ್ಲಿ ನಾವು ವೀಕ್ಷಿಸಬಹುದು.

ಈ ಹಿನ್ನೆಲೆಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವಂತ **"ಭಾರತೀಯ ಚಿತ್ರ ಮತ್ತು ಶಿಲ್ಪಕಲೆಗಳಲ್ಲಿ ಪಾಶ್ಚಾತ್ಯ ಪ್ರಭಾವ"** ಎಂಬ ಲೇಖನದಾಗಿದ್ದು, ಇದರಲ್ಲಿ ನಮ್ಮ ಇತಿಹಾಸಕರು ಪೂರ್ವ ಭಾಗಗಳಿಂದಲೇ ಕಲೆಯ ಬಗ್ಗೆ ಹೊರಗಿನ ನಂಟು ಅಂಟಿಸಿಕೊಂಡು ಬೆಳೆದ ಕಲೆಯ ಬಗ್ಗೆ ಚರ್ಚಿಸಲಾಗಿದೆ. ರವಿವರ್ಮನು ೧೯೫೦ರ ತನ್ನ ತೈಲವರ್ಣದ ಕಲಾಕೃತಿಗಳಲ್ಲಿ ಪಶ್ಚಿಮದ ಅಕಾಡೆಮಿಕ್ ಶೈಲಿಯ ಪ್ರಯೋಗ ೧೮೫೦ರಲ್ಲಿ ಬ್ರಿಟೀಷರ ಅಕಾಡೆಮಿಕ್ ಶಿಕ್ಷಣ ಆರಂಭಗೊಂಡು ಕಲಾಶಾಲೆಗಳಲ್ಲಿ ವಿದ್ಯಾರ್ಥಿಗಳಿಗೆ ಪಾಶ್ಚಾತ್ಯ ಶೈಲಿಯ ಅನುಕರಣೆಯಿಂದ ಚಿತ್ರರಚನೆಗೆ ಮುಂದಾಗಿದ್ದು ನಮ್ಮ ಕಲಾವಿದರೂ ಕೂಡ ಪಾಶ್ಚಾತ್ಯರ ರೇಖೆ, ಬಣ್ಣಗಳ ವೈವಿಧ್ಯತೆ, ಸೌಂದರ್ಯತೆಯನ್ನು ಆಕರ್ಷಿಸಿ ಚಿತ್ರ ರಚನೆಗೆ ಮುಂದಾಗಿರಬಹುದೇನು ಎಂದು ಲೇಖಕರು ಅಭಿಪ್ರಾಯಿಸಿದ್ದಾರೆ.

ಬ್ರಿಟೀಷರು ೨೦೦ ವರ್ಷಗಳ ಆಳ್ವಿಕೆಯಲ್ಲಿ ನಮ್ಮ ಕಲಾವಿದರು ಪೂರ್ತಿಯಾಗಿ ಯುರೋಪಿಯನ್ ಕಲೆಯ ಅಕಾಡೆಮಿಕ್ ರಿಯಲಿಸಂ, ಇಂಪ್ರೆಷನಿಸಂ ಹೀಗೆ ಹಲವು ಇಸಂಗಳ ಶೈಲಿಗಳನ್ನು ನಮ್ಮ

ಕಲಾಕೃತಿಗಳಲ್ಲಿ ಅಳವಡಿಸಿಕೊಂಡಿದ್ದು, ಅಮೃತಾ ಶೇರಾಗಿಲ್, ಸೆಝಾನ್, ವ್ಯಾನ್‌ಗಾಗ್‌ರವರ ಅಭಿವ್ಯಕ್ತಿಗಳನ್ನು ಇಲ್ಲಿ ಉದಾಹರಿಸಿದ್ದಾರೆ.

ಈ ಪ್ರಭಾವಗಳಿಂದ ನಮ್ಮ ಕಲಾವಿದರು ಅಭಿವ್ಯಕ್ತಿಗೆ ಉತ್ತಮ ಆಳ-ಹರವು ದೊರೆತವು; ವಿದೇಶಿ ಪ್ರಯಾಣ ಮತ್ತು ಚಲನಚಿತ್ರ, ವೃತ್ತಪತ್ರಿಕೆಗಳು ಮೊದಲಾದ ಸಮೂಹ ಮಾಧ್ಯಮಗಳು ಸಮಕಾಲೀನ ವಿಶ್ವದ ಕಲಾಸೃಷ್ಟಿಗಳ ಪರಿಚಯವನ್ನು ನೀಡಿದವು. ಕೆಲವು ಪಾಶ್ಚಾತ್ಯ ಪ್ರದರ್ಶನಗಳ ಕಂಡ ಕಲಾವಿದರು ಪ್ರಭಾವಿತಗೊಂಡು ಕ್ಯಾನ್‌ವಾಸಿನ ಅವಕಾಶದಲ್ಲಿ ಮೈವಳಿಕೆ ಮತ್ತು ಕೊಲಾಜ್ ಬಳಸುವುದು ಹೀಗೆ ವಿಶಿಷ್ಟ ಕಲಾಪರಂಪರೆ ಬೆಳೆದು ಬಂದು ಕಲಾವಿದರ ಗುಂಪು ಬೆಳೆದುದರ ಉನ್ನತಿಗೆ ಕಾರಣವೆನ್ನಲಾಗಿದೆ.

ಕೇವಲ ಚಿತ್ರ ಮಾಧ್ಯಮದಲ್ಲಿ ಪಾಶ್ಚಿಮಾತ್ಯದ ಪ್ರಭಾವವಾಗಿರದೆ, ಚಿತ್ರ-ಶಿಲ್ಪಕಲಾವಿದರ ಮೇಲೆ ಒಂದಲ್ಲ ಒಂದು ರೀತಿಯಲ್ಲಿ ಪಾಶ್ಚಾತ್ಯದತ್ತ ಮುಖ ಮಾಡಿರುವುದನ್ನು ಈ ಮೂಲಕ ಮನಗಾಣಬಹುದು. ಎಡ್ವರ್ಡ್, ಇಹನ್ ಟೊವಿಕ್ಸ ಕಂಪ್ಯೂಟರ್ ಶಿಲ್ಪವೊಂದನ್ನು ಸೃಷ್ಟಿಸಿದ್ದನು ಇಲ್ಲಿ ಕಾಣುತ್ತೇವೆ. ಅಲ್ಲದೆ ವಿವಿಧ ಮಾಧ್ಯಮಗಳ ಚಿತ್ರರಚನಾ ವಿಧಾನಗಳೇ ಅಲ್ಲದೇ ಛಾಯಾಚಿತ್ರದ ನೆರವು ಪಡೆಯುವುದು, ಕಂಪ್ಯೂಟರ್‌ಗಳ ನೆರವು ಪಡೆದು ಅಭಿವ್ಯಕ್ತಿಸಿಕೊಂಡು ಕಲಾವಿದರು ಇತ್ತೀಚಿನ ಪ್ರತಿಷ್ಠಾಪನಾ ಕಲೆಯು ಗಮನಾರ್ಹವಾದ ಅಂಶ.

ಶಿಲ್ಪಕಲಾ ಇತಿಹಾಸಕ್ಕೆ ಬಂದರೆ ಮೊದಲ ಮಣ್ಣು, ಮರ, ಶಿಲೆ ಅಥವಾ ಲೋಹಗಳಿಂದ ಮಾತ್ರ ಅಭಿವ್ಯಕ್ತಿಸಿದ್ದು ಕಂಡುಬಂದಿದ್ದು ಇತ್ತೀಚೆಗೆ ಎಸ್.ಜಿ.ವಾಸುದೇವ್, ಎನ್.ಮರಿಶಾಮಾಚಾರ್, ವಿ.ಎ.ದೇಶಪಾಂಡೆಯವರು ಜನಪದೀಯ ರೂಪಗಳನ್ನು ಬಿಟ್ಟು ಪಾಶ್ಚಾತ್ಯ ಅಕಾಡೆಮಿಕ್ ಕಲಾ ಶಿಕ್ಷಣ ಪಡೆದಿದ್ದು ಮತ್ತು ವಿದೇಶಿ ಪ್ರವಾಸ ಹಿನ್ನೆಲೆಯಿಂದ ಪ್ರಭಾವಿತಗೊಂಡು ಫೈಬರ್ ಗಾಜು, ಸಿಮೆಂಟ್, ಕಾಂಕ್ರೀಟ್, ಚರ್ಮ, ಕಾಗದ, ಬೂದಿ, ಇದ್ದಿಲು, ಮರಳು, ಉಪ್ಪು, ಪ್ಲಾಸ್ಟಿಕ್, ಸುತ್ತಲಿನ ಕಸ, ಚಿಂದಿಗಳನ್ನು ಉಪಯೋಗಿಸಿಕೊಂಡು ಕಲಾ ಸೃಷ್ಟಿಯ ಅಭಿವ್ಯಕ್ತಿಯನ್ನು ಕಾಣಬಹುದು. ಈಗಲೂ ನಮ್ಮಲ್ಲಿ ಅನೇಕ ಕಲಾವಿದರು ಇದೇ ಹಿನ್ನೆಲೆಯಲ್ಲಿ ಬೆಳೆದುಕೊಂಡು ಬಂದಿರುವಂತಹ ಕಲಾಸೃಷ್ಟಿಗಳನ್ನು ಇಲ್ಲಿ ಉದಾಹರಣೆಯಾಗಿ ನೀಡಿದ್ದಾರೆ.

## ೯.೨. ಸ್ಮರಣ ಸಂಚಿಕೆಯಲ್ಲಿನ ಬರಹಗಳು

ಶಾಲೆ-ಕಾಲೇಜುಗಳು, ಸಂಘ ಸಂಸ್ಥೆಗಳು ತಮ್ಮ ವಾರ್ಷಿಕ, ದಶವಾರ್ಷಿಕ , ೨೫ ವರ್ಷಗಳ ಬೆಳ್ಳಿಹಬ್ಬ, ೫೦ ವರ್ಷಗಳ ಸ್ವರ್ಣ ಮಹೋತ್ಸವ ಮತ್ತು ೧೦೦ ವರ್ಷಗಳ ವಜ್ರಮಹೋತ್ಸವಗಳನ್ನು ಆಚರಿಸುವುದು ವಾಡಿಕೆಯಾಗಿದೆ. ಈ ಸಂದರ್ಭದಲ್ಲಿ ಕಾರ್ಯಕ್ರಮದ ನೆನಪಿಗಾಗಿ ಸ್ಮರಣ ಸಂಚಿಕೆಗಳನ್ನು ಹೊರತರಲಾಗುತ್ತದೆ. ಇಂತಹ ಸ್ಮರಣ ಸಂಚಿಕೆಗಳಲ್ಲಿ ಆಯಾ ಶಾಲೆ, ಕಾಲೇಜು, ಸಂಘ, ಸಂಸ್ಥೆಗಳ ಕುರಿತಾಗಿ ಲೇಖನಗಳಿರುತ್ತವಲ್ಲದೇ ಬೇರೆ ಬೇರೆ ಕಲಾ

ಪ್ರಕಾರಗಳಿಗೆ ಸಂಬಂಧಿಸಿದ ಲೇಖನಗಳನ್ನೂ ವಿವಿಧ ವಿದ್ವಾಂಸರಿಂದ ಬರೆಯಿಸಿ ಪ್ರಕಟಿಸುತ್ತಾರೆ. ಅಂತಹ ಸಂಚಿಕೆಗಳಲ್ಲಿ ಬರೆದಿರುವ ಕೆ.ವಿ.ಸುಬ್ರಹ್ಮಣ್ಯಂರವರ ಲೇಖನಗಳ ಕುರಿತಾಗಿ ಕೆಲವನ್ನು ಪ್ರಸ್ತುತ ಈ ಅಧ್ಯಯನದಲ್ಲಿ ಈ ಕೆಳಗಿನಂತೆ ಸ್ಥೂಲವಾಗಿ ನೋಡಬಹುದು.

**೯.೨.೧. ಕಲಾ ಚೇತನ:** ಕನ್ನಡ ಕಲಾ ಸಾಹಿತಿಗಳ ಪ್ರಥಮ ಸಮ್ಮೇಳನದ ಸ್ಮರಣಸಂಚಿಕೆಯಾಗಿ ೧೯೯೫ರಲ್ಲಿ ಕಲಾಚೇತನ ಎಂಬ ಗ್ರಂಥವನ್ನು ಹೊರತರಲಾಗಿದ್ದು ಇದನ್ನು ಎನ್.ಮರಿಶಾಮಾಚಾರ್ ಅವರು ಸಂಪಾದನೆ ಮಾಡಿದ್ದು, ಕಲಾವಿಚಾರವಾಗಿರುವ ಲೇಖನಗಳಿವೆ. ಪ್ರಸ್ತುತ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ **'ಕನ್ನಡ ಕಲಾ ಸಾಹಿತ್ಯ: ಒಂದು ಪಕ್ಷಿನೋಟ'** ಎಂಬ ಲೇಖನವು ಇದರಲ್ಲಿ ಒಂದಾಗಿದ್ದು ಕನ್ನಡ ಸಾಹಿತ್ಯ ಎಂಬುದರ ವಿವರವನ್ನು ನೀಡುತ್ತಾ ಸಾಹಿತ್ಯದಲ್ಲಿ ಕಲೆಯ ಉಲ್ಲೇಖಗಳನ್ನು ಪರಿಚಯಿಸಲಾಗಿದೆ. ಅದರ(ಕಲಾ ಸಾಹಿತ್ಯ) ಪ್ರಾರಂಭ, ಸ್ವರೂಪ, ವೈಶಿಷ್ಟ್ಯತೆಯನ್ನು ಒಟ್ಟಾರೆ ಕಲಾಸಾಹಿತ್ಯ ಎಂದರೇನು ಎಂಬ ವಿವರಣೆಯನ್ನು ಇಲ್ಲಿ ಕಟ್ಟಿಕೊಡಲಾಗಿದೆ.

ಶ್ರೇಷ್ಠ ಕಲಾಸಾಹಿತ್ಯ ಹುಟ್ಟಿಕೊಳ್ಳಬೇಕಾದರೆ ಶ್ರೇಷ್ಠ ಕಲೆಯೂ ಸೃಷ್ಟಿಯಾಗಿ ಸ್ಫೂರ್ತಿ ನೀಡಿದಾಗ ಅದರ ಬೆಳವಣಿಗೆಗೆ ಸಾಧ್ಯವಾಗುವುದು. ಈ ನಿಟ್ಟಿನಲ್ಲಿ ಕನ್ನಡ ಸಾಹಿತ್ಯದ ಜೊತೆಗೆ ನಮ್ಮ ಕಲಾಸಾಹಿತ್ಯವು ಬೆಳೆಯ ಬೇಕಾಗಿರುವುದನ್ನು ಸ್ಪಷ್ಟಪಡಿಸುತ್ತ ಪ್ರಾರಂಭದಲ್ಲಿ ಕಲಾಸಾಹಿತ್ಯ ಬರವಣಿಗೆಗಳು, ಕಲಾಪ್ರದರ್ಶನಗಳ ಕುರಿತಾಗಿ ૩-೪ ಸಾಲುಗಳಲ್ಲಿ ಹೇಳಿ ಮುಗಿಸುವ ಪ್ರಕ್ರಿಯೆಯಾಗಿತ್ತೆಂದು ಅದರ ಆರಂಭದ ದಿನಗಳನ್ನು ಮೆಲುಕು ಹಾಕಿದ್ದಾರೆ. ಹಾಗೆಯೇ ಕೆಲವು ಕಲಾಸಾಹಿತ್ಯ ಕೃತಿಗಳನ್ನು ಪರಿಚಯಿಸುತ್ತ ಅವುಗಳಲ್ಲಿನ ವಸ್ತುವಿಷಯ, ಸೌಂದರ್ಯ ದೃಷ್ಟಿಕೋನ ಬರವಣಿಗೆಗಳಾಗಿದ್ದವೆನ್ನಲಾಗಿದೆ. ಪ್ರಸ್ತುತ ಸಂದರ್ಭದ ಕೃತಿಗಳಾದ ಕಾರಂತರ 'ಭಾರತೀಯ ಚಿತ್ರಕಲೆ: ನಮ್ಮಲ್ಲಿ ಅಪೂರ್ವ ಎನ್ನುವ ೨೪ ವರ್ಣಚಿತ್ರಗಳು, ೫೦೭ರಷ್ಟು ಬಿಳುಪು ಚಿತ್ರಗಳನ್ನು ಹೊಂದಿದ 'ಕಲಾಪ್ರಪಂಚ', 'ಕರ್ನಾಟಕದಲ್ಲಿ ಚಿತ್ರಕಲೆ', 'ಭಾರತೀಯ ಕಲೆಗಳು', 'ಕಲೆಯ ದರ್ಶನ', ಎಂ.ಎಚ್.ಕೃಷ್ಣರವರ 'ಕರ್ನಾಟಕದ ಕಲೆಗಳು', 'ಅಜಂತಾ ಎಲ್ಲೋರ', ಅ.ನ.ಕೃ.ರವರ 'ವಿವಾದಸ್ಪದ ಭಾರತೀಯ ಚಿತ್ರಕಲೆಯಲ್ಲಿ ರಾಜಾರವಿವರ್ಮನ ಸ್ಥಾನ', ಬಂಗಾಳ ಪುನರುಜ್ಜೀವನದ ಕಲೆಯ ಪ್ರಭಾವದ ಹಿನ್ನೆಲೆಯಲ್ಲಿ ಹೊರಬಂದ ಕೃತಿ. ಈ ಎಲ್ಲ ಕೃತಿಗಳನ್ನು ಕನ್ನಡದಲ್ಲಿ ಬರೆಯುವಾಗ ಲೇಖಕರು ಎದುರಿಸದ ಸವಾಲುಗಳು, ಚಿತ್ರಭಾಷೆಯನ್ನು ಸಾಹಿತ್ಯದಲ್ಲಿ ಅಳವಡಿಸಿಕೊಂಡಿರುವ ರೀತಿಯನ್ನು ಲೇಖಕರು ಇಲ್ಲಿ ಚರ್ಚಿಸಿದ್ದಾರೆ.

೧೮ನೇ ಶತಮಾನದಲ್ಲಿ ಕರ್ನಾಟಕದಲ್ಲಿ ಕನ್ನಡದ ಮುದ್ರಣ ಸೌಕರ್ಯ ಮತ್ತು ಪುಸ್ತಕ ಪ್ರಕಟಣೆಯ ಕಾರ್ಯ ಕಂಡುಬರುತ್ತದೆ. ಕಲಾಬರಣಿಗೆಯಲ್ಲಿನ ಕಲಾಸಾಹಿತಿಗಳು ತಮ್ಮ ಅಭಿವ್ಯಕ್ತಿಯನ್ನು ಮುಂದುವರಿಸುತ್ತಿದ್ದರ ಸಾಕ್ಷವಾಗಿ ಲೇಖಕರು ಆಗ ಬರೆದಿರುವ ಕಲೆಯಲ್ಲಿ ಲೇಖನಗಳು, ಸೌಂದರ್ಯ ಮತ್ತು ಕಲೆಯನ್ನು ಅನುಭವಿಸುವಂತೆ ಬರೆದಿರುವಂತವಾಗಿವೆ.

ನಂತರ ಕರ್ನಾಟಕ ಕಲಾ ಸಾಹಿತ್ಯಕ್ಕೆ ಬಂದರೆ 'ಭಾರತೀಯ ಚಿತ್ರಕಲೆ', ಅಶೋಕ ಅಕ್ಕಿಯವರ 'ಕಲಾಚರಿತ್ರೆ', ಅ.ಲ.ನರಸಿಂಹನ್‌ರವರ 'ವಿಕಾಸ ಕಂಡ ಕರ್ನಾಟಕದ ಚಿತ್ರಕಲೆ, ಮರಿಶಾಮಾಚಾರ್‌ರವರ 'ಭಾರತದಲ್ಲಿನ ಸಮಕಾಲೀನ ಕಲೆ, ವಿ.ಟಿ.ಕಾಳೆಯವರ 'ಚಿತ್ರಕಲಾ ದರ್ಪಣ ಇನ್ನು ಮೊದಲಾದ ಕಲಾಸಾಹಿತ್ಯ ರಚನೆಯ ಆರಂಭದ ಸಂದರ್ಭದಲ್ಲಿ ಬಂದಿರುವಂತ ಕೃತಿಗಳನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

೧೯೬೦ರ ದಶಕದಲ್ಲಿ ಕಲೆಯ ಬಗ್ಗೆ ಬರೆಯುವ ಚಿತ್ರಕಲಾವಿದರೇ ನಂತರ ವಿಮರ್ಶಕರಾಗಿ ಪ್ರಭಾವಿಸಿಕೊಂಡರು. ಹೊಸ ಸಂದರ್ಭಕ್ಕೆ ಹೊಸ ದೃಷ್ಟಿಕೋನ ಹೊಂದಿದ ವಿಶಾಲದೃಷ್ಟಿಯ ಅನೇಕ ಯುವ ಕಲಾ ಸಾಹಿತಿಗಳು ಕಲಾವಿಮರ್ಶೆಯ ಹೊಣೆಯನ್ನು ತಮ್ಮಲ್ಲಿ ಮೈಗೂಡಿಸಿಕೊಂಡು ವಿಭಿನ್ನ ಹಾದಿಯಲ್ಲಿ ನೋಡಿಕೊಂಡು ಬಂದಿರುವುದನ್ನು ಲೇಖಕರು ಇಲ್ಲಿ ಪ್ರಸ್ತಾಪ ಮಾಡಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಕಲಾಸಾಹಿತ್ಯ ಬರವಣಿಗೆಯಲ್ಲಿ ಪ್ರಮುಖರೆನಿಸಿಕೊಂಡಿರುವ ಎಚ್.ಎನ್.ಸುರೇಶ್, ಕೆ.ವಿಸುಬ್ರಹ್ಮಣ್ಯಂ, ಚಿ.ಸು.ಕೃಷ್ಣಶೆಟ್ಟಿ, ಎಚ್.ಎ.ಅನಿಲ್‌ಕುಮಾರ್, ರವಿಕುಮಾರ ಕಾಶಿ ಮುಂತಾದವರು ತಮ್ಮ ದೃಶ್ಯ ಭಾಷೆಯನ್ನು ಹಿಂದೆಂದಿಗಿಂತಲೂ ಭಿನ್ನತೆಯಿಂದ ಮುನ್ನಡೆಸಿಕೊಂಡು ಬಂದಿರುವುದು ಸಂತೋಷಕರ ವಿಷವೆನ್ನುತ್ತಾರೆ. ಅಲ್ಲದೆ ಪ್ರಸ್ತುತ ತುಂಬಾ ಜನರಿಗೆ ಬಹು ಬೇಗ ತಲುಪಬಲ್ಲ ಕನ್ನಡ ಪತ್ರಿಕೆಗಳು, ನಿಯತಕಾಲಿಕೆಗಳಲ್ಲಿಯೂ ವಿಮರ್ಶಕರು, ತಮ್ಮ ಅಭಿವ್ಯಕ್ತಿಯನ್ನು ಬರೆದು ಕನ್ನಡ ಕಲಾ ಸಾಹಿತ್ಯದ ಬೆಳವಣಿಗೆಗೆ ಸ್ವೇಚ್ಛೆ ಹೆಜ್ಜೆಯನ್ನಿಡುತ್ತಿದ್ದರ ಬಗ್ಗೆಯೂ ಲೇಖಕರು ಇಲ್ಲಿ ತಿಳಿಸಿದ್ದಾರೆ.

**೯.೨.೨. ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು:** ಕರ್ನಾಟಕ ರಾಜ್ಯ ಚಿತ್ರಕಲಾ ಶಿಕ್ಷಕರ ಸಂಘದವರು ಕಲಾಪ್ರೇಮಿ, ಕಲಾಬರಹಗಾರರಾದ ಬಿ.ಪಿ.ಬಾಯಿರಿಯವರ ಸ್ಮರಣೆಗಾಗಿ ೧೯೯೭ರಲ್ಲಿ 'ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು" ಎಂಬ ಸಂಚಿಕೆಯನ್ನು ಹೊರತಂದಿದ್ದು, ಎನ್.ಶ್ರೀಪತಿಯವರು ಸಂಪಾದ ಮಾಡಿರುವಾಗಿದೆ. ಇದರಲ್ಲಿ ಒಟ್ಟು ಹದಿನೈದು ಲೇಖನಗಳಿದ್ದು, ಎರಡು ರೀತಿಯಲ್ಲಿ ವಿಂಗಡಿಸಲಾಗಿದೆ. ಎರಡು ಲೇಖನಗಳು ಬಾಯಿರಯವರ ಪರಿಚಯಕ್ಕೆ ಸಂಬಂಧಿಸಿದ್ದರೆ ಮತ್ತೆ ಉಳಿದ ಹದಿಮೂರು ಲೇಖನಗಳು ಕಲಾಶಿಕ್ಷಣಕ್ಕೆ ಸಮಬಂಧಿಸಿವೆ. ಅವುಗಳಲ್ಲಿ **'ಕಲೆ-ಕಲಿಕೆ'** ಎಂಬ ಲೇಖನವು ಕೆ.ವಿ.ಸುಬ್ರಹ್ಮಣ್ಯಂರವರ ಬರಹವಾಗಿದ್ದು ಕಲಾಶಿಕ್ಷಣದ ಮಹತ್ವವನ್ನು ಕುರಿತು ಹೇಳಲಾಗಿದೆ. ಪ್ರಾರಂಭದಲ್ಲಿ ಕಲಾವಿದರು ತಮ್ಮ ಬದುಕಿನ ನಿರ್ದಿಷ್ಟ ಅವಧಿಯನ್ನು ಚಿತ್ರಕಲೆ ಕಲಿಯಲು ಮತ್ತು ಅಭ್ಯಾಸ ಮಾಡಲು ಕಳೆಯಲಾಗುತ್ತಿತ್ತೆಂದು ಈ ನಿಟ್ಟಿನಲ್ಲಿ ಕಲಾಇತಿಹಾಸಕಾರರು ಉಲ್ಲೇಖಿಸಿರುವ ಅಂಶಗಳನ್ನು ತಿಳಿಸುತ್ತ ಸಂಗೀತ ಸಾಹಿತ್ಯದ ಜೊತೆಗೆ ಹೇಳಿಕೊಡಲಾಗುತ್ತಿತ್ತು ಎನ್ನುತ್ತಾರೆ. ಚಿತ್ರ-ವಾಸ್ತುಶಿಲ್ಪ-ಶಿಲ್ಪಗಳನ್ನು Craft ಎಂದು ಆಗ ಪರಿಗಣಿಸಲಾಗಿತ್ತು. ಕಲೆ ಎಂದು ಪರಿಗಣಿಸಲೇ ಇಲ್ಲವಾಗಿತ್ತು. ರೆನೈಸಾನ್ಸ್ ಕಾಲಕ್ಕೆ ಕಲೆಯನ್ನು ಕಲಿಸುವ ಅಭ್ಯಾಸ ಒಂದು ರೀತಿಯಲ್ಲಿ ಮರು ಆರಂಭವಾಯಿತು. ವೇದಗಳಿಂದಲೇ ಕಲಿಸುವ ಶಿಕ್ಷಣ ಪದ್ಧತಿ ಇದ್ದಿರಬೇಕು.

ಈ ರೀತಿಯಲ್ಲಿ ಕಲಾಶಿಕ್ಷಣದ ಪ್ರಾರಂಭದ ಸ್ಥಿತಿ, ಅದರ ಬೆಳವಣಿಗೆ ಸ್ವರೂಪದ ಬಗ್ಗೆ ತಿಳಿಸುತ್ತಾರೆ. ಕಲಾವಿದರಿಗೆ ಕಲಾಶಿಕ್ಷಣ ಅವಶ್ಯಕತೆ ಇದೆಯೋ ಇಲ್ಲವೋ ಎಂಬುದಕ್ಕೆ ಕಲಿಯುವ ಉದ್ದೇಶದವರಿಗೆ ಪ್ರಕೃತಿಯಿಂದ ಪ್ರಪಂಚದ ಅನುಭವದಿಂದ, ಇತರರ ಮಹಾನ್ ಸೃಷ್ಟಿಗಳನ್ನು ನೋಡಿ ಅನುಭವಿಸುವುದನ್ನು ಅದರಿಂದ ಬದುಕನ್ನು ಗ್ರಹಿಸುವ ತೀವ್ರತೆಯನ್ನು ಯಾವ ಕಲಾ ಶಿಕ್ಷಕನೂ ಕಲಿಸಲಾರ. ಕ್ರಮಬದ್ಧ ಕಲೆಯ ವ್ಯಾಕರಣ ಕಲಾವಿದನ ಅಭಿವ್ಯಕ್ತಿಗೆ ಅಡ್ಡಿಯಾಗಬಲ್ಲವು ಎಂಬ ಕಲಾಕಲಿಕೆಯ ಕುರಿತಂತೆ ವಿವಿಧ ರೀತಿಯಾದ ಪದ್ಧತಿಗಳು ಮತ್ತು ಕಲಾವಿದನ ಅಭಿವ್ಯಕ್ತಿಗೆ ಕಲಾಕಲಿಕೆಯ ಪಾತ್ರ. ಈ ವಿವರಣೆಗಳನ್ನೇ ಅಲ್ಲದೆ ಪಶ್ಚಿಮದಲ್ಲಿ ೧೯ನೇ ಶತಮಾನದಲ್ಲಿನ **'ಅಟಿಲ್ಯೆ'** ಎಂಬ ಕಲಾಶಾಲೆಗಳು ಹುಟ್ಟಿಕೊಂಡಿದ್ದು ಅವುಗಳ ಕಾರ್ಯವೈಖರಿ, ಅಲ್ಲಿನ ಕಲಾವಿದನು ಬಳಸಿಕೊಂಡ ಮಾಧ್ಯಮಗಳ ವೈಖರಿಯು ಎಲ್ಲಕ್ಕಿಂತ ಭಿನ್ನವಾಗಿದ್ದು ಅದೇ ನಿಟ್ಟಿನಲ್ಲಿ ನಮ್ಮಲ್ಲಿಯೂ ಕಲಾವಿದರಿಗೆ ಕಲಾಶಿಕ್ಷಣ ನೀಡಬೇಕೆಂಬ ಮುಕ್ತ ಅಭಿಪ್ರಾಯಗಳನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

**೬.೨.೩. ಚೌಕಟ್ಟು:** ಸಂಚಯ ಸಂಸ್ಥೆಯ ಹತ್ತನೆಯ ವಾರ್ಷಿಕೋತ್ಸವದ ಅಂಗವಾಗಿ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧವನ್ನು 'ಚೌಕಟ್ಟು' ಎಂಬ ಕೃತಿಯಲ್ಲಿ ಪ್ರಕಟಿಸಲಾಗಿದೆ. ೧೯೯೭ರಲ್ಲಿ ಹೊರಬಂದ ಈ ಕೃತಿಯು ಎಚ್.ಎ.ಅನಿಲ್‌ಕುಮಾರ್‌ರು ಸಂಪಾದನೆ ಮಾಡಿದ್ದಾರೆ. ಒಟ್ಟು ಎಂಟು ಲೇಖನಗಳು. ಹಲವು ವಿದ್ವಾಂಸರುಗಳಿಂದ ಮೂಡಿಬಂದಿವೆ. ಕೆ.ವಿ.ಸುಬ್ರಹ್ಮಣ್ಯಂ ಅವರು ಬರೆದ **'ಕರ್ನಾಟಕದ ಸಮಕಾಲೀನ ಕಲೆಯ ಸಂವೇದನೆಯ ನೆಲೆಗಳು'** ಎಂಬ ಲೇಖನವಾಗಿದ್ದು, ಇದರಲ್ಲಿ ಲೇಖಕರು ವಿವಿಧ ಕಾಲಘಟ್ಟದಲ್ಲಿ ಕಲಾವಿದರ ಅನುಭವಕ್ಕೆ ಬಂದಿರುವ ವಿಭಿನ್ನ ಸಂವೇದನೆಗಳಿಗೆ ಒಳಗಾಗಿ ವೈವಿಧ್ಯಮವಾಗಿ ಸೃಷ್ಟಿಸುವಂತಹ ಕಲಾಕೃತಿಗಳನ್ನು ಇತ್ತೀಚೆಗೆ ಕಂಡುಬರುತ್ತಿವೆ. ಇಂತಹ ಸಂವೇದನಗಳಿಂದ ಕಲಾವಿದನು ಕಲಾಸೃಷ್ಟಿಯನ್ನು ಮಾಡುತ್ತಾ ಬಂದಿರುವುದನ್ನು ಲೇಖಕರು ಇಲ್ಲಿ ಸ್ಪಷ್ಟಪಡಿಸುತ್ತ ಕರ್ನಾಟಕದ ಕಲಾ ಇತಿಹಾಸದಲ್ಲಿ ಕಲಾವಿದರೂ ಇದರಿಂದ ಹೊರತಾಗಿಲ್ಲ ಎಂಬ ಅಂಶವನ್ನು ಎತ್ತಿಕೊಂಡು ಸ್ವಾತಂತ್ರ್ಯಪೂರ್ವದಲ್ಲಿ ಬ್ರಿಟೀಷ್ ಕಲಾಶಾಲೆಯಿಂದ ಕಲಿತು ಬಂದಿರುವ ಎಸ್.ಎಂ.ಪಂಡಿತ್, ದಂಡಾವತಿಮಠ, ಎಂ.ಟಿ.ವಿ.ಆಚಾರ್ಯ ಮೊದಲಾದವರ ಸೃಷ್ಟಿ ದೃಷ್ಟಿಗಳಲ್ಲಿ ಅಕಾಡೆಮಿಕ್ ಶೈಲಿಯ ಅಂಶಗಳು ಕಂಡುಬಂದರೆ, ಸ್ವಾತಂತ್ರ್ಯ ನಂತರದಲ್ಲಿ ರುಮಾಲೆ ಹನುಮಯ್ಯ, ಸುಬ್ರಹ್ಮಣ್ಯರಾಜು ಮೊದಲಾದವರ ಅಭಿವ್ಯಕ್ತಿಗಳಲ್ಲಿ ರೊಮ್ಯಾಂಟಿಕ್ ಸಂವೇದನೆಯ ಬಲೆಯಿಂದ ಹೊರಬಂದು ಹೊಸ ಜೀವಧ್ವನಿಯ ಸಂವೇದನೆಯಿಂದ ಸೃಷ್ಟಿಸಿದ್ದನ್ನು ನಾವುಇಲ್ಲಿ ಕಾಣಬಹುದು.

೧೯೭೦ರ ದಶಕದಲ್ಲಿ ಕಲೆಗೆ ಅಪೂರ್ವ ಬೆಡಗು ಕಾರಣ ಸಿ.ಚಂದ್ರಶೇಖರ್ ಸಿಂಧೂರ್, ಶೀಲಾಗೌಡ ಮೊದಲಾದವರ ಕೃತಿಗಳಲ್ಲಿ ರಾಷ್ಟ್ರೀಯ ನೆಲೆಯ ಅನುಭವಗಳಿಂದ ಅಭಿವ್ಯಕ್ತಿಸುವ ಅವಕಾಶ, ತಂತ್ರ, ಮಾಧ್ಯಮ ಬದಲಾವಣೆ, ಅತ್ಯಂತ ಪರಿಣಾಮಕಾರಿಯಾದ ಬದುಕಿನ

ವಿಕೃತಿಯ ದರ್ಶನದಂಥ ವಿಶಿಷ್ಟ ಸೃಷ್ಟಿಗೆ ಕಾರಣರಾಗಿರುವ ಹತ್ತು ಹಲವು ಕಲಾವಿದರ ಕಲಾ ಅಭಿವ್ಯಕ್ತಿಗಳನ್ನು ಮತ್ತು ಕಲಾವಿದರನ್ನು ಪರಿಚಯಿಸಿಕೊಳ್ಳುತ್ತಾ ಹೋಗಿದ್ದಾರೆ. ಇದೇ ನಿಟ್ಟಿನಲ್ಲಿ ಪ್ರಸ್ತುತ ಸಂದರ್ಭದಲ್ಲಿನ ರಾಜಕೀಯ ಆಗುಹೋಗುಗಳಿಗೂ ಪ್ರಭಾವ ಬೀರುತ್ತಿದ್ದು ಸಮಾಜದ ಸಂವೇದನೆಗೆ ಹತ್ತಿರವಾಗುತ್ತಿರುವ ಕಲಾವಿದರ ಅಭಿವ್ಯಕ್ತಿಗಳನ್ನು ಲೇಖಕರು ಇಲ್ಲಿ ಅವುಗಳ ವಿವರಣೆಯನ್ನು ನೀಡಿದ್ದಾರೆ.

**೯.೨.೪.ಸಂಯೋಜನೆ:** 'ಸಂಯೋಜನೆ' ಎಂಬ ಈ ಗ್ರಂಥವು ಬೆಂಗಳೂರಿನ ಸಂಯೋಜಿತ ಸಂಸ್ಥೆ ಹೊರತಂದಿರುವ ಸ್ಮರಣ ಸಂಚಿಕೆಯಾಗಿದೆ. ಇದನ್ನು ಅ.ಲ.ನರಸಿಂಹನ್ ಸಂಪಾದನೆ ಮಾಡಿದ್ದಾರೆ. ೧೯೮೭ರಲ್ಲಿ ಹೊರಬಂದ ಈ ಕೃತಿಯಲ್ಲಿ ಐದು ಲೇಖನಗಳಿವೆ. 'ಕಾಲಕೃತಿ ಮತ್ತು ಅದರ ಮಾರುಕಟ್ಟೆ' ಲೇಖನ ರವಿಕುಮಾರ್ ಕಾಶಿಯವರು ಬರೆದಿದ್ದಾರೆ. 'ಪರಿವರ್ತನೆಯ ಹಂತದಲ್ಲಿ ಚಿತ್ರಕಲೆ' ಎಂಬ ಲೇಖನದಲ್ಲಿ ಅ.ಲ.ನರಸಿಂಹನ್‌ರವರು ಬರೆದಿದ್ದಾರೆ. ಕಲಾವಿಮರ್ಶೆಯ ಹೊಣೆಗಳು ಎನ್.ಮರಿಶಾಮಾಚಾರರು, 'ಪ್ರದರ್ಶನ ಕಲೆಗಾಗಿ ಆದರ್ಶ ಕಟ್ಟಡ ಸಮುಚ್ಛಯ' ರಾಮದಾಸ್ ಅದ್ಯಂತಾಯರು ಹಾಗೆ ಪ್ರಸ್ತುತ ಈ ಅಧ್ಯಯನದ ಲೇಖಕರಾದ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ **'ಚಿತ್ರಾಲಂಕೃತ ಹಸ್ತಪ್ರತಿಗಳು'** ಎಂಬ ಲೇಖನದಲ್ಲಿ ಹಸ್ತಪ್ರತಿ ಚಿತ್ರಕಲೆಯ ಲಕ್ಷಣಗಳು, ರಚನಾ ವಿಧಾನ, ವಿನ್ಯಾಸ, ಬಣ್ಣಗಾರಿಕೆ, ಸಂಯೋಜನೆ, ವಸ್ತುವಿಷಯ ಇವುಗಳನ್ನು ಸ್ಥೂಲವಾಗಿ ವಿವೇಚಿಸಿದ್ದಾರೆ.

**೯.೩. ಇತರೆ ಬರಹಗಳು**

**೯.೩.೧.ರೇಖಾಚಿತ್ರ:** ಕರ್ನಾಟಕ ಲಲಿತಕಲಾ ಅಕಾಡೆಮಿಯು ೧೯೯೧ರಲ್ಲಿ ಹೊರತಂದ 'ರೇಖಾಚಿತ್ರ' ಕೃತಿಯನ್ನು ಬಿ.ವಿ.ಕೆ.ಶಾಸ್ತ್ರಿ ಸಂಪಾದನೆ ಮಾಡಿರುವ ಈ ಗ್ರಂಥದಲ್ಲಿ ರೇಖಾಚಿತ್ರದ ಬಗ್ಗೆ ವಿವಿಧ ವಿದ್ವಾಂಸರು ಬರೆದಿರುವ ಏಳು ಲೇಖನಗಳಿವೆ. ರೇಖೆ, ರೇಖಾಚಿತ್ರ, ರೇಖಾಚಿತ್ರಗಳ ಚಾರಿತ್ರಿಕ ಹಿನ್ನೆಲೆ, ಪ್ರಾಚೀನತೆ, ಪಾಶ್ಚಾತ್ಯ ಮತ್ತು ಮಧ್ಯಯುಗದ ಚಿತ್ರಗಳಲ್ಲಿ ರೇಖಾವಿನ್ಯಾಸ, ಪೌರಾತ್ಯ ರಾಷ್ಟ್ರಗಳಾದ ಚೀನಾ, ಜಪಾನ್ ದೇಶಗಳ ಚಿತ್ರಕಲೆಯಲ್ಲಿ ರೇಖೆ, ಭಾರತದಲ್ಲಿ ಅಚ್ಚು ಚಿತ್ರಕಲೆಯ ಇತಿಹಾಸ, ಭಾರತೀಯ ಸಮಕಾಲೀನ ಚಿತ್ರಗಳಲ್ಲಿ ರೇಖೆಯ ವಿನ್ಯಾಸಗಳ ಬಗ್ಗೆ ವಿವರಗಳನ್ನೊಳ ಗೊಂಡಿದ್ದು, ಅದರಲ್ಲಿ ಕೆ.ವಿಸುಬ್ರಹ್ಮಣ್ಯಂರವರು ಬರೆದಿರುವ **'ಪಾಶ್ಚಾತ್ಯ ಮತ್ತು ಪೌರ್ವಾತ್ಯ ನವ್ಯ ಮತ್ತು ಸಮಕಾಲೀನ ಕಲೆಯಲ್ಲಿ ರೇಖಾಚಿತ್ರಗಳು'** ಲೇಖನದಲ್ಲಿ ಮೊದಲಿಗೆ ರೇಖೆಯ ಅರ್ಥ ವಿಸ್ತಾರತೆ, ಕಲಾಕೃತಿಯಲ್ಲಿ ಕಲಾವಿದನು ದುಡಿಸಿಕೊಂಡಿರುವ ವಿಧಾನ, ಪ್ರಾಮುಖ್ಯತೆಯನ್ನು ಸ್ಪಷ್ಟಪಡಿಸುತ್ತ ರೇಖಾ ಚಿತ್ರ ರಚನೆಗೆ ಕಲಾವಿದರು ಈ ಮೊದಲು ಮತ್ತು ಪ್ರಸ್ತುತ ಸಂದರ್ಭದಲ್ಲಿ ಪಾಶ್ಚಾತ್ಯ ಮತ್ತು ಪೌರ್ವಾತ್ಯಗಳಲ್ಲಿ ಬಳಸಿಕೊಳ್ಳುತ್ತಿರುವ ಮಾಧ್ಯಮಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಹಾಗೆ ಕಲಾವಿದನು ರೇಖೆಗಳನ್ನು ದುಡಿಸಿಕೊಳ್ಳಬೇಕಾದರೆ ಅವನ ಸಮಕಾಲೀನ ಸಂದರ್ಭಗಳ ಪ್ರಭಾವಗಳು ಯಾವ ರೀತಿಯಲ್ಲಿ ಅವನನ್ನು ಪ್ರೇರೇಪಿಸುತ್ತವೆ ಈ ಹಿನ್ನೆಲೆಯಲ್ಲಿ ಪಾಶ್ಚಾತ್ಯ ಮತ್ತು

ಭಾರತೀಯ ಕಲಾವಿದರ ರೇಖೆಗಳಲ್ಲಿ ಕಂಡುಬರುವ ವೈವಿಧ್ಯತೆಯನ್ನು ಲೇಖಕರು ಇಲ್ಲಿ ಪರಿಚಯಿಸಿದ್ದಾರೆ.

೧೮೮೦ ಮತ್ತು ೧೯೧೦ರಲ್ಲಿ ಪಾಶ್ಚಾತ್ಯ ಕಲೆಯಲ್ಲಿ ವೈಜ್ಞಾನಿಕ ಬೆಳವಣಿಗೆಯಿಂದ ಕಲಾ ಸಂಪ್ರದಾಯ ಹಿಂದೆಬಿದ್ದು ವರ್ಣ ಸಂಶೋಧನಾ ಚಿಂತನೆಗಳ ಫಲವಾಗಿ ಮೂಡಿದ ರೇಖೆಗಳಾಗಿವೆ. ಕಲಾವಿದರು ಮೂಲ ಪ್ರವೃತ್ತಿಯಾಗಿ ಪ್ರಕೃತಿಯನ್ನು ಬೆಳಕು ಮತ್ತು ಬಣ್ಣಗಳಲ್ಲಿ ಪುನರ್ ಸೃಷ್ಟಿಸುವಂತದಾಗಿದ್ದು, ಕ್ಯಾಮೆರಾ ಆವಿಷ್ಕಾರದಿಂದ ಇಂಪ್ರೆಷನಿಸಂ ಶೈಲಿಯಲ್ಲಿ ಚಿತ್ರರಚನೆ ಗೈಯ ತೊಡಗಿದ್ದರು. ಬಣ್ಣದ ಬೀಸುಗಳಲ್ಲಿ ರೇಖೆಯನ್ನು ಮೂಡಿಸುವ ತಂತ್ರವನ್ನು ಮೈಗೂಡಿಸಿಕೊಂಡರು. ನಂತರ ಪಾಯಿಂಟಾಲಿಸಂ ಪಂಥದಲ್ಲಿ ಭಾವಚಿತ್ರವನ್ನು ಅಭಿವ್ಯಕ್ತಿಗೆ ಪೂರಕವಾಗಿ ದುಡಿಸಿಕೊಳ್ಳಲ್ಪಟ್ಟಿತು. ಈ ಹಿಂದೆ ಕಲಾಕೃತಿಗಳು ಜ್ಯಾಮಿತಿಯ ರೇಖೆಗಳನ್ನಾಧರಿಸಿದ್ದು ನಂತರ ಭಾವಾವೇಶವನ್ನು ತುಂಬಿಕೊಂಡತ್ತಿದ್ದವು. ೧೯೦೫ರಲ್ಲಿ ಸಿಂಬಾಲಿಸಂಗೆ ಸೇರಿದ ಕಲಾವಿದರು ಭಾವ ತೀವ್ರಾನುಭವದ ರೇಖೆಗಳನ್ನು ತ್ಯಜಿಸಿ ಅನ್ಯೆಜವರ್ಣಗಳ ದಿಟ್ಟ ಒರಟು ರೇಖೆಗಳ ಫಾವಿಸಂ ಅಡಿಯಲ್ಲಿ ಚಿತ್ರಿಸ ಲಾಗಿತ್ತು. ಪಿಕೊಸೋನ ಕಲಾಕೃತಿಗಳಲ್ಲಿ ರೇಖೆಗಳು ಮೊದಲು ಜ್ಯಾಮಿತಿಕವಾಗಿದ್ದು ಕ್ಯೂಬಿಸಂ ಘಟ್ಟದಲ್ಲಿ ತಟಸ್ಥ ಅಂಚಾಗಿ ಉಳಿದುಕೊಂಡವು. ೨೦ನೇ ಶತಮಾನದಲ್ಲಿ ಸ್ಟಿಲ್ ಲೈಫ್ ಜೊತೆಗೆ ಫಿಗರೇಟಿವ್ ರೇಖಾಚಿತ್ರಗಳು ಹೊಸ ಜೀವ ಪಡೆದವು. ಇದು ನವ್ಯಕ್ಕೆ ಸಂಪ್ರದಾಯಬದ್ಧವಾಗಿ ಮೂಡಿಬಂದಿದೆ.

ಎರಡನೆಯ ವಿಶ್ವ ಸಮರದ ನಂತರ ಅನೇಕ ದೇಶಗಳಲ್ಲಿ ರೇಖೆಗಳ ದಿಟ್ಟತೆಯಿಂದ ಕೂಡಿದ್ದು ವಿಕೃತಗೊಂಡ ಬದುಕಿಗೆ ಅದರ ಆಕರಗಳಿಗೆ ನೆರವಾಗಿದ್ದವು. ೧೯೪೫ರಲ್ಲಿಯೂ ನೆದರ್‌ಲ್ಯಾಂಡ್, ಪ್ಯಾರೀಸ್, ಮುಂತಾದೆಡೆಗಳಲ್ಲಿ ಭಾವಾವೇಶದಂತ ಚಿತ್ರಗಳಲ್ಲಿ ರೇಖೆಗಳು ಕಂಡುಬರುತ್ತದೆ. ಹಾಗೆ ಆಯಾ ಪಂಥಗಳು, ಸೃಷ್ಟಿಯಾದಂತೆ ಕಲಾಕೃತಿಗಳಲ್ಲಿ ವಸ್ತುವಿಷಯದ ಜೊತೆಗೆ ತಂತ್ರ ರೇಖೆಗಳ ವೈವಿಧ್ಯತೆಯ ನಿರ್ವಹಣೆಯು ಅನೇಕ ಬದಲಾವಣೆ ಕಂಡುಬಂದಿರುವುದನ್ನು ಈ ರೀತಿಯಲ್ಲಿ ಹಂತಹಂತವಾಗಿ ಕಟ್ಟಿಕೊಟ್ಟಿದ್ದಾರೆ. ನಂತರ ಸಮಕಾಲೀನ ಸಂದರ್ಭದಲ್ಲಿ ಅಲ್ಲಿನ ಯುವ ಕಲಾವಿದರು ಪಶ್ಚಿಮದ ಪ್ರಭಾವ ಹೊಂದಿ ರೇಖೆಗಳಲ್ಲಿ ಸಾಮ್ಯತೆಗಳು ಗಡುಸುತನಕ್ಕೆ ತಿರುಗಿದವು. ಈ ಹಿನ್ನೆಲೆಯಲ್ಲಿ ಪಶ್ಚಿಮದಲ್ಲಿ ಗಮನಾರ್ಹ ಸೃಷ್ಟಿಗಳಿಗೆ ರೇಖಾಚಿತ್ರ ಮಾಧ್ಯಮವನ್ನು ದುಡಿಸಿಕೊಂಡಿದ್ದರು. ನಂತರ ಭಾರತದಲ್ಲಿಯೂ ಇದೇ ರೀತಿಯಲ್ಲಿ ಕಾಲಕಾಲಕ್ಕೆ ಬದಲಾದ ಯುರೋಪ ಮತ್ತು ಬ್ರಿಟೀಷರ ಅಕಾಡೆಮಿಕ ಶಿಕ್ಷಣದಿಂದಾದ ಅನೇಕ ಪ್ರಭಾವಗಳು ನಮ್ಮ ಕಲಾವಿದರ ಮೇಲೆ ಬೀರಿ ಕಲೆಯಲ್ಲಿ ನವ್ಯತೆ ತಂದಿತು. ೧೯೪೦-೫೦ರ ನಂತರದ ಅವಧಿಯಲ್ಲಿ ಬಂಗಾಳ ಪುನರುಜ್ಜೀವನ ಕಲಾಶೈಲಿ ಹುಟ್ಟಿಕೊಂಡಿತು. ಆಗ ಪ್ರದರ್ಶಿತ ಕಲಾಕೃತಿಗಳಲ್ಲಿ ಸಮಕಾಲೀನ ಸಂವೇದನೆಯ ರೇಖೆಗಳನ್ನು ಕಾಣಬಹುದಾಗಿದ್ದು ಅವುಗಳನ್ನು ಇಲ್ಲಿ ಲೇಖಕರು ಪರಿಚಯಿಸಿದ್ದಾರೆ.

ಇದೇ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಾದ ಬದಲಾವಣೆಗಳನ್ನು ತಿಳಿಸಲಾಗಿದೆ. ಅನೇಕ ಕಲಾವಿದರು, ರೇಖೆಗಳನ್ನೇ ತಮ್ಮ ಮುಖ್ಯ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ಬದಲಾಯಿಸಿಕೊಂಡರು. ಮುಖ್ಯರಾದವರು ಕೆ.ಕೆ.ಹೆಬ್ಬಾರ್, ಕೆ.ಜಿ.ಸುಬ್ರಹ್ಮಣ್ಯಂ, ವಾಸುದೇವ್ ಕೆ.ಸಿ.ಫಣಿಕ್ಕರ್‌ರವರನ್ನು ಇಲ್ಲಿ ಗಮನಿಸಬಹುದು. ಕಳೆದ ಶತಮಾನದಲ್ಲಿ ಕಲೆಯಲ್ಲಿ ನವ್ಯತೆ ಎಂಬುದನ್ನು ಹುಟ್ಟು ಹಾಕಿತು. ಈ ಹಿನ್ನೆಲೆಯಲ್ಲಿಯೂ ಅನೇಕ ಕಲಾವಿದರು ತಮ್ಮದೇ ಆದ ಶೈಲಿಯಲ್ಲಿ ಸಮಕಾಲೀನತೆಗೆ ಹತ್ತಿರವಾದ ತೀವ್ರ ಸಂವೇದನಾಶೀಲತೆಯ ರೇಖೆಗಳನ್ನು ದುಡಿಸಕೊಂಡು ಸೃಷ್ಟಿಶೀಲತೆಯ ರೇಖೆಗಳಿಗೆ ಹೊಸ ಆಯಾಮವನ್ನು ನೀಡಿದರು. 'ರೇಖಾ ಪರಿಣತಿ ಕಲಾರಂಗಕ್ಕೆ ವಿಶಿಷ್ಟ ಶೋಭೆ ನೀಡಿದರು. ರೇಖೆಗಳು ರೇಖೆಗಳೇ ಆದರೂ ಅದನ್ನು ಉಳಿಸಿದ ರೀತಿಯಲ್ಲಿ ಉದ್ದೇಶದಲ್ಲಿ ವಸ್ತುವಿನಲ್ಲಿ ಈ ಎಲ್ಲರೂ ಭಿನ್ನರಾಗಿರುವುದು ಉಲ್ಲೇಖಾರ್ಹ ಅಂಶ' ಎಂಬ ಲೇಖಕರ ನುಡಿಗಳನ್ನು ನೇರವಾಗಿ ಇಲ್ಲಿ ಉಲ್ಲೇಖಿಸಬಹುದು.

**೯.೩.೨. ಆರ್.ಎಸ್.ಎನ್: ವ್ಯಕ್ತಿ ಮತ್ತು ಕಲೆ:** ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ಪ್ರಕಟವಾದ 'ಆರ್.ಎಸ್.ಎನ್: ವ್ಯಕ್ತಿ ಮತ್ತು ಕಲೆ' ಎಂಬ ಕೃತಿಯು ೨೦೦೮ರಲ್ಲಿ ಪ್ರಕಟಗೊಂಡಿದೆ. ಎಂ.ಎಚ್.ಕೃಷ್ಣಯ್ಯನವರ ಸಂಪಾದಕತ್ವದಲ್ಲಿ ಮೂಡಿಬಂದಿದೆ.

ಪ್ರಸ್ತುತ ಕೃತಿಯಲ್ಲಿ ಆರ್.ಎಸ್.ನಾಯ್ಡುರವರ ಜೀವನ ಮತ್ತು ಕಲಾಕೃತಿಗಳನ್ನು ಕುರಿತಾಗಿ ಬಂದಿರುವ ಪತ್ರಿಕೆಗಳಲ್ಲಿನ ಲೇಖನ ಬರಹಗಳನ್ನು ಮತ್ತು ಬೇರೆಯವರು ಸಂಗ್ರಹಿಸಿಟ್ಟಿರುವ ಲೇಖನಗಳನ್ನು ಪಡೆದು ಅಂತವುಗಳಲ್ಲಿ ಪ್ರಮುಖವಾದವನ್ನು ಮಾತ್ರ ಇಲ್ಲಿ ಒಂದೆಡೆ ಸಂಗ್ರಹಿಸಿ ಆರ್.ಎಸ್.ನಾಯ್ಡುರವರ ನೆನಪು ಸದಾ ಹಸಿರಾಗಿರಲಿ ಎಂಬ ಉದ್ದೇಶದಡಿಯಲ್ಲಿ ಬಂದಿರುವಂತದ್ದು. ಇದರಲ್ಲಿ ಒಟು ೩೦ ಲೇಖನಗಳಿದ್ದು, ನಾಲ್ಕು ಭಾಗಗಳಾಗಿ ವಿಂಗಡಿಸಿಕೊಂಡು ಚರ್ಚಿಸಲಾಗಿದೆ. ಮೊದಲ ೨೩ ಲೇಖನಗಳು ವ್ಯಕ್ತಿ ಕಲೆ, ಅವಧೂತ ಕಲಾವಿದ. ಆರ್.ಎಸ್.ನಾಯ್ಡು, ಕರ್ನಾಟಕ ಕಂಡ ವಿಚಿತ್ರ ಚಿತ್ರಗಾರ, ಆರೆಸ್ಸೆನ್ ಶಿಲ್ಪಿ, ದೈತ್ಯಶಕ್ತಿ, ಅದಮ್ಯ ಚೇತನದ ಆರ್.ಎಸ್.ಎನ್., ಆರ್.ಎಸ್.ನಾಯ್ಡು, ಬ್ಯಾಲೆಗೆ ಭ್ರಮಿಸಿದ ಆರ್.ಎಸ್.ಎನ್.(ಅನುಬಂಧ ೧,೨), ಕಲಾವಿದ ಆರ್.ಎಸ್.ಎನ್. ನಾನು ಕಂಡಂತೆ, ನಾವೇ ದೇವರಾಗುತ್ತೇವೆ. ಆರ್.ಎಸ್.ಎನ್.ನೆನಪು, ಕುಂಚ ಬ್ರಹ್ಮ ಆರ್.ಎಸ್.ಎನ್. ಕಲಾಯೋಗಿ ಆರ್.ಎಸ್.ನಾಯ್ಡು, ಆರ್.ಸೀತಾಪತಿನಾಯ್ಡು ವಿಶಾಲ ಮನಸ್ಸು ವಿಕ್ಷಿಪ್ತ ಕಲಾವಿದ, ಕಲೋಪಾಸಕ ಆರ್.ಎಸ್.ನಾಯ್ಡು, ಆರ್.ಎಸ್.ನಾಯ್ಡು, ಅನನ್ಯಶೈಲಿಯ ಕಲಾವಿದ. ಕುವೆಂಪು ಜನ್ಮದಿನದಂದು ಆರ್.ಎಸ್.ಎನ್.ನೆನಪು, R.S.N. The Brilliant Caricaturist. Between you and me ಎಂಬ ಶೀರ್ಷಿಕೆಯ ಲೇಖನಗಳಾಗಿವೆ. ಆರ್.ಎಸ್.ಎನ್. ಎಂಬ ಎರಡನೆಯ ಭಾಗದಲ್ಲಿ ಸೆರೆಮನೆಯ ನೆನಪು Pre-eminence of Formಎಂಬ ಲೇಖನಗಳಿವೆ. ಮೂರನೆಯ ಭಾಗದಲ್ಲಿ ಪ್ರಶಸ್ತಿ ವಾಚಿಕೆಗಳು ಕುರಿತಾಗಿದ್ದ ಆರ್.ಎಸ್. ನಾಯ್ಡು, ಕಲೆಗಾರ ಆರ್.ಸೀತಾಪತಿನಾಯ್ಡು, ಕ್ರಾಂತಿಕಾರಿಯ ಒಡಲಾಳ ಲೇಖನಗಳನ್ನು ಒಳಗೊಂಡಿದೆ.

ನಾಲ್ಕನೆಯ ಭಾಗದಲ್ಲಿ ಕೆ.ಸಿಚೌಡಪ್ಪ ರೆಡ್ಡಿಯವರಿಗೆ ಮತ್ತು ಕ.ರಾ.ಕೃ.ಅವರಿಗೆ ಎಂಬ ಎರಡು ಪತ್ರಗಳನ್ನು ಒಳಗೊಂಡಿದೆ. ಕೊನೆಯಲ್ಲಿ ಆರ್.ಎಸ್.ನಾಯ್ಡುರವರು ರಚಿಸಿದ ರೇಖಾಚಿತ್ರಗಳು, ಶಿಲ್ಪಗಳ ವರ್ಣ ಛಾಯಾಚಿತ್ರಗಳು ಕಾಣಬಹುದಾಗಿದೆ.

ಅಧ್ಯಯನದ ಹಿನ್ನೆಲೆಯಲ್ಲಿ ಪ್ರಸ್ತುತ ಕೃತಿಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ 'ಆರ್.ಎಸ್.ನಾಯ್ಡು' ಮತ್ತು 'ಕ್ರಾಂತಿಕಾರಿಯ ಒಡಲಾಳ' ಎಂಬ ಎರಡು ಲೇಖನಗಳಾಗಿವೆ. ಅವುಗಳನ್ನು ಕುರಿತಾಗಿ ಇಲ್ಲಿ ಪರಿಚಯಿಸಲಾಗಿದೆ.

**'ಆರ್.ಎಸ್.ನಾಯ್ಡು'** ಲೇಖನದಲ್ಲಿ ಕಲಾವಿದ, ಸ್ವಾತಂತ್ರ್ಯ ಹೋರಾಟಗಾರರಾದ ಆರ್.ಎಸ್. ನಾಯ್ಡುರವರ ವ್ಯಕ್ತಿತ್ವ, ಕ್ರಾಂತೀಯ ಮನೋಭಾವದ ದಿನಗಳು ಮತ್ತು ಇದರಿಂದ ಹೊರಗೆ ಬಂದು ಕಲೆಗೆ ಅಂಟಿಕೊಂಡ ಹಿನ್ನೆಲೆ, ಮುಂದೆ ಕಲಾಕೃತಿಗಳ ರಚನೆಯಲ್ಲಿ ತೊಡಗಿಸಿರುವುದನ್ನು ಇವರ ಒಟ್ಟು ಕಲಾಸಾಧನೆ ಕುರಿತಾಗಿ ಲೇಖಕರು ಸಂಕ್ಷಿಪ್ತ ವಿವರಣೆಯ ಮೂಲಕ ಇಲ್ಲಿ ಪರಿಚಯ ಮಾಡಿಕೊಡಲಾಗಿದೆ.

೧೯೦೬ರಲ್ಲಿ ಬೆಂಗಳೂರಿನಲ್ಲಿ ಜನಿಸಿದ ಆರ್.ಎಸ್.ನಾಯ್ಡುರವರು, ವೇಲೂರು, ತಿರುಚನಾಪಳ್ಳಿ, ಧಾರವಾಡ, ಪೂನಾಗಳಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿ ೧೯೩೧ರಲ್ಲಿ ಸ್ವಾತಂತ್ರ್ಯ ಹೋರಾಟ ಸಮರದಲ್ಲಿ ಯೋಧನಾಗಿ ಪ್ರವೇಶಿಸಿ ಶಿಕ್ಷೆ ಅನುಭವಿಸಿ ಏಕಾಂತ ಜೀವನ, ಪ್ರೀತಿಯ ಜೊತೆ ಏಕ ಪ್ರಕಾರ ಕೃತಿ ರಚನೆಗೈಯ ತೊಡಗಿದರು.

ಲೆನಿನ್ ಜೇಡಿಮಣ್ಣಿನ ಮೂರ್ತಿಯು ಅವರ ಮೊದಲ ಕಲಾಸೃಷ್ಟಿಯಾಗಿದೆ. ಹಾಗೆ ಅವರಲ್ಲಿದ್ದ ಕಲಾಪ್ರತಿಭೆ ನೂರಾರು ಶಿಲ್ಪ, ಸಾವಿರಾರು ರೇಖಾಚಿತ್ರ ಹಾಗೂ ವರ್ಣಚಿತ್ರಗಳಲ್ಲಿ ಮೂರ್ತಿಭವಿಸಿವೆ. ಅವರು ರಚಿಸಿದ ಪ್ಲಾಸ್ಟರ್ ಮಾಧ್ಯಮದ ಉಬ್ಬಚ್ಚಿನ ಭಾವಚಿತ್ರಗಳಾಗಲೀ, ಶಿಲ್ಪಗಳಾಗಲೀ, ಜೀವಂತವಾಗಿರುವಂತೆ ಭಾಸವಾಗುತ್ತವೆ. ಹಾಗೆ ಅವರ ಚಿತ್ರಗಳನ್ನು ಗಮನಿಸಿದಾಗ ತೀಕ್ಷ್ಣತೆ, ಬದುಕಿನ ವಿಡಂಬನೆ, ವೇದನೆಗಳಂತಿವೆ. ಇನ್ನು ಕೆಲವು ಕವಿಯೊಬ್ಬನ ತಲ್ಲಣಗೊಂಡ ಕಾವ್ಯಮಯ ಭಾವವನ್ನು ಅಭಿವ್ಯಕ್ತಿಸುವಂತಿವೆ. ಅದ್ಭುತ ನಿರೂಪಣೆ, ಗತಿ ವಿನ್ಯಾಸಗಳನ್ನು ಸೂಚಿಸುವ, ಮಿತವ್ಯಯದ ನೂತನ ಶೈಲಿಯ ಉತ್ತಮ ಸಾಮರಸ್ಯ ಕಂಡುಬರುತ್ತವೆ. ಅವರ ವ್ಯಂಗ್ಯ ಚಿತ್ರಗಳ ವಿಡಬಂನೆ ಅಪರೂಪವಾಗಿದ್ದು, ದೇಶ ವಿದೇಶಿ ಪತ್ರಿಕೆಗಳಲ್ಲಿಯೂ ರಾರಾಜಿಸಲ್ಪಟ್ಟಿವೆ. ಇವರ ಕಲಾಪ್ರೇಮಕ್ಕೆ, ಕಲಾಸಾಧನೆಗೆ ರಾಷ್ಟ್ರ ಪ್ರಶಸ್ತಿಗಳೂ ಲಭಿಸಿವೆ. "ಕಲಾವಲಯದಲ್ಲಿ ಆರ್.ಎಸ್.ಎನ್.ಎಂದೇ ಪ್ರಖ್ಯಾತರಾದ ಅಸಾಧಾರಣ, ಪ್ರತಿಭಾಶಾಲೆ ಕಲಾಸಾಧಕ ಎಂದು ಕರೆಸಿಕೊಂಡಿರುವ ರಂಗಸ್ವಾಮಿ ಸೀತಾಪತಿನಾಯ್ಡು ಚಿತ್ರ ಶಿಲ್ಪಕಲೆಯ ಸಂಗಮವೆಂದೇ ಹೇಳಬಹುದೆಂಬ ಲೇಖಕರ ಮಾತುಗಳಲ್ಲಿ ಉತ್ಪ್ರೇಕ್ಷೆ ಎನಿಸಿದರು ನಿಜಕ್ಕೂ ವರ್ಣನೀಯ ವ್ಯಕ್ತಿತ್ವ ಇವರದಾಗಿತ್ತು. ಈ ಎಲ್ಲಾ ಅಂಶಗಳು ಇಲ್ಲಿ ಗಮನಾರ್ಹ ರೀತಿಯಲ್ಲಿ ಹೇಳಲಾಗಿದೆ.

**"ಕ್ರಾಂತಿಕಾರಿಯ ಒಡಲಾಳ: ಆರ್.ಎಸ್.ನಾಯ್ಡು"** ಎಂಬ ಲೇಖನದಲ್ಲಿಯೂ ಕಲಾವಿದನ ಹುಟ್ಟು, ವಿದ್ಯಾಭ್ಯಾಸದೊಂದಿಗೆ ಬೆಳೆದ ಕ್ರಾಂತಿಯ ಮನೋಭಾವನೆಗಳನ್ನು ಕುರಿತಾಗಿ ಪರಿಚಯಿಸುತ್ತಾ ಅವರಲ್ಲಿ ಹುದುಗಿದ್ದ ಕಲಾ ಪ್ರತಿಭೆಯು ಲೆನಿನ್‌ನ ಮೂರ್ತಿಶಿಲ್ಪ ರಚನೆಯ ಮೂಲಕ ಹೊರಗೆಡಿರುವುದರ ಹಿನ್ನೆಲೆಯನ್ನು ತಿಳಿಸಿರುವುದುಇಲ್ಲಿ ಮಹತ್ವಪೂರ್ಣವಾದ ವಿಷಯವಾಗಿದೆ. ಅಲ್ಲದೆ ಅವರ ಕೃತಿಗಳಲ್ಲಿನ ವಸ್ತು ವಿಷಯ ಹೀಗೆ ಹಲವಾರು ವಿಷಯಗಳನ್ನು ಸ್ಥೂಲವಾಗಿ ಇಲ್ಲಿ ವ್ಯಕ್ತಗೊಂಡಿವೆ.

**೯.೩.೩. ದೃಶ್ಯಕಲಾ ವಿಮರ್ಶೆ:** ಪ್ರಸ್ತುತ 'ದೃಶ್ಯಕಲಾ ವಿಮರ್ಶೆ' ಎಂಬ ಕೃತಿಯು ಕಲೆ ಮತ್ತು ಕಲಾವಿಮರ್ಶೆಗಳಿಗೆ ಸಂಬಂಧಿಸಿದ ಒಟ್ಟು ಇಪ್ಪತ್ತೆರಡು ಲೇಖನಗಳಿವೆ. ರಾಜ್ಯ ಲಲಿತಕಲಾ ಅಕಾಡೆಮಿಯಿಂದ ೨೦೦೦ರಲ್ಲಿ ಈ ಕೃತಿಯನ್ನು ಹೊರತಂದಿದ್ದು, ಪ್ರೊ.ವಿ.ಜಿ.ಅಂದಾನಿಯವರು ಸಂಪಾದನೆ ಮಾಡಿದ್ದಾರೆ. ಇದರಲ್ಲಿರುವ ಲೇಖನಗಳನ್ನು ನಾಡಿನ ಅನೇಕ ವಿದ್ವಾಂಸರು ಬರೆದಿದ್ದಾರೆ. ಅವರಲ್ಲಿ ಕೆ.ವಿ.ಸುಬ್ರಹ್ಮಣ್ಯಂ ರವರು ಒಬ್ಬರಾಗಿದ್ದು, ಅವರು ಬರೆದ 'ತನ್ನನ್ನು ತಾನೇ ಅನ್ವೇಷಿಸಿಕೊಳ್ಳುವ ಪರಿ', ಮತ್ತು 'ಗುಜರಿಯ ನಡುವೆ ಮಹಾ ಬಜಾರು' ಎಂಬ ಎರಡು ಲೇಖನಗಳನ್ನು ಒಳಗೊಂಡಿದ್ದು ಈ ಕುರಿತಾಗಿ ಇಲ್ಲಿ ವಿವೇಚಿಸಲಾಗಿದೆ.

**'ತನ್ನನ್ನು ತಾನೇ ಅನ್ವೇಷಿಸಿಕೊಳ್ಳುವ ಪರಿ'** ಎಂಬ ಲೇಖನದಲ್ಲಿ ರಮೇಶ ಚಂದ್ರರವರ ಆಧುನಿಕೋತ್ತರ ಹಾಗೂ ವಸಾಹತೋತ್ತರ ದೃಷ್ಟಿಯ ಅಭಿವ್ಯಕ್ತಿಗೆ ಪೂರಕವಾಗಿ ಮಿಶ್ರಮಾಧ್ಯಮವನ್ನು ದುಡಿಸಿಕೊಂಡಿರುವ ಅಭಿವ್ಯಕ್ತಿಯನ್ನು ಲೇಖಕರು ಪ್ರಸ್ತಾಪಿಸಿದ್ದಾರೆ.

ಕರ್ನಾಟಕ ಚಿತ್ರಕಲಾ ಪರಿಷತ್ತಿನ ಗ್ಯಾಲರಿಯಲ್ಲಿ ಪ್ರದರ್ಶಿತವಾದ ರಮೇಶ್‌ಚಂದ್ರರ ಅಭಿವ್ಯಕ್ತಿಗಳಲ್ಲಿ ಚಿತ್ರ ಮತ್ತು ವಾಸ್ತುಶಿಲ್ಪಗಳಲ್ಲಿ ಕಸಿಮಾಡಿಕೊಂಡ 'ಸ್ವಯಂ'ಗೆ ಪ್ರಾಮುಖ್ಯತೆ ನೀಡಿದವುಗಳಾಗಿದ್ದವು. ಚಿತ್ರಗಳಲ್ಲಿನ ಮಾಧ್ಯಮವು ನೆಲ, ಗೋಡೆ, ತೆರೆದ ಅವಕಾಶವನ್ನು ಉತ್ತಮವಾಗಿ ಉಪಯೋಗಿಸಿಕೊಂಡು ಪ್ರದರ್ಶಿಸಿರುವುದು ಪರಿಶೀಲನಾರ್ಹ ವಿಚಾರ. ಹಾಗೆ ಜೆರಾಕ್ಸ್, ಛಾಯಾಚಿತ್ರ, ಚಿತ್ರ–ಬರಹ ಇತ್ಯಾದಿಗಳನ್ನು ತಮ್ಮದೇ ಆದ ರೀತಿಯಲ್ಲಿ ದುಡಿಸಿಕೊಳ್ಳಲಾಗಿತ್ತು. ಹಾಗೆ ತಮ್ಮ ಭಾವಚಿತ್ರವನ್ನು ಪೂರ್ಣ ಚಿತ್ರಗಳನ್ನು ವಿಕೃತಗೊಳಿಸಿ, ಬಣ್ಣಗಳನ್ನು ತೀಡಿ ಅಸ್ಪಷ್ಟವಾಗಿ ಮೂಡಿ ಬಂದಿರುವ ಅಂಶಗಳು ಗಮನಾರ್ಹವಾಗಿವೆ. ಒಟ್ಟಾರೆ ಇದೊಂದು ಅಪರೂಪದ ಅಭಿವ್ಯಕ್ತಿಯಾಗಿದ್ದು, ಶೀರ್ಷಿಕೆ ಸೂಚಿಸುವಂತೆ ತಮ್ಮನ್ನು ತಾವು ನೋಡಿಕೊಳ್ಳುವ ಪರಿವಿನ್ಯಾಸಗಳು ಈ ಅಭಿವ್ಯಕ್ತಿಯಾಗಿದೆ ಎಂದು ಲೇಖಕರು ಅಭಿಪ್ರಾಯಪಡಿಸಿದ್ದಾರೆ.

**'ಗುಜರಿಯ ನಡುವೆ ಮಹಾಬಜಾರು'** ಎಂಬ ಲೇಖನದಲ್ಲಿ ವಿವಾನ್ ಸುಂದರ್‌ರವರು ಅಭಿವ್ಯಕ್ತಿಸಿದ ಪ್ರತಿಷ್ಠಾಪನಾ ಕಲೆಯನ್ನು ಕುರಿತಾಗಿಲೇಖಕರುಇಲ್ಲಿ ಚರ್ಚಿಸಿದ್ದಾರೆ.

ವೈಯಕ್ತಿಕತೆಯನ್ನು ಸಾರ್ವತ್ರೀಕರಿಸುವ ಸುತ್ತಲಿನ ವಸ್ತುಗಳಿಂದಲೇ ಅಭಿವ್ಯಕ್ತಿಸಿರುವ ಇವರು ಕಮಾಡಿಟಿಯಾಗಿರುವ ಕಲೆಯನ್ನು, ಮಾರುಕಟ್ಟೆಗಳಲ್ಲಿನ ಕಸದಂಥ ಗುಜರಿಯ ವಸ್ತುಗಳನ್ನು ಕ್ಲಿಕ್ಕಿಸಿ ಮಾಡರ್ನ್ ತತ್ವಕ್ಕೆ ಹತ್ತಿರವಾಗಿಸಿಕೊಂಡು ಲೋಹದ ಚೌಕಟ್ಟಿನ ವೃತ್ತಾಕಾರದಲ್ಲಿ ನೆಲದ ಅವಕಾಶದಲ್ಲಿ ನೇತು ಹಾಕಲಾಗಿದ್ದು ಎಂಬ ಸೂಚನಾ ಫಲಕದಂತೆ ಅನುಭವ ಮೂಡಿಸುವಂತದ್ದಾಗಿದೆ. ಒಟ್ಟಾರೆ ನಮ್ಮ ಸಂಸ್ಕೃತಿಗೆ ಕಾರಣವಾದ ಸೂಕ್ಷ್ಮ ಅಂಶಗಳನ್ನು ಬಿಂಬಿಸುವಂತ ವಿಶಿಷ್ಟ ಅಭಿವ್ಯಕ್ತಿಯಾಗಿದ್ದು ಮತ್ತೆ ಮತ್ತೆ ಕಾಡುವಂತಿದೆ ಎಂಬುದು ಲೇಖಕರ ಅನುಭವಿಕೆಯನ್ನು ತೋರ್ಪಡಿಸುವುದಾಗಿದೆ.

**೯.೩.೪. ಆರ್.ಎಂ.ಹಡಪದ್:** ೧೯೯೬ರಲ್ಲಿ ಸಂಯೋಜಿತ ಸಂಸ್ಥೆಯವರು ಹೊರತರಲಾದ 'ಆರ್.ಎಂ.ಹಡಪದ್' ಎಂಬ ಕೃತಿಯನ್ನು ಎನ್.ಮರಿಶಾಮಾಚಾರ್‌ರವರು ಸಂಪಾದನೆ ಮಾಡಿದ್ದಾರೆ.

ಪ್ರಸ್ತುತ ಕೃತಿಯಲ್ಲಿ ಹಡಪದ ಅವರ ಬಗೆಗಿನ ವಿವಿಧ ಆಯಾಮವನ್ನು ಬಿಂಬಿಸುವ ಹತ್ತು ಲೇಖನಗಳು ಒಳಗೊಂಡಿದೆ. ಖ್ಯಾತನಾಮರು ಇಲ್ಲಿನ ಲೇಖನಗಳನ್ನು ಬರೆದಿದ್ದು ಮೌಲಿಕತೆಯಿಂದ ಕೂಡಿವೆ. ಎಲೆಮರೆಯ ಕಲಾಮೊಗ್ಗು, ನಾವು ನಾಲ್ವರು, ಹಡಪದ ಅವರ ಕಲಾಸೃಷ್ಟಿ, ಕಲಾವಿದ ಹಡಪದ, ಅರವತ್ತರ ಹಡಪದ, ಸಮಕಾಲೀನ ಕಲೆ ಮತ್ತು ಕೆನ್‌ಕಲಾಶಾಲೆ, ಆರ್.ಎಂ.ಹಡಪದ ಶಿಲ್ಪ ಮತ್ತು ಪ್ರಿಂಟ್‌ಗಳು, ನಿಜಗುರು, ಪ್ರಯೋಗಶೀಲ ಕಲಾವಿದ, ಹಡಪದ ಮತ್ತು ಸಾಮಾಜಿಕ ಚಿಂತನ ಎಂಬ ಲೇಖನಗಳನ್ನು ಕ್ರಮವಾಗಿ ಶೀಲಕಾಂತ ಪತ್ತಾರ, ಬಿ.ವಿ.ಕೆ. ಶಾಸ್ತ್ರಿ, ಕೆ.ಎನ್.ಶ್ರೀನಿವಾಸಮೂರ್ತಿ, ಕೀ.ರಂ.ನಾಗರಾಜ, ಆರ್.ವಿ.ಶಾಂತರಾಜ, ಡಾ.ಅ.ಲ.ನರಸಿಂಹನ್, ಕೆ.ವಿ.ಸುಬ್ರಹ್ಮಣ್ಯಂ, ಪ.ಸ.ಕುಮಾರ್, ಎನ್.ಮರಿಶಾಮಾಚಾರ್ ಮತ್ತು ಎಂ.ಎಚ್.ಕೃಷ್ಣಯ್ಯ ಅವರುಗಳು ಬರೆದಿದ್ದಾರೆ.

ಪ್ರಸ್ತುತ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವ **'ಆರ್.ಎಂ.ಹಡಪದರ ಶಿಲ್ಪ ಮತ್ತು ಪ್ರಿಂಟ್‌ಗಳು'** ಎಂಬ ಲೇಖನದಲ್ಲಿ ಹಡಪದರು ಒಬ್ಬ ಉತ್ತಮ ಶಿಕ್ಷಕರಾಗಿಯೂ ಅಲ್ಲದೆ ತಮ್ಮ ಸಮಕಾಲೀನರಲ್ಲಿ ಬದಲಾಗುತ್ತಿರುವ ವಿವಿಧ ಮಾಧ್ಯಮಗಳಿಗೆ ಹೊಂದಿಕೊಂಡು ಅವುಗಳನ್ನು ತಮ್ಮ ಅನುಭವ ಅಭಿವ್ಯಕ್ತಿಗಳಲ್ಲಿ ದುಡಿಸಿಕೊಂಡಿರುವ ಅಂಶಗಳನ್ನು ಲೇಖಕರು ಇಲ್ಲಿ ಪ್ರಸ್ತುತಪಡಿಸಿದ್ದಾರೆ. ಹಡಪದರು ಕೇವಲ ಚಿತ್ರಮಾಧ್ಯಮವಲ್ಲದೆ ಹಿಂದಿನಿಂದ ಬಂದಿರುವ ಶೈಲಿಗಳು, ಚಿತ್ರ ಪ್ರಿಂಟ್ ಮಾಧ್ಯಮದಲ್ಲಿ ಹಾಗೆ ಶಿಲ್ಪ ಕೃತಿಗಳನ್ನು ಸೃಷ್ಟಿಸಿದ್ದು ಅವುಗಳಲ್ಲಿನ ವಸ್ತು ವಿಶೇಷತೆಗಳು ಗಮನಾರ್ಹವಾಗಿವೆ. ಶಿಲ್ಪ ಮತ್ತು ಪ್ರಿಂಟ್‌ಗಳೆಂದು ಬೇರೆ ಬೇರೆ ಉಪಶೀರ್ಷಿಕೆಗಳಾಗಿಸಿಕೊಂಡು ವಿವರಣೆಯಲ್ಲಿ ನೀಡಲಾಗಿದೆ. ಅವರ ಶಿಲ್ಪಗಳ ಪಶ್ಚಿಮದ ಪ್ರಭಾವದ ನೆರಳಿನಡಿ ಸೃಷ್ಟಿಯಾದ ರೂಪಗಳಾಗಿವೆ. ಅಲ್ಯುಮಿನಿಯಂ, ಕಂಚು, ಕಾಗದ, ಪಲ್ಪ ಪ್ಲಾಸ್ಟರ್ ಆಫ್ ಪ್ಯಾರಿಸ್, ಟೆರಾಕೋಟಾ ಇತ್ಯಾದಿಗಳಲ್ಲಿ ಮೂಡಿಬಂದಿರುವ ಕೃತಿಗಳಲ್ಲಿ ಮೂರ್ತ, ಅಮೂರ್ತ ಭಾವನೆಗಳು ಕಂಡುಬರುತ್ತವೆ. ಅಲ್ಲದೆ,

ಲಿಥೊ, ಎಚ್ಚಿಂಗ್, ಅಕ್ವಾಂಟಿಂಟ್ ಲೀನೋ, ತಂತ್ರಗಳಲ್ಲಿಯೂ ಕಲಿತು ರೋಮಾಂಟಿಕ್ ಶೈಲಿಯ ಸ್ಥಿತಿಜೀವ ಪ್ರಿಂಟ್‌ಗಳಲ್ಲಿ ರಚಿಸಲಾಗಿದೆ. ಇವುಗಳಲ್ಲಿ ಬಾಲ್ಯದ ಆಟ ಅನುಭವಿಕೆಗಳು ತುಂಬಿಕೊಂಡಿವೆ. ಈ ವಿಶಿಷ್ಟ ವ್ಯಕ್ತಿತ್ವದ ಅನುಭವಿಕೆಯ ಕಲಾವಿದ ಆರ್.ಎಂ.ಹಡಪದರು ವಿಭಿನ್ನ ಶೈಲಿ, ಮಾಧ್ಯಮಗಳಲ್ಲಿ ತಮ್ಮನ್ನು ದುಡಿಸಿಕೊಂಡ ವೈಶಿಷ್ಟ್ಯತೆಯನ್ನು ಲೇಖಕರು ಅರ್ಥಪೂರ್ಣವಾಗಿ ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**೯.೩.೪. ಕಲೆಗಳಲ್ಲಿ ಸಂಸ್ಕೃತಿ ಮತ್ತು ಪರಂಪರೆ:** ಪ್ರಸ್ತುತ 'ಕಲೆಗಳಲ್ಲಿ ಸಂಸ್ಕೃತಿ ಮತ್ತು ಪರಂಪರೆ' ಎಂಬ ಕೃತಿಯು ಸ್ಪಂದನ ಚಿತ್ರಕಲಾವಿದರ ಯುವ ಬಳಗ, ಬೆಂಗಳೂರು ಇವರಿಂದ ೧೯೯೫ರಲ್ಲಿ ಪ್ರಕಟಗೊಂಡಿದ್ದು ಆರ್.ಎ.ಶಾಂತರಾಜ್‌ರವರ ಸಂಪಾದಕತ್ವದಲ್ಲಿ ಮೂಡಿಬಂದದ್ದಾಗಿದೆ. ಕಲೆ ಮತ್ತು ಸಂಸ್ಕೃತಿಯ ವಿಷಯಗಳ ಕುರಿತಾದ ಒಟ್ಟು ಆರು ಲೇಖನಗಳಿವೆ. ಜನಪದ ಚಿತ್ರಕಲೆ, ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ, ಸಂಸ್ಕೃತ ಬೆಳವಣಿಗೆಯಲ್ಲಿ ಕಲಾಪರಂಪರೆ ಕೊಡುಗೆ, ಚಿತ್ರಕಲೆಯಲ್ಲಿ ಸಮಕಾಲೀನ ಪ್ರಸ್ತುತತೆ, ಕಲೆ–ಸಂಸ್ಕೃತಿ ಹಾಗೂ ಪರಂಪರೆ, ಚಿತ್ರಕಲೆಯ ನೆಲೆಯಲ್ಲಿ ಸಾಂಸ್ಕೃತಿಕ ಪರಂಪರೆ ಹಾಗೂ ವಿಮರ್ಶೆ ಅನುಕ್ರಮವಾಗಿ ಪಿ.ಆರ್.ತಿಪ್ಪೇಸ್ವಾಮಿ, ಅ.ಲ.ನರಸಿಂಹನ್, ಆರ್.ಎ.ಶಾಂತರಾಜ್, ಕೆ.ವಿ.ಸುಬ್ರಹ್ಮಣ್ಯಂ, ರಾಜಶೇಖರ ಸಿ.ಕಂಬಾರ, ಚಿ.ಸು.ಕೃಷ್ಣಶೆಟ್ಟಿ ಅವರು ಬರೆದಿದ್ದಾಗಿದೆ. ಇದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವ **'ಚಿತ್ರಕಲೆಯಲ್ಲಿ ಸಮಕಾಲೀನ ಪ್ರಸ್ತುತತೆ'** ಎಂಬ ಲೇಖನದಲ್ಲಿ ಒಬ್ಬ ಕಲಾವಿದ ತನ್ನ ಕಾಲದ ವಿಶಿಷ್ಟ ಜೀವಧ್ವನಿಗೆ ಸವಾಲುಗಳಿಗೆ ತನ್ನನ್ನು ಸಮ್ಮುಖನನ್ನಾಗಿಸಿಕೊಂಡು ಅಭಿವ್ಯಕ್ತಿಸುವ ಮೂಲಕ ಆ ಕಾಲ ಕುರಿತ ಅವರ ಧೋರಣೆ ಅಥವಾ ನಿಲುವುಗಳನ್ನು ದಾಖಲಿಸುವ ಸಾಧ್ಯತೆಗಳಿವೆ. ಕೇವಲ ಆ ಒಂದು ಕಾಲದ ಮೇಲ್ಪದರವನ್ನು ಉಡುಪು, ಜೀವನ ಶೈಲಿ ಇತ್ಯಾದಿಗಳ ಚಿತ್ರಣ, ಸಾಂದರ್ಭಿಕವಾಗಿ ಮಾತ್ರ ಉಳಿಯಬಲ್ಲವು ಎಂಬ ನಿಟ್ಟಿನಲ್ಲಿ ಒಂದು ನಿರ್ದಿಷ್ಟ ಕಾಲದ ಚಿತ್ರ, ಶಿಲ್ಪ, ಗ್ರಾಫಿಕ್ ಇತ್ಯಾದಿಗಳು ಸಮಕಾಲೀನ ಬದುಕಿನ ಪ್ರತಿಬಿಂಬಗಳಾಗಿದ್ದು, ಕಲೆಗಳಲ್ಲಿ ಈ ಸಮಕಾಲೀನತೆಯ ಮೌಲ್ಯ ಅಗತ್ಯವೆಂಬ ಲೇಖಕರ ನಿಲುವುಗಳು ಇಲ್ಲಿ ಸ್ಪಷ್ಟವಾಗಿವೆ.

ಈ ಹಿನ್ನೆಲೆಯಲ್ಲಿ ಸಮಕಾಲೀನತೆ ಎಂದರೆ ಏನು ಎಂಬ ಹೇಳಿಕೆಯ ಜೊತೆಗೆ ಅದಕ್ಕೆ ಪೂರಕವಾದ ಕ್ರಿ.ಪೂ.ದಿಂದ ಕ್ರಿ.ಶ.ದವರೆಗೆ ಇಂದಿನ ಸಮಕಾಲೀನ ಯುವ ಕಲಾವಿದರವರೆಗೆ ಬೆಳೆದ ಕಲಾ ಬದಲಾವಣೆಗಳು ಆಯಾ ಕಾಲಕ್ಕೆ ಅಭಿವ್ಯಕ್ತಿಸಿರುವ ಚಿತ್ರಗಳು ಮುಂದಿನವರೆಗೆ ಮಾದರಿರೂಪದಂತಾಗಿರುತ್ತವೆ. ಹೊಸದೊಂದು ಸೃಷ್ಟಿ ಎನ್ನಲಾರದಷ್ಟು ಸಾಮ್ಯತೆಯನ್ನು ಹೊಂದಿರುವಂತವಾಗಿವೆ.

ಕಲೆಯಲ್ಲಾದ ವಿಭಿನ್ನ ಬದಲಾವಣೆಗಳು ಹೊಸ ಕಲಾಸೃಷ್ಟಿಗೂ ಕಾರಣವಾಗುತ್ತವೆ. ಖಜರಾಹೋದ ದೇವಾಲಯದ ಬೆತ್ತಲೆ ಹೆಣ್ಣುಗಳ ಮೂರ್ತಿ ಶಿಲ್ಪಗಳನ್ನು ಇಲ್ಲಿ ಉದಾಹರಿಸಬಹುದು.

ಈ ರೀತಿಯಲ್ಲಿ ರೇಖಿಸಿರುವ ಎಂ.ಎಫ್.ಹುಸೇನರ ಚಿತ್ರಗಳು ಮೂಲದ ಶಿಲ್ಪಗಳಿಗಿಂತಲೂ ಭಿನ್ನವಾಗಿಸಿವೆ. ಸಮಕಾಲೀನ ದೃಷ್ಟಿಕೋನದ ಹೊಸ ನೋಟವಿದೆ. ಇಲ್ಲಿ ಒಂದಕ್ಕೊಂದು ಅವಿನಾಭಾವ ಸಂಬಂಧವಿರುವುದು ಕಾಣುತ್ತೇವೆ. ಸಾವಿರಾರು ವರ್ಷಗಳ ಹಿಂದೆ ಗುಹೆಗಳ ಗೋಡೆಗಳನ್ನು ಕೊರೆದು, ಕಂಡುಕೊಂಡ ರೇಖೆ, ಮಣ್ಣಿನ ಬಣ್ಣಗಳನ್ನು ಇತಿಹಾಸಪೂರ್ವ ಕಲಾವಿದ ಬಳಸಿದನು, ಮತ್ತೊಂದು ಕಾಲಕ್ಕೆ ದೇವಾಲಯ, ಚರ್ಚುಗಳನ್ನು ಭಿತ್ತಿ ಚಿತ್ರಗಳಿಂದ ಅಲಂಕರಿಸಿದನು, ಮಗದೊಂದು ಕಾಲಕ್ಕೆ ಕಾಗದ, ಗಾಜು ಕ್ಯಾನ್‌ವಾಸ್ ಇತ್ಯಾದಿಗಳ ಅವಕಾಶದಲ್ಲಿ ಹಲವು ಬಣ್ಣಗಳಿಂದ ಚಿತ್ರಿಸಿದನು. ಮಣ್ಣು, ಮರ, ಎಲುಬು, ಕಲ್ಲು, ಫೈಬರ್, ಗಾಜು ಇತ್ಯಾದಿ ಬಳಸಿ ಬಿಸಾಡಿದ ಕಸ, ಚುರುಪಾರುಗಳಿಂದ ಶಿಲ್ಪಗಳನ್ನು ಸೃಷ್ಟಿಸಿದನು. ಕಂಪ್ಯೂಟರ್ ಸಹ ದುಡಿಸಿಕೊಳ್ಳಲ್ಪಡುತ್ತಿವೆ. ಕೆಲವೊಮ್ಮೆ ಮಿಶ್ರಮಾಧ್ಯಮ, ಹೀಗೆ ಆಯಾಕಾಲ ಅವನಿಗೆ ಎಂಥ ಮಾಧ್ಯಮಗಳ್ನನು ಕೊಟ್ಟವೋ ಅವುಗಳನ್ನು ದುಡಿಸಿಕೊಳ್ಳಲು ಸಮರ್ಥನಾಗಿ ಇಂದ್ರಿಯ, ಗ್ರಹಿಕೆಗಳ ಕಾರ್ಯದಿಂದ ಸೃಷ್ಟಿಸಲೇಬೇಕಾಗಿ ಬಂದ ಒತ್ತಡದಿಂದ ಅಭಿವ್ಯಕ್ತಿಸಿರುವುದನ್ನು ಇತಿಹಾಸಪೂರ್ವ ಕಾಲದಿಂದ ಗವಿ ಚಿತ್ರಗಳಿಂದ ನಮ್ಮ ಸಮಕಾಲೀನ ಕಲಾವಿದರ ಇನ್‌ಸ್ಟಾಲೇಷನ್ ಅಭಿವ್ಯಕ್ತಿಯಂತ ಅನನ್ಯವಾದ ಸೃಷ್ಟಿಗಳಿಗೆ ಕಾರಣವಾಗಿದ್ದು, ಆಯಾ ಸಮಕಾಲೀನ ಸಂದರ್ಭದ ಅಭಿವ್ಯಕ್ತಿಗಳನ್ನು ಉದಾಹರಣೆಗೆ ತೆಗೆದುಕೊಂಡು ಹೇಳಿರುವ ಅಂಶಗಳು ನಿಜಕ್ಕೂ ಗಮನಾರ್ಹ ರೀತಿಯಾಗಿದೆ.

**೯.೩.೫. ಚಿತ್ರಕಲಾ ಪ್ರಪಂಚ:** ೧೯೯೩ರಲ್ಲಿ ಕರ್ನಾಟಕ ಲಲಿಕಲಾ ಅಕಾಡೆಮಿಯು ಪ್ರಕಟಿಸಿದ ಗಮನಾರ್ಹ ಪುಸ್ತಕಗಳಲಿ ಒಂದಾದ 'ಚಿತ್ರಕಲಾ ಪ್ರಪಂಚ'. ಇದನ್ನು ಅ.ಲ.ನರಸಿಂಹನ್ ಮತ್ತು ಎನ್.ಮರಿಶಾಮಚಾರ್‌ರವರು ಸಂಪಾದನೆ ಮಾಡಿದ್ದಾರೆ. ಕನ್ನಡದಲ್ಲಿ ಅದುವರೆಗೂ ಬಂದ ಪ್ರಮುಖ ಕಲಾ ಲೇಖನಗಳನ್ನು ಆಯ್ದು ಈ ಕೃತಿಯಲ್ಲಿ ಪ್ರಕಟಿಸಲಾಗಿದೆ. ಕಲೆ, ಕಲಾಸಾಹಿತ್ಯ ಹಾಗೂ ಕಲಾ ವಿಮರ್ಶೆಯ ವಿವಿಧ ಆಯಾಮಗಳಿಗೆ ಸಂಬಂಧಿಸಿದ ಎಪ್ಪತ್ತು ಲೇಖನಗಳು ಇಲ್ಲವೆ.

ಇದರಲ್ಲಿರುವ **'ಚಿತ್ರಕಲೆ ಕಂಡ ಬಣ್ಣದ ಬೆಡಗು'** ಎಂಬ ಲೇಖನವನ್ನು ಕೆ.ವಿಸುಬ್ರಹ್ಮಣ್ಯಂ ರವರು ಬರೆದಿದ್ದಾಗಿದೆ. ಇದರಲ್ಲಿ ಬಣ್ಣಗಳ ಹುಟ್ಟು, ಬೆಳವಣಿಗೆ, ವೈಶಿಷ್ಟ್ಯತೆ, ಹಿನ್ನೆಲೆ, ಕಲಾಕೃತಿಗಳಲ್ಲಿ ಬಣ್ಣದ ಬಳಕೆ, ಅದರ ಪ್ರಾಮುಖ್ಯತೆಯನ್ನು ಆದಿಮಾನವನ ಗುಹಾವರ್ಣಚಿತ್ರಗಳಿಂದ ಹಿಡಿದು ಸಮಕಾಲೀನ ಸಂದರ್ಭದವರೆಗೆ ಕಲಾವಿದನು ತನ್ನ ಕಲಾಕೃತಿಗಳಲ್ಲಿ ಅಭಿವ್ಯಕ್ತಿಯ ಪ್ರಮುಖ ಮಾಧ್ಯಮವಾಗಿ ದುಡಿಸಿಕೊಂಡಿರುವುದು ನಾವು ಇಲ್ಲಿ ಗ್ರಂಥಗಳಲ್ಲಿನ ಉಲ್ಲೇಖಗಳ ಮೂಲಕ ಕಾಣಬಹುದು. ಹಾಗೆ ಬೇರೆ ಬೇರೆ ಕಲಾವಿದರ ಕಲಾಕೃತಿಗಳಲ್ಲಿರುವ ವರ್ಣವೈವಿಧ್ಯತೆಯನ್ನು ಪರಿಚಯಿಸುತ್ತ ಈ ಎಲ್ಲ ಅಂಶಗಳನ್ನೊಳಗೊಂಡಂತೆ ಹಂತ ಹಂತವಾಗಿ ವ್ಯಾಖ್ಯಾನಿಸಿದ್ದಾರೆ.

**೯.೩.೬. ಕಲಾಕೋಶ:** ೧೯೯೪ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾದ 'ಕಲಾಕೋಶ' ಎಂಬ ಕೃತಿಯು ಎನ್.ಮರಿಶಾಮಾಚಾರ್ ಮತ್ತು ಡಾ.ಅ.ಲ.ನರಸಿಂಹನ್‌ರವರು

ಸಂಪಾದಕತ್ವದಲ್ಲಿ ಹೊರತರಲಾಗಿದೆ. ಇದುವರೆಗೆ ವಿವಿಧ ಬಗೆಯ ಕೋಶಗಳು ಪ್ರಕಟವಾಗಿದ್ದು, ಅವುಗಳಲ್ಲಿ ಕೆಲವು ಸಾಂದರ್ಭಿಕವಾಗಿ ಕಲೆ ಮತ್ತು ಕಲಾವಿದರ ಬಗ್ಗೆ ಹೇಳುತ್ತವೆ. ಆದರೆ ಕಲೆಗಾಗಿಯೇ ವಿಶ್ವಕೊಶ ಮಾದರಿಯ ಬೃಹತ್ ಸಂಪುಟಗಳು ಹೊರಬಂದಿರುವುದು ಇದೇ ಪ್ರಥಮವಾಗಿದೆ. ಪ್ರಸ್ತುತ ಕಲಾಕೋಶದಲ್ಲಿ ರಾಜ್ಯ, ರಾಷ್ಟ್ರ ಮತ್ತು ಅಂತಾರಾಷ್ಟ್ರೀಯ ಕಲಾವಿಷಯಗಳು ವಿವಿಧ ದೇಶಗಳ ಕಲಾಪ್ರಕಾರಗಳು, ಆಧುನಿಕ ಕಲಾಶೈಲಿಗಳು, ಕಲಾಪರಿಕರಗಳು, ಮಾಧ್ಯಮಗಳು, ವಿವಿಧ ರಾಜರ ಪ್ರೋತ್ಸಾಹದ ಅಡಿಯಲ್ಲಿ ಬೆಳೆದ ಕಲಾಶೈಲಿಗಳು, ವರ್ಣಗಳು, ಕಲಾವಿದರು, ಕಲಾನೆಲಗಳು, ಚಿತ್ರಗಳ ವಸ್ತುವಿಷಯಗಳು ಹೀಗೆ ಹಲವಾರು ಅಂಶಗಳು ಇಲ್ಲಿ ಟಿಪ್ಪಣಿಗಳ ರೂಪದಲ್ಲಿ ನಮೂದಿಸಲ್ಪಟ್ಟಿವೆ. ಈ ವಿಷಯಗಳ ಕುರಿತಾಗಿ ಅನೇಕ ವಿದ್ವಾಂಸರು ಬರೆದಿದ್ದಾರೆ. ಅವರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವಂತ **ಆ್ಯಕ್ಷನ್ ಅಂಡಿ ಬಾಡಿ ಆರ್ಟ್, ಆರ್ಟ್ ಆಂಡ್ ಲಾಂಗ್ವೇಜ್, ಅಸ್ಟ್ರೇಲಿಯಾ ಮೂಲನಿವಾಸಿಗಳ ಕಲೆ, ಎನಿಮಲ್ ಸ್ಟೈಲ್, ಕರ್ನಾಟಕದ ಆಧುನಿಕ ಶಿಲ್ಪಕಲೆ, ಕಲೆಯ ಅವನತಿ, ಕೋಲಂಬಿಯನ್ ಕಲೆ, ಪೂರ್ವ ಗುಹಾಚಿತ್ರಕಲೆ, ಚೀನಾ ಪಿಂಗಾಣಿ ಚಿತ್ರಕಲೆ, ಪಾಂಪೆಯ ಭಿತ್ತಿಚಿತ್ರಗಳು, ಬಂಗಾಳ ಕಲಾಶೈಲಿ, ಬ್ರಶ್ ಮತ್ತು ವಾಷ್ ತಂತ್ರ, ಭೀಂಬೆಟ್ಕಾ, ಭೂದೃಶ್ಯಗಳು, ಮಜೋಲಕ, ಯುರೋಪಿನಲ್ಲಿ ಪಿಂಗಾಣಿ ಚಿತ್ರಕಲೆ, ವಿಕೃತಿ** ಎಂಬ ಅಂಶಗಳನ್ನು ಕುರಿತಾಗಿ ಲೇಖಕರು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

**೯.೩.೭.ಕೆ.ವೆಂಕಟಪ್ಪ:** ಕರ್ನಾಟಕ ಕಲಾವಿದರಲ್ಲಿ ವೆಂಕಟಪ್ಪನವರ ಬಗೆಗೆ ಬಂದಷ್ಟು ಸಾಹಿತ್ಯ ಬೇರೆ ಯಾವ ಕಲಾವಿದರ ಬಗ್ಗೆ ಬಂದಿಲ್ಲ. ಅವರ ಕುರಿತ ವ್ಯಕ್ತಿ ಚಿತ್ರಗಳು, ಲೇಖನಗಳು ಮತ್ತು ಚಿತ್ರ ಸಂಪುಟಗಳು ಹೀಗೆ ವೈವಿಧ್ಯ ಸಾಹಿತ್ಯ ಅವರ ಜೀವನ ಮತ್ತು ಕಲೆಯ ಬಗೆಗೆ ರಚನೆಯಾಗಿವೆ. ವಿವಿಧ ಪತ್ರಿಕೆ, ಸ್ಮರಣ ಸಂಚಿಕೆಗಳಲ್ಲೂ ಅವರ ಕುರಿತು ಲೇಖನಗಳಿವೆ. ಪ್ರಸ್ತುತ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ೧೯೭೭ರಲ್ಲಿ ಪ್ರಕಟಗೊಂಡ 'ಕೆ.ವೆಂಕಟಪ್ಪ' ಎಂಬ ಕೃತಿಯಲ್ಲಿ ಕೆ.ವೆಂಕಟಪ್ಪನವರ ಬಗೆಗೆ ಖ್ಯಾತ ವಿದ್ವಾಂಸರು ಬರೆದ ಲೇಖನಗಳಿವೆ. ಅದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ **'ಕಲಾತಪಸ್ವಿ ಕೆ.ವೆಂಕಟಪ್ಪ'** ಎಂಬ ಲೇಖನದಲ್ಲಿ ಲೇಖಕರು ವೆಂಕಟಪ್ಪನವರ ಜಲವರ್ಣ ಕೃತಿಗಳ ಬಗ್ಗೆ ಹೆಚ್ಚು ಆದ್ಯತೆ ನೀಡಿ ಬರೆದಿರುವುದಾಗಿದೆ.

**೯.೩.೮. ಸಮಕಾಲೀನ ಕಲೆ:** ೧೯೭೮ರಲ್ಲಿ ಲಲಿತಕಲಾ ಅಕಾಡೆಮಿಯಿಂದ ಹೊರತಂದಿರುವ 'ಸಮಕಾಲೀನ ಕಲೆ' ಈ ಕೃತಿಯನ್ನು ಎಸ್.ಎನ್.ಚಂದ್ರಶೇಖರ್ ಸಂಪಾದನೆ ಮಾಡಿದ್ದಾರೆ. ಇದರಲ್ಲಿ ಮೂರುದೊಡ್ಡ ಲೇಖನಗಳಿದ್ದು ಇವುಗಳನ್ನು ಎಸ್.ಎನ್.ಚಂದ್ರಶೇಖರ್, ಅ.ಲ.ನರಸಿಂಹನ್ ಮತ್ತು ಕೆ.ವಿ.ಸುಬ್ರಹ್ಮಣ್ಯಂ ಅವರು ಅನುಕ್ರಮವಾಗಿ 'ಆಕೃತಿ–ವಿಕೃತಿಗಳ ರೂಪುರೇಷೆ', 'ವಿಕೃತಿ–ಚಿತ್ರಕಲೆ', **'ವಿಕೃತರೂಪ ಶಿಲ್ಪಕಲೆ'** ಎಂಬ ಲೇಖನಗಳನ್ನು ಬರೆದಿದ್ದಾರೆ. ಅದರಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದಂತಹ ಲೇಖನದಲ್ಲಿ ವಿಶಿಷ್ಟ ಕಲ್ಪನೆ, ರೂಪ ವಿಕಾಸ, ವಿದೇಶಿ ಭಾರತ, ಕರ್ನಾಟಕಗಳಲ್ಲಿ ಇದರ ಪರಿಣಾಮವನ್ನು ಚರ್ಚಿಸಿದ್ದಾರೆ.

**೯.೩.೯. ಕಲಾಚರಿತ್ರೆ:** ವಿಶ್ವಕೋಶ ಮಾದರಿಯಲ್ಲಿರುವ 'ಕಲಾಚರಿತ್ರೆ' ಎಂಬ ಈ ಕಲಾಗ್ರಂಥವನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯಿಂದ ೨೦೦೨ರಲ್ಲಿ ಹೊರತಂದಿದ್ದು ಎನ್.ಮರಿಶಾಮಾಚಾರ್ ಸಂಪಾದನೆ ಮಾಡಿದ್ದಾರೆ. ಜಗತ್ತಿನ ಪ್ರಾಚೀನ ನಾಗರಿಕತೆಯಲ್ಲಿ ಬೆಳೆದು ಬಂದಿರುವ ವಿವಿಧ ಕಲಾಶೈಲಿಗಳ ಮಾಹಿತಿ ಇಲ್ಲದೆ. ಒಟು ಎಂಟು ಲೇಖನಗಳಿದ್ದು, ನಾಡಿನ ಹೆಸರಾಂತ ವಿದ್ವಾಂಸರು ಬರೆದವುಗಳಾಗಿವೆ. ಈ ಎಂಟು ಮುಖ್ಯ ಅಧ್ಯಾಯಗಳಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ **'ಇತಿಹಾಸಪೂರ್ವ ದೃಶ್ಯಕಲೆ'** ಎಂಬ ಲೇಖನದಲ್ಲಿ ಆದಿಮಾನವನ ಸಂಸ್ಕೃತಿಯನ್ನು ಪರಿಚಯಿಸುತ್ತ ಅವನು ನೆಲೆಸಿರುವ ಗುಹೆಗಳ ಶೋಧನಾಕಾರ್ಯವು ಈವರೆಗೂ ನಡೆದು ಬಂದಂತವುಗಳನ್ನು ಉಲ್ಲೇಖಿಸಲಾಗಿದೆ. ಹಾಗೆ ಅವುಗಳಲ್ಲಿನ ಚಿತ್ರ ನೆಲೆಯನ್ನು ಪರಿಶೋಧಿಸಿದ ವಿಧಾನ ಹೇಳಲ್ಪಟ್ಟಿದೆ.

ಉಪವಿಭಾಗಗಳಲ್ಲಿ ಹೇಳಲಾಗಿರುವ ಸಂಗತಿಗಳಲ್ಲಿ ಇತಿಹಾಸಪೂರ್ವ ಶಿಲ್ಪಗಳು, ಮೆಸೂಪೋಟೇಮಿಯ ಸಂಸ್ಕೃತಿ, ಸುಮೇರಿಯನ್ನರ ಸಂಸ್ಕೃತಿ, ಸುಮೇರಿಯನ್ನರ ಕಲೆ, ಬೆಬಿಲೋನಿಯನ್ನರ ಸಂಸ್ಕೃತಿ, ಅಸ್ಸೀರಿಯನ್ ಸಂಸ್ಕೃತಿ, ಹರಪ್ಪ ಮತ್ತು ಮೆಹೆಂಜೋದಾರೋ ಹೀಗೆ ಅವುಗಳಲ್ಲಿ ಪ್ರಾಚೀನ ಕಲಾಪರಂಪರೆ ಬೆಳೆದುಬಂದ ಹಿನ್ನೆಲೆಯನ್ನು ಲೇಖಕರು ಇಲ್ಲಿ ನಮೂದಿಸಲ್ಪಟ್ಟಿದ್ದಾರೆ.

**ಟಿಪ್ಪಣಿಗಳು**


೧. ಚಂದ್ರಹಾಸ ವೈ.ಜಾಲಿಹಾಳ(ಸಂ), **ಕಲಾವಿದ ಅಂದಾನಿ ಐವತ್ತು,** ೧೯೯೭

೨. ಪಾಟೀಲ ಎಸ್.ಸಿ., ಸತ್ಯಾನಂದ ಪಾತ್ರೋಟ(ಸಂ), **ನಿಜದ ನೆಲೆ,** ೨೦೦೩

೩. ಮರಿಶಾಮಾಚಾರ್ ಎನ್.(ಸಂ), **ಕಲಾಚೇತನ,** ೧೯೯೫

೪. ಶ್ರೀಪತಿ ಎಸ್.(ಸಂ), **ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು,** ೧೯೯೭

೫. ಅನಿಲ್‌ಕುಮಾರ್ ಎಚ್.ಎ.(ಸಂ), **ಚೌಕಟ್ಟು,** ೧೯೯೭

೬. ನರಸಿಂಹನ್ ಅ.ಲ.(ಸಂ), **ಸಂಯೋಜನೆ,** ೧೯೮೭

೭. ಶಾಸ್ತ್ರೀ ಬಿ.ವಿ.ಕೆ.(ಸಂ), **ರೇಖಾಚಿತ್ರ,** ೧೯೯೧

೮. ಕೃಷ್ಣಯ್ಯ ಎಂ.ಎಚ್.(ಸಂ), **ಆರ್.ಎಸ್.ಎನ್.: ವ್ಯಕ್ತಿ ಮತ್ತು ಕಲೆ,** ೨೦೦೮

೯. ಅಂದಾನಿ ವಿ.ಜಿ(ಸಂ)., **ದೃಶ್ಯಕಲಾ ವಿಮರ್ಶೆ,** ೨೦೦೦

೧೦. ಮರಿಶಾಮಾಚಾರ್ ಎನ್.(ಸಂ), **ಆರ್.ಎಂ.ಹಡಪದ,** ೧೯೯೬

೧೧. ಶಾಂತರಾಜ ಆರ್.ಎ.(ಸಂ), **ಕಲೆಗಳಲ್ಲಿ ಸಂಸ್ಕೃತಿ ಮತ್ತು ಪರಂಪರೆ,** ೧೯೯೫

೧೨. ನರಸಿಂಹನ್ ಅ.ಲ., ಮರಿಶಾಮಾಚಾರ್ ಎನ್.(ಸಂ), **ಚಿತ್ರಕಲಾ ಪ್ರಪಂಚ,** ೧೯೯೩

೧೩. ನರಸಿಂಹನ್ ಅ.ಲ., ಮರಿಶಾಮಾಚಾರ್ ಎನ್.(ಸಂ), **ಕಲಾಕೋಶ,** ೧೯೯೪

೧೪. ಕನ್ನಡ ಮತ್ತು ಸಂಸ್ಕೃತಿ ಇಲಾಖೆ(ಸಂ), **ಕೆ.ವೆಂಕಟಪ್ಪ,** ೧೯೬೮

೧೫. ಚಂದ್ರಶೇಖರ್ ಎಸ್.ಎನ್.(ಸಂ), **ಸಮಕಾಲೀನ ಕಲೆ,** ೧೯೯೮

೧೬. ಮರಿಶಾಮಾಚಾರ್ ಎನ್.(ಸಂ), **ಕಲಾಚರಿತ್ರೆ,** ೨೦೦೨

## ಅಧ್ಯಾಯ ಹತ್ತು

# ಸಮಾರೋಪ

ದೃಶ್ಯಕಲೆಯ ಅರ್ಥ, ವ್ಯಾಪ್ತಿ, ಉದ್ದೇಶ, ಸೃಷ್ಟಿ ಪ್ರಕ್ರಿಯೆ, ಕಲಾಕೃತಿ, ಕಲಾವಿದರು, ಅವರ ಜೀವನ ಪರಿಚಯ ಕಲಾಕೃತಿಗಳು, ಕಲಾತತ್ವಗಳ ವಿಮರ್ಶೆ, ಕಲಾಇತಿಹಾಸ, ಕಲಾಕೋಶ ಇತ್ಯಾದಿಗಳು ಕಾಣಿಸಿಕೊಂಡಾಗ ದೃಶ್ಯಕಲಾ ಸಾಹಿತ್ಯವಾಗಿ ರೂಪುಗೊಳ್ಳುತ್ತದೆ. ಅದು ಕಣ್ಣಿನಿಂದ ನೋಡುವ ಅನುಭವಿಸುವ ದೃಶ್ಯಕಲೆಯ ವಿಶಿಷ್ಟ ಭಾಷೆಯನ್ನು ದೃಶ್ಯಭಾಷೆ ಎನ್ನಬಹುದು.

ದೃಶ್ಯಕಲಾ ಸಾಹಿತ್ಯ ಮೇಲ್ನೋಟಕ್ಕೆ ಇಲ್ಲವೇ ಇಲ್ಲವೇನೋ ಎನ್ನುವಂತಹ ಸಂದರ್ಭದಿಂದ ನಾವು ಬಹುದೂರ ನಡೆದು ಬಂದಿದ್ದೇವೆ. ಸ್ವಲ್ಪಮಟ್ಟಿಗೆ ಗಮನಾರ್ಹ ಸಾಹಿತ್ಯ ಸೃಷ್ಟಿಯಾಗುತ್ತಿರುವ ಸಂದರ್ಭದಲ್ಲಿ ನಾವಿದ್ದೇವೆ. ಪ್ರಸ್ತುತ ಕಲೆ ಬಹುತೇಕ ಮಾರುಕಟ್ಟೆಯ ಸರಕಾಗಿರುವ ಸಂದರ್ಭದಲ್ಲಿ ಅದಕ್ಕೆ ಪೂರಕವಾಗುವಂತೆ ಕಲೆಯ ಪರಿಚಯ ವಿಮರ್ಶೆ ಹಾಗೂ ಪ್ರಚಾರ ಸಾಮಗ್ರಿಯಂಥ ಸಾಹಿತ್ಯ ಪ್ರಕಟವಾಗುತ್ತಿದೆ. ೧೯೮೦ರ ದಶಕದಲ್ಲಿ ಕಲೆಯ ಬಗ್ಗೆ ಬರೆಯುವ ಸ್ವತಃ ಚಿತ್ರಕಲಾವಿದರೂ ಆದ ವಿಮರ್ಶಕರು ಹುಟ್ಟಿಕೊಂಡಿದ್ದು ಒಂದು ವಿಶೇಷ. ಹೊಸ ಸಂದರ್ಭಕ್ಕೆ ಹೊಸ ದೃಷ್ಟಿಕೋನ ಹೊಂದಿದ ವಿಶಾಲ ದೃಷ್ಟಿಯ ಅನೇಕ ಕಲಾವಿಮರ್ಶಕರು, ಲೇಖಕರು ಚಿತ್ರ ಮತ್ತು ದೃಶ್ಯ ಭಾಷೆಯನ್ನು ಗಮನಾರ್ಹವಾಗಿ ಕನ್ನಡಕ್ಕೆ ತಂದುಕೊಳ್ಳುವ ರೀತಿಯಲ್ಲಿ ಹಿಂದೆಂದಿಗಿಂತಲೂ ಭಿನ್ನತೆಯಿದೆ.

ಕೆ.ವಿ.ಸುಬ್ರಹ್ಮಣ್ಯಂರವರು ದೃಶ್ಯಕಲಾ ಸಾಹಿತ್ಯ ಕ್ಷೇತ್ರಕ್ಕೆ ಗಣನೀಯ ಕೊಡುಗೆಯನ್ನು ನೀಡಿದ್ದಾರೆ. ಅವರು ಕಲಾವಿದರಾಗಿ, ಬರಹಗಾರರಾಗಿ ಕಲಾಚಿಂತಕರು ಅಲ್ಲದೆ ಒಳ್ಳೆ ವಿಮರ್ಶಕರಾಗಿ, ಸಂಪಾದಕರಾಗಿ ಮತ್ತು ಸಂಶೋಧಕರು, ತೀರ್ಪುಗಾರರು ಮಾತ್ರವಲ್ಲದೆ ಉತ್ತಮ ಕಲಾ ಶಿಕ್ಷಕರಾಗಿಯೂ ಸೇವೆ ಸಲ್ಲಿಸಿದ್ದು ಬಹುಮುಖ ವ್ಯಕ್ತಿತ್ವವುಳ್ಳವರಾಗಿದ್ದಾರೆ. ಪ್ರಸ್ತುತ ಅಧ್ಯಯನದಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಬರೆದ ಅನೇಕ ದೃಶ್ಯಕಲಾ ಸಾಹಿತ್ಯ ಕೃತಿಗಳನ್ನು, ಲೇಖನಗಳನ್ನು ಕಲಾಲೋಕಕ್ಕೆ ಪರಿಚಯಿಸುವ ಹಿನ್ನೆಲೆಯಲ್ಲಿ ಕೇವಲ ಅವರ ಸಾಹಿತ್ಯ ಬರಹಗಳನ್ನು ತೆಗೆದುಕೊಂಡು

ಒಟ್ಟು ೧೦ ಅಧ್ಯಾಯಗಳಾಗಿ ವಿಷಯವಾರು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಈ ಅಧ್ಯಾಯಗಳಲ್ಲಿ ಚರ್ಚಿಸಲ್ಪಟ್ಟ ಅಂಶಗಳ ಸಂಕ್ಷಿಪ್ತ ಪರಿಚಯ ಈ ಕೆಳಗಿನಂತಿದೆ.

ಮೊದಲನೆಯ ಅಧ್ಯಾಯದಲ್ಲಿ **ಉದ್ದೇಶ, ಸ್ವರೂಪ, ವಿಧಾನ**ಗಳನ್ನು ಕಟ್ಟಿಕೊಡಲಾಗಿದೆ. ಪ್ರಸ್ತುತ ಅಧ್ಯಯನವನ್ನು ಯಾವ ಉದ್ದೇಶಕ್ಕಾಗಿ ಕೈಗೊಳ್ಳಲಾಗಿದೆ ಎಂಬುದನ್ನು ತಿಳಿಸಲಾಗಿದ್ದು, ಪೂರ್ವಪೀಠಿಕೆಯಲ್ಲಿ ಸಾಹಿತ್ಯ ಬೆಳೆದುಬಂದ ಹಿನ್ನೆಲೆ ಮತ್ತು ದೃಶ್ಯಕಲಾ ಸಾಹಿತ್ಯ ಹುಟ್ಟು, ಬೆಳವಣಿಗೆ ಇತ್ತೀಚಿನ ಬೆಳವಣಿಗೆ ಉಲ್ಲೇಖಗಳೊಂದಿಗೆ ದಾಖಲಿಸಲಾಗಿದೆ. ಸಮಕಾಲೀನ ಸಂದರ್ಭದಲ್ಲಿ ದೃಶ್ಯಕಲಾ ಸಾಹಿತ್ಯವು ಎಷ್ಟು ಅಗತ್ಯತೆ ಇದೆ ಈ ಹಿನ್ನೆಲೆಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರ ಕೊಡುಗೆಯ ಕುರಿತಾಗಿ ಸಂಕ್ಷಿಪ್ತ ಅಂಶಗಳನ್ನು ಇಲ್ಲಿ ಪರಿಚಯಿಸಲಾಗಿದೆ.

ಎರಡನೆಯ ಅಧ್ಯಾಯವು ಕೆ.ವಿ.ಸುಬ್ರಹ್ಮಣ್ಯಂರವರ **ಜನನ, ಬಾಲ್ಯಪರಿಸರ, ಶಿಕ್ಷಣ ಮತ್ತು ವೃತ್ತಿ ಜೀವನ** ಕುರಿತಾಗಿದೆ. ಕೆ.ವಿ.ಸುಬ್ರಹ್ಮಣ್ಯಂರವರು ಹುಟ್ಟಿದ ವಾಗಟಾ ಅಗ್ರಹಾರ, ಹೊಸಕೋಟೆ ತಾಲೂಕಿನ ಐತಿಹಾಸಿಕ ಹಿನ್ನೆಲೆಯನ್ನು ಮತ್ತು ಮನೆತನದ ಹಿನ್ನೆಲೆ, ಕಲಾಶಿಕ್ಷಣ, ವೃತ್ತಿ ಜೀವನ ಈ ಎಲ್ಲ ಅಂಶಗಳ ಕುರಿತಾಗಿ ಸಂಕ್ಷಿಪ್ತ ಪರಿಚಯ ಇಲ್ಲಿ ಮಾಡಿಕೊಡಲಾಗಿದೆ.

ಮೂರನೆಯ ಅಧ್ಯಾಯವು **ಸಂಪಾದನಾ ದೃಶ್ಯಕಲಾ ಸಾಹಿತ್ಯ** ಕುರಿತಾಗಿದೆ. ಕೆ.ವಿ. ಸುಬ್ರಹ್ಮಣ್ಯಂರವರು ಕಲಾಸಾಹಿತ್ಯ ಬರವಣಿಗೆಯ ಜೊತೆಗೆ ಉತ್ತಮ ಸಂಪಾದಕರಾಗಿ ಮತ್ತು ಸಂಪಾದನಾ ಲೇಖಕರಾಗಿ ಕಲಾಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಂಡಿದ್ದರ ಸಂಕ್ಷಿಪ್ತ ಪರಿಚಯ ಮಾಡಲಾಗಿದೆ. ಇವರ ಸಂಪಾದಕತ್ವದಲ್ಲಿ ಬಂದಿರುವ ಕರ್ನಾಟಕ ಲಲಿತಕಲಾ ಅಕಾಡೆಮಿಯಿಂದ ಪ್ರಕಟವಾಗುವ ಕರ್ನಾಟಕ ಕಲಾವಾರ್ತೆ ತ್ರೈಮಾಸಿಕ ಸಂಚಿಕೆಯ ಕೆಲವನ್ನು ಮಾತ್ರ ಇಲ್ಲಿ ಕಾಣಬಹುದು. ಅವುಗಳಲ್ಲಿನ ವಿಷಯಗಳನ್ನು ಕುರಿತಾಗಿ ವಿಷಯ ನಿರೂಪಣೆ ಮಾಡಲಾಗಿದೆ. ಯುವ ಕಲಾವಿದರು ಬರೆದಂತಹ ಲೇಖನಗಳು ಮತ್ತು ಇಂಗ್ಲೀಷ್ ಬರಹದಲ್ಲಿರುವಂತವು ಇಲ್ಲಿ ಮುಖ್ಯವಾಗಿ ಗಮನಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ **ವ್ಯಕ್ತಿ ಕೇಂದ್ರಿತ ದೃಶ್ಯಕಲಾ ಸಾಹಿತ್ಯ** ಕುರಿತಾಗಿದೆ. ಕೆ.ವಿ.ಸುಬ್ರಹ್ಮಣ್ಯಂ ರವರಿಂದ ಅನೇಕ ಕಲಾ ಸಾಹಿತ್ಯ ಕೃತಿಗಳು ರಚನೆಗೊಂಡಿದ್ದು ಅವುಗಳಲ್ಲಿ ವ್ಯಕ್ತಿ ಕೇಂದ್ರಿತ ಸಾಹಿತ್ಯ ಬರಹಗಳ ಪಾಲು ಬಹುದೊಡ್ಡದು. ಒಟ್ಟು ಏಳು ಕೃತಿಗಳನ್ನು ಇವರಿಂದ ರೂಪಿತಗೊಂಡಿವೆ. ಅವು ಎಸ್.ಜಿ.ವಾಸುದೇವ್, ಆರ್.ಎಸ್.ನಾಯ್ಡು, ವಿಜಯ ಸಿಂಧೂರ, ಕೆ.ವೆಂಕಟಪ್ಪ ಪುನರಾವಲೋನ, ಸಿ.ಪಿ.ರಾಜಾರಾಮ್, ಎನ್.ಹನುಮಯ್ಯ, ವೆಂಕಟಾಚಲಪತಿ ಈ ಕಲಾವಿದರ ಕುರಿತಾಗಿ ಜನನ ಬಾಲ್ಯ ಪರಿಸರ, ಕಲಾಸಾಧನೆಗಳನ್ನು ಮತ್ತು ಕಲಾಕ್ಷೇತ್ರಕ್ಕೆ ಅವರಿಂದಾದ ಕೊಡುಗೆಯನ್ನು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ. ಹಾಗೆ ಕೆಲವು ಅಂಶಗಳನ್ನು ಕೃತಿಯಿಂದ ನೇರವಾಗಿ ತೆಗೆದುಕೊಂಡು ಅವರ ಕಲಾಕೃತಿಗಳಲ್ಲಿನ ತಂತ್ರ, ಶೈಲಿ, ವಿಶೇಷತೆಯನ್ನು ಇಲ್ಲಿ ಬಿಂಬಿಸಲಾಗಿದೆ. ಈ ಎಲ್ಲಾ

ಕಲಾವಿದರ ಕೃತಿ ರಚನೆಯು ವಿವಿಧ ಮಾಧ್ಯಮ ಶೈಲಿಗಳಿಂದ ಕೂಡಿದ್ದು, ಪಾಶ್ಚಾತ್ಯ ಶೈಲಿಯಿಂದ ಪ್ರಭಾವಿತಗೊಂಡು ಮತ್ತೆ ಕೆಲವರು ಭಾರತೀಯ ಅಂತಃ ಸತ್ವವನ್ನು ಮೈಗೂಡಿಸಿಕೊಂಡು ಚಿತ್ರ, ಶಿಲ್ಪಗಳನ್ನು ರಚಿಸಿರುವುದನ್ನು ಈ ಅಧ್ಯಾಯದಿಂದ ಕಂಡುಕೊಳ್ಳಲಾಗಿದೆ.

ಐದನೆಯ ಅಧ್ಯಾಯದಲ್ಲಿ **ತಾತ್ವಿಕ ದೃಶ್ಯಕಲಾ ಸಾಹಿತ್ಯ** ಕೃತಿಗಳನ್ನು ಪರಿಚಯಿಸಿಲಾಗಿದೆ. ತಾತ್ವಿಕ ದೃಶ್ಯಕಲಾ ಸಾಹಿತ್ಯ ಎಂದರೇನು. ಈ ಹಿನ್ನೆಲೆಯಲ್ಲಿ ಬರೆದಂತಹ ಕೆಲವು ಕಲಾ ಸಾಹಿತಿಗಳನ್ನು ಇಲ್ಲಿ ತಿಳಿಸಲಾಗಿದೆ. ಮುಖ್ಯವಾಗಿ ಕೆ.ವಿ.ಸುಬ್ರಹ್ಮಣ್ಯಂರವರು ತಾತ್ವಿಕ ಹಿನ್ನೆಲೆಯಲ್ಲಿಯೂ ಕೆಲವು ಕೃತಿಗಳನ್ನು ಬರೆದಿದ್ದು ಗಮನಾರ್ಹ ವಿಷಯಗಳಿಂದ ನಿರೂಪಿತವಾಗಿವೆ. ಮುಖಗಳೊಂದಿಗೆ ಮುಖಾಮುಖಿ, ಕಲಾಸಂವೇದನೆಯ ಒಳನೋಟಗಳು, ಇನ್‌ಸ್ಟಾಲೇಷನ್ ಕಲಾಪ್ರಪಂಚ, ಪೋಟೋರಿಯಲಿಸಂ, ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ, ಈ ಎಲ್ಲಾ ಕೃತಿಗಳನ್ನು ಬೇರೆ ಬೇರೆ ಶೀರ್ಷಿಕೆಯಡಿ ಪ್ರಸ್ತಾಪಿಸಿ, ಪ್ರತಿಯೊಂದು ಕೃತಿಯಲ್ಲಿನ ಒಟ್ಟು ವಿಷಯಗಳನ್ನು ಸಮಗ್ರವಾಗಿ ಪರಿಶೀಲಿಸಿ ಸ್ವಲ್ಪಮಟ್ಟಿಗೆ ಕಟ್ಟಿಕೊಡಲಾಗಿದೆ. ಕೆಲವು ಸಂದರ್ಭದಲ್ಲಿ ವಿಷಯದ ನಿರೂಪಣೆ ಗೊಂದಲವಾಗದಂತೆ ಕೃತಿಯಲ್ಲಿನ ನೇರ ಅಂಶಗಳನ್ನು ತೆಗೆದುಕೊಂಡು ಪರಿಚಯ ಮಾಡಲಾಗಿದೆ. ಈ ಎಲ್ಲಾ ಕೃತಿಗಳು ಬೇರೆ ಬೇರೆ ವಿಷಯಗಳಿಂದ ಕೂಡಿದ್ದು, ವಿವಿಧ ದೃಷ್ಟಿಕೋನದಿಂದ ಕೂಡಿರುವುದು ಇಲ್ಲಿ ಕಂಡುಬರುತ್ತದೆ.

ಆರನೆಯ ಅಧ್ಯಾಯ **ಕ್ಯಾಟಲಾಗ್ ದೃಶ್ಯಕಲಾ ಸಾಹಿತ್ಯ**ವನ್ನು ಕುರಿತಾಗಿದೆ. ಕ್ಯಾಟಲಾಗ್ ಸಾಹಿತ್ಯದ ಹುಟ್ಟು ಬೆಳವಣಿಗೆ ಪ್ರಸ್ತುತ ಸಂದರ್ಭದಲ್ಲಿ ಅದರ ಮಹತ್ವವನ್ನು ಪರಿಚಯಿಸಲಾಗಿದೆ. ಕೆ.ವಿ.ಸುಬ್ರಹ್ಮಣ್ಯಂರವರು ಅನೇಕ ಕ್ಯಾಟಲಾಗ್‌ಗಳಿಗೆ, ವಿಮರ್ಶೆ, ಪರಿಚಯ, ಅಭಿವ್ಯಕ್ತಿಯ ಹೊಳಹುಗಳನ್ನು ಬರೆದುಕೊಟ್ಟಿದ್ದಾರೆ. ವಿಷಯದ ಸರಳತೆಗೆ ೧. ಏಕವ್ಯಕ್ತಿ ಕಲಾಪ್ರದರ್ಶನ, ೨. ಸಮೂಹ ಕಲಾಪ್ರದರ್ಶನ ಎಂದು ವಿಂಗಡಿಸಿಕೊಂಡು ಇವುಗಳಲ್ಲಿ ಬಂದಿರುವ ವಿಷಯಗಳು ಇಲ್ಲಿ ಕಟ್ಟಿಕೊಡಲಾಗಿದೆ. ಇವು ಇಂಗ್ಲಿಷ್ ಮತ್ತು ಕನ್ನಡ ಎರಡು ಭಾಷೆಯ ಬರಹಗಳಿಂದ ಒಳಗೊಂಡಿದ್ದು ಕಾಣಬಹುದು.

ಏಳನೆಯ ಅಧ್ಯಾಯದಲ್ಲಿ **ಸಂಶೋಧನಾ ದೃಶ್ಯಕಲಾ ಸಾಹಿತ್ಯ** ಕುರಿತಾಗಿ ಕೆ.ವಿ.ಸುಬ್ರಹ್ಮಣ್ಯಂ ರವರು ಬರೆದಿರುವ ಕೃತಿಗಳನ್ನು ಈ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ. ೧. ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ, ೨. ಆದಿಮದೃಶ್ಯ ಸೌಂದರ್ಯದ ಆಧಿಪತ್ಯ ಎಂಬ ಎರಡು ಕೃತಿಗಳಲ್ಲಿ ಆದಿಮ ಕಲೆಯ ಇತಿಹಾಸ, ಚಿತ್ರನೆಲೆ, ಚಿತ್ರಗಳಲ್ಲಿ ಕಂಡುಬರುವ ವೈವಿಧ್ಯತೆ, ಮಾಧ್ಯಮಗಳು ಎಂಬ ಅಂಶಗಳ ಕುರಿತಾಗಿ ಸಂಕ್ಷಿಪ್ತವಾಗಿ ಇಲ್ಲಿ ಕಟ್ಟಿಕೊಡಲಾಗಿದೆ. ಹೊಸ ಅನ್ವೇಷಣೆಗಳಾದ ಘಟ್ಟಮಾದಮಂಗಲ, ಕಂಗುಂದಿ, ಭೀಂಬೇಟ್ಕಾಗಳಲ್ಲಿನ ಆದಿಮ ಚಿತ್ರ ಪರಂಪರೆ, ಒಟ್ಟು ಕೃತಿಯಲ್ಲಿನ ವಿಷಯಗಳನ್ನು ಪ್ರದೇಶಗಳ ಹಿನ್ನೆಲೆಯಾಗಿ ನಿರೂಪಣೆ ಮಾಡಲಾಗಿದೆ. ಈ ಎಲ್ಲ

ಪ್ರದೇಶಗಳಲ್ಲಿ ಕಾಣಸಿಕೊಳ್ಳುವ ಚಿತ್ರಗಳಲ್ಲಿನ ವಿಭಿನ್ನ ಅಭಿವ್ಯಕ್ತಿಗಳನ್ನು ಹೊಂದಿದ್ದು ಚಿತ್ರಗಳಲ್ಲಿ ವೈವಿಧ್ಯತೆ ಕಾಣಬರುತ್ತದೆ.

ಎಂಟನೆಯ ಅಧ್ಯಾಯದಲ್ಲಿ ಪತ್ರಿಕಾ ದೃಶ್ಯಕಲಾ ಸಾಹಿತ್ಯ ಕುರಿತಾಗಿ ಕಟ್ಟಿಕೊಡಲಾಗಿದೆ. ಪತ್ರಿಕಾ ಸಾಹಿತ್ಯ ಎಂದರೇನು? ದೃಶ್ಯಕಲಾ ಸಾಹಿತ್ಯದಲ್ಲಿ ಮತ್ತು ಪ್ರಸ್ತುತ ಸಂದರ್ಭದಲ್ಲಿ ಇದರ ಮಹತ್ವವನ್ನುಕುರಿತು ಇಲ್ಲಿ ಸಂಕ್ಷಿಪ್ತವಾಗಿ ಪರಿಚಯಿಸಲಾಗಿದೆ. ಕೆ.ವಿ.ಸುಬ್ರಹ್ಮಣ್ಯಂರವರು ಈ ಹಿನ್ನೆಲೆಯಲ್ಲಿ ಬರೆದಿರುವ ಕಾರಣಗಳು, ಅವರು ಈ ಕ್ಷೇತ್ರಕ್ಕೆ ನೀಡಿದ ಪತ್ರಿಕಾ ಸಾಹಿತ್ಯದ ಕೊಡುಗೆಯನ್ನು ಇಲ್ಲಿ ಗಮನಿಸಲಾಗಿದೆ. ೫೦೦ಕ್ಕೂ ಹೆಚ್ಚು ಲೇಖನಗಳು ಕಂಡುಬಂದಿವೆ. ಅವುಗಳಲ್ಲಿ ಕೆಲವು ಮಾತ್ರ ಲಭ್ಯವಾಗಿರುವುದನ್ನು ಇಲ್ಲಿ ಕಟ್ಟಿಕೊಡಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಆದು ಭಾಗಗಳಾಗಿ ವಿಷಯವಾರು ವಿಂಗಡಿಸಿಕೊಳ್ಳಲಾಗಿದೆ. ವಿಷಯ ಕೇಂದ್ರಿತ ಬರಹಕ್ಕೆ ಸಂಬಂಧಿಸಿದಂತೆ ಲೇಖನಗಳಲ್ಲಿ ನಾಲ್ಕು ಉಪಭಾಗಗಳಾಗಿಸಿಕೊಳ್ಳಲಾಗಿದೆ. ೧. ಆದಿಮ ಕಲೆಗೆ ಸಂಬಂಧಿಸಿದ ಲೇಖನಗಳಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಶೋಧನೆ ಮಾಡಿದ ಈಗಾಗಲೇ ಮಾಡಿರುವಂತ ನೆಲೆಗಳಲ್ಲಿನ ಆದಿಮ ಚಿತ್ರಗಳನ್ನು ಕುರಿತಾಗಿರುವ ವಿಷಯಗಳನ್ನು ಸಂಕ್ಷಿಪ್ತವಾಗಿ ಬೇರೆ ಬೇರೆ ಲೇಖನಗಳಾಗಿಯೇ ಪರಿಚಯ ಮಾಡಿಕೊಡಲಾಗಿದೆ. ೨. ಗಾರೆಶಿಲ್ಪ ಗಳಿಗೆ ಸಂಬಂಧಿಸಿದ ಲೇಖನಗಳಲ್ಲಿ ವಿವಿಧ ನೆಲೆಗಳಲ್ಲಿ ಕಂಡುಬಮದ ಗಾರೆಶಿಲ್ಪಗಳನ್ನು ಅವುಗಳ ವೈಶಿಷ್ಟ್ಯತೆ, ವಸ್ತುವಿಷಯವನ್ನು ಇಲ್ಲಿ ತಿಳಿಸಲಾಗಿದೆ. ೩. ಐತಿಹಾಸಿಕ ಸ್ಥಳಗಳಿಗೆ ಸಂಬಂಧಿಸಿದ ಲೇಖನಗಳಲ್ಲಿ ಬೇರೆ ಬೇರೆ ಐತಿಹಾಸಿಕ ದೇವಾಲಯ, ಕೋಟೆಗಳ ಪರಿಚಯ, ಅವುಗಳಲ್ಲಿ ವಿಷಯವನ್ನು ಇಲ್ಲಿ ಹೇಳಲಾಗಿದೆ. ೪. ಉತ್ಸವ ಕುರಿಂತೆ ಬಂದಿರುವ ಲೇಖನಗಳಲ್ಲಿ ಚಿತ್ರಸಂತೆ, ಚಲನಚಿತ್ರ ಉತ್ಸವ, ಹಂಪಿ ಉತ್ಸವ, ದಸರಾ ಉತ್ಸವಗಳಲ್ಲಿನ ವಿಶಿಷ್ಟವಾದ ವಿಷಯಗಳನ್ನು ಕಂಡುಕೊಂಡು ಇಲ್ಲಿ ಅದರ ಸಂಕ್ಷಿಪ್ತ ಪರಿಚಯವನ್ನು ಕಟ್ಟಿಕೊಡಲಾಗಿದೆ.

**ಕಲಾಪ್ರದರ್ಶನ ಕೇಂದ್ರಿತ ಬರಹ**ಗಳನ್ನೊಳಗೊಂಡಿರುವ ಲೇಖನಗಳನ್ನು ಎರಡು ರೀತಿಯಲ್ಲಿ ವಿಂಗಡಿಸಿಕೊಂಡು ಪರಿಚಯಿಸಲಾಗಿದೆ. ೧. ಏಕವ್ಯಕ್ತಿ ಕಲಾಪ್ರದರ್ಶನ, ೨. ಸಮೂಹ ಕಲಾಪ್ರದರ್ಶನ. ಕೆ.ವಿ.ಸುಬ್ರಹ್ಮಣ್ಯಂರವರು ಬರೆದ ಲೇಖನಗಳಲ್ಲಿ ಕಲಾಪ್ರದರ್ಶನಗಳಿಗೆ ಸಂಬಂಧಿಸಿದ ಲೇಖನಗಳೇ ಹೆಚ್ಚು ಕಲಾಪ್ರದರ್ಶನಗೊಂಡ ಸ್ಥಳ, ದಿನಾಂಕ, ವ್ಯಕ್ತಿಪರಿಚಯವನ್ನು ಸಂಕ್ಷಿಪ್ತವಾಗಿ ಇಲ್ಲಿ ತಿಳಿಸಲಾಗಿದೆ.

**ಕಲಾಶಿಬಿರ ಕೇಂದ್ರಿತ ಬರಹ**ಗಳಿಗೆ ಸಂಬಂಧಿಸಿದ ಲೇಖನಗಳನ್ನು ಕುರಿತಾಗಿದೆ. ಕಲಾಶಿಬಿರ ಹಿನ್ನೆಲೆಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಅನೇಕ ಲೇಖನಗಳಿವೆ. ಕೆಲವು ಮಾತ್ರ ತೆಗೆದುಕೊಳ್ಳಲಾಗಿದೆ. ಅವುಗಳಲ್ಲಿನ ವಿಷಯವನ್ನು ಕಲಾಶಿಬಿರ ಹಿನ್ನೆಲೆ, ಅದರಲ್ಲಿ ಅಭಿವ್ಯಕ್ತಿಗೊಂಡ ಕಲಾಕೃತಿಗಳು, ದಿನಾಂಕ, ಕಲಾವಿದರ ಕುರಿತಾಗಿರುವ ವಿವರಣೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ತಿಳಿಸಲಾಗಿದೆ.

**ಕಲಾವಿಮರ್ಶೆ ಕೇಂದ್ರಿತ ಬರಹ**ಗಳಲ್ಲಿ ಕಲೆಯ ಕುರಿತಾದ ನಿಲುವುಗಳು ಮತ್ತು ಬೇರೆ ಬೇರೆ ಕಲಾವಿದರ ಕಲಾಕೃತಿಗಳನ್ನು ಅವುಗಳಲ್ಲಿನ ಅಭಿವ್ಯಕ್ತಿಯ್ನನು ವಿಮರ್ಶೆಯ ಪರಿಚಯ ಮತ್ತು ಕಲಾವಿದನ ಕೃತಿ, ಶೀರ್ಷಿಕೆ ಒಟ್ಟಾರೆ ಅಭಿಪ್ರಾಯವನ್ನು ಇಲ್ಲಿ ಕಟ್ಟಿಕೊಡಲಾಗಿದೆ.

**ನಿಯತಕಾಲಿಕೆಗಳು** ಎಂಬ ಶೀರ್ಷಿಕೆಯಡಿಯಲ್ಲಿ ಕೆ.ವಿ.ಸುಬ್ರಹ್ಮಣ್ಯಂರವರು ಸಂಕುಲ, ಕರ್ನಾಟಕ ಕಲಾವಾರ್ತೆ, ಸಂಚಯ, ಹೊಸತು ಪತ್ರಿಕೆಗಳಲ್ಲಿ ಬಂದಿರುವ ಲೇಖನಗಳಲ್ಲಿ ವ್ಯಕ್ತಿ ಕುರಿತಾಗಿ ಅಭಿವ್ಯಕ್ತಿ ಪ್ರದರ್ಶನ ಕುರಿತಾದ ವಿಷಯಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಪರಿಚಯಿಸಲಾಗಿದೆ.

ಇತರೆಗಳಲ್ಲಿ ಬೇರೆ ಬೇರೆ ಪತ್ರಿಕೆಗಳಲ್ಲಿ ಬಂದಿರುವ ಕೆ.ವಿ.ಸುಬ್ರಹ್ಮಣ್ಯಂ ಅವರ ಲೇಖನಗಳನ್ನು ಇಲ್ಲಿ ತಿಳಿಸಲಾಗಿದೆ. ಕಲಾವಿಷಯಕ್ಕೆ ಸಂಬಂಧಿಸಿದ ವಿಚಾರಸಂಕಿರಣ, ಶಿಲ್ಪ ಮತ್ತು ಕರಕುಶಲತೆ, ಅಭಿವ್ಯಕ್ತಿ ಕಲಾಸೃಷ್ಟಿ ಎಂಬ ವಿಷಯಗಳನ್ನು ಕುರಿತಾಗಿ ಇಲ್ಲಿ ಪ್ರತ್ಯೇಕಿಸಿ ಅವುಗಳಲ್ಲಿನ ಅಭಿಪ್ರಾಯಗಳನ್ನು ಇಲ್ಲಿ ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.

ಒಂಭತ್ತನೆಯ ಅಧ್ಯಾಯದಲ್ಲಿ **ಸಂಕೀರ್ಣ ದೃಶ್ಯಕಲಾ** ಸಾಹಿತ್ಯ ಕುರಿತಾಗಿ ಅಧ್ಯಯನ ಮಾಡಲಾಗಿದೆ. ಕೆ.ವಿ.ಸುಬ್ರಹ್ಮಣ್ಯಂ ರವರು ಬರೆದು ಕೊಟ್ಟಿರುವ ಪ್ರಬಂಧ ಮಂಡಿಸಿರುವಂತ ಲೇಖನಗಳು ಅಭಿನಂದನಾ ಗ್ರಂಥಗಳಲ್ಲಿ, ಸ್ಮರಣ ಸಂಚಿಕೆಗಳಲ್ಲಿ, ಇತರೆ ಸಂಕೀರ್ಣ ಹಿನ್ನೆಲೆಯ ಕೃತಿಗಳಲ್ಲಿ ಕಂಡುಬಂದಿವೆ. ಇವು ವಿವಿಧ ವಿಷಯಗಳಿಗೆ ಸಂಬಂಧಪಟ್ಟದ್ದಾಗಿವೆ. ಅವುಗಳಲ್ಲಿನ ವಸ್ತುವಿಷಯ, ಕಲಾವಿದರ ಪರಿಚಯ, ಕಲಾಭಿವ್ಯಕ್ತಿ, ಶಿಕ್ಷಣ, ಕಲೆ, ಕಲಾ ಇತಿಹಾಸ, ಆದಿಮ ಚಿತ್ರ ಸೌಂದರ್ಯದಂತಹ ವಿಷಯಗಳಿದ್ದು ಸಂಕ್ಷಿಪ್ತವಾಗಿ ಕಟ್ಟಿಕೊಡಲಾಗಿದೆ.

ಹತ್ತನೆಯ ಅಧ್ಯಾಯವು ಸಮಾರೋಪವಾಗಿದ್ದು, ಎಲ್ಲಾ ಅಧ್ಯಾಯಗಳು ಮತ್ತು ಒಟ್ಟಾರೆ ಅಧ್ಯಯನದ ಫಲಿತಗಳನ್ನು ಸಮೀಕ್ಷಿಸಲಾಗಿದೆ.

ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಕೆಲವು ಪ್ರಮುಖ ಫಲಿತಗಳು

೧. ಮೂಲತಃ ಚಿತ್ರಕಲಾವಿದರಾದ ಕೆ.ವಿ.ಸುಬ್ರಹ್ಮಣ್ಯಂ ಅವರು ಕಲಾಸಾಹಿತ್ಯದ ಕೊರತೆಯನ್ನು ಕಂಡು ಬರಹಗಾರರಾಗಿ ರೂಪಗೊಂಡರು

೨. ಅವರೊಬ್ಬ ವಿಮರ್ಶಕರಾಗಿ ಬರೆಯಲು ಆರಂಭಿಸಿ ನಂತರದ ದಿನಗಳಲ್ಲಿ ಕಲಾ ಇತಿಹಾಸಕಾರರಾಗಿ ಮತ್ತು ಸಂಶೋಧಕರಾಗಿಯೂ ರೂಪಗೊಂಡದ್ದು ಈ ಅಧ್ಯಯನದ ಫಲಿತವಾಗಿ ಗೋಚರಿಸಿದೆ.

೩. ಕೆ.ವಿ.ಸುಬ್ರಹ್ಮಣ್ಯಂ ಅವರು ತುಂಬ ಕಿರುವಯಸ್ಸಿನಲ್ಲೇ ಅವರಲ್ಲಿ ಬರವಣಿಗೆಯ ಪ್ರಬುದ್ಧತೆ ಅರಳಿದುದು ಈ ಅಧ್ಯಯನದಿಂದ ತಿಳಿದುಬಂದಿತು.

೪. ಪ್ರಸ್ತುತ ಅಧ್ಯಯನದಿಂದ ಕಲಾ ಬರಹಗಾರರ ಕಷ್ಟ ಪರಿಶ್ರಮ ಎಷ್ಟೆಂಬುದು ತಿಳಿದುಬರುತ್ತದೆ.

೫. ನಿರೀಕ್ಷೆಗೂ ಮೀರಿದ ಬರವಣಿಗೆ ಸುಬ್ರಹ್ಮಣಂ ಅವರದೆಂಬುದು ಈ ಅಧ್ಯಯನದ ಮೂಲಕ ಮೊದಲ ಬಾರಿಗೆ ಬೆಳಕಿಗೆ ಬಂದಿದೆ ಎಂದರೆ ತಪ್ಪಾಗಲಾರದು.

೬. ಪರಿಮಿತ ಅವಧಿ ಮತ್ತು ಪುಟಗಳ ಮಿತಿಯಲ್ಲಿ ಅವರ ಸಮಗ್ರ ಬರೆಹಗಳನ್ನು ಇಲ್ಲಿ ಪರಿಚಯಿಸಲು ಸಾಧ್ಯವಾಗಿಲ್ಲ. ಮುಂದಿನ ಅಧ್ಯಯನಕಾರರಿಗೆ ಇದೊಂದು ಮಾದರಿ ಅಧ್ಯಯನವಾಗಿದೆ ಎನ್ನಿಸುತ್ತದೆ.

೭. ಕ್ಷೇತ್ರಕಾರ್ಯದ ಮೂಲಕ ಅವರ ಬರವಣಿಗೆಯ ರಾಶಿರಾಶಿ ಲೇಖನಗಳು ದೊರೆತುದರಿಂದ ದೃಶ್ಯಕಲಾ ಸಾಹಿತ್ಯಕ್ಕೆ ಅಪಾರ ಕೊಡುಗೆ ಅವರದೆಂಬುದು ತಿಳಿದುಬಂದಿತು.

೮. ಕನ್ನಡದಲ್ಲಿ ಬರಹಗಾರರಾಗಿ ಗುರುತಿಸಿಕೊಂಡಿದ್ದರು, ಇಂಗ್ಲೀಷ್ ಬರಹಗಳನ್ನು ಕೆ.ವಿ.ಸುಬ್ರಹ್ಮಣ್ಯಂರವರು ಬರೆದಿರುವುದು ಈ ಅಧ್ಯಯನದಿಂದ ಕಂಡುಬಂದಿದೆ.

೯. ಸಾಹಿತ್ಯವೆಂದರೆ ಗೊತ್ತಿಲ್ಲದ ದೃಶ್ಯಕಲಾ ಕ್ಷೇತ್ರದಲ್ಲಿ ಇಂದಿನ ದಿನಗಳಲ್ಲಿ ಹಲವಾರು ವೈವಿಧ್ಯಮಯ ದೃಶ್ಯಕಲಾ ಸಾಹಿತ್ಯದ ನೆಲೆಗಳು ಕೆ.ವಿ.ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯದಿಂದ ಕಾಣಬಹುದಾಗಿದೆ.

೧೦. ಕರ್ನಾಟಕ ತುಂಬೆಲ್ಲಾ ಹಲವಾರು ದೃಶ್ಯಕಲಾ ಸಾಹಿತಿಗಳಿದ್ದರೂ ಅವರ ಸಾಹಿತ್ಯ ಕೆಲವೊಂದು ಸೀಮಿತ ವಿಷಯಕ್ಕೆ ಮಾತ್ರ ಒಳಪಟ್ಟಿರುತ್ತದೆ. ಆದರೆ ಕೆ.ವಿ.ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯದಲ್ಲಿ ಕೆಲವೊಂದು ವಿಭಿನ್ನ ಆಯಾಮದ ದೃಶ್ಯಕಲಾ ಸಾಹಿತ್ಯ ರಚನೆಯನ್ನು ಗಮನಿಸಲು ಸಾಧ್ಯವಾಯಿತು.

೧೧. ಕೆ.ವಿ.ಸುಬ್ರಹ್ಮಣ್ಯಂ ಅವರು 'ಆದಿಮ ದೃಶ್ಯ ಸೌಂದರ್ಯದ ಆದಿಪತ್ಯ' ಕೃತಿಯು ಅನ್ವೇಷಣಾತ್ಮಕ ಕೃತಿಗಳಲ್ಲಿ ಹೊಸ ಸೇರ್ಪಡೆಯಾಗಿರುವುದನ್ನು ಈ ಅಧ್ಯಯನದಿಂದ ತಿಳಿಕೊಳ್ಳಲಾಯಿತು.

೧೨. ಈವರೆಗೂ ಕೆ.ವಿ.ಸುಬ್ರಹ್ಮಣ್ಯಂ ಅವರ ಬಗ್ಗೆ ಯಾವುದೇ ಬಗೆಯ ಕಿರುಪ್ರಬಂಧ, ಸಂಶೋಧನಾ ಪ್ರಬಂಧಗಳು ಅಧ್ಯಯನ ನಡೆದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಇದು ಪ್ರಥಮ ಸಂಶೋಧನಾ ಪ್ರಬಂಧ ಎಂದು ಹೇಳಬಹುದು.

ನಾಡಿನ ಶ್ರೇಷ್ಠ ದೃಶ್ಯಕಲಾ ಸಾಹಿತಿಗಳಲ್ಲಿ ಒಬ್ಬರಾದ ಕೆ.ವಿ.ಸುಬ್ರಹ್ಮಣ್ಯಂ ಅವರ ದೃಶ್ಯಕಲಾ ಸಾಹಿತ್ಯ ಕುರಿತಾದ ಈ ಅಧ್ಯಯನ ಪ್ರಬಂಧವು ಕಾಲ, ವಿಷಯ ಮತ್ತು ಪುಟಗಳ ವ್ಯಾಪ್ತಿಗೆ ಒಳಪಟ್ಟು ರಚನೆಯಾಗಿರುವುದರಿಂದ ಕೆ.ಪಿ.ಸುಬ್ರಹ್ಮಣ್ಯಂರವರ ಸಾಹಿತ್ಯದ ಸಮಗ್ರವಾದ ಅಧ್ಯಯನವಲ್ಲ. ಒಂದು ದೃಷ್ಟಿಕೋನದಿಂದ ಮಾತ್ರ ಅಧ್ಯಯನ ನಡೆಸಲಾಗಿದ್ದು, ಇನ್ನೂ ಹಲವು ದೃಷ್ಟಿಕೋನಗಳಿಂದ ಅಧ್ಯಯನ ಮಾಡುವ ಅವಕಾಶಗಳು ಇಲ್ಲಿವೆ. ಈ ಹಿನ್ನೆಲೆಯಲ್ಲಿ ಮುಂದಿನ ಅಧ್ಯಯನಕಾರರಿಗೆ ಇದೊಂದು ಆಕರ ಸಾಮಗ್ರಿಯಾಗಿ ಅಥವಾ ಮಾರ್ಗಸೂಚಿಯಾದರೆ ಪ್ರಸ್ತುತ ಅಧ್ಯಯನ ಮಾಡಿರುವುದರ ಸಾರ್ಥಕತೆಯ ಯಶಸ್ವಿಯಾದಂತೆ ಎಂದು ಇಲ್ಲಿ ಹೇಳಬಯಸುತ್ತೇನೆ.

# ಗ್ರಂಥಋಣ


೧. ಅನಿಲ್ ಕುಮಾರ್ ಎಚ್.ಎ.(ಸಂ), ೧೯೯೭, **ಚೌಕಟ್ಟು,** ಸಂಚಯ ಪ್ರಕಾಶನ, ಬೆಂಳೂರು.

೨. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ೧೯೭೮, **ಕೆ.ವೆಂಕಟಪ್ಪ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೩. ಕೃಷ್ಣಯ್ಯ ಎಂ.ಎಚ್.(ಸಂ), ೨೦೦೮, **ಆರ್.ಎಸ್.ಎನ್.: ವ್ಯಕ್ತಿ ಮತ್ತು ಕಲೆ,** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೪. ಕಲಬುರ್ಗಿ ಎಂ.ಎಂ.(ಸಂ), **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,** ಸಂಪುಟ ೧.

೫. ಕೃಷ್ಣಯ್ಯ ಎಂ.ಎಚ್., ೧೯೯೯, **ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ,** ಅಂಕಿತ ಪುಸ್ತಕ ಪ್ರಕಾಶನ, ಬೆಂಗಳೂರು.

೬. ಚಂದ್ರಶೇಖರ ಎಚ್.ಎನ್.(ಸಂ), ೧೯೯೮, **ಸಮಕಾಲೀನ ಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೭. ಚಂದ್ರಹಾಸ್ ವೈ.ಜಾಲಿಹಾಳ(ಸಂ), ೧೯೯೭, **ಕಲಾವಿದ ಅಂದಾನಿ ಐವತ್ತು,** ಅಂದಾನಿ ಗೆಳೆಯರ ಬಳಗ, ಗುಲಬರ್ಗಾ.

೮. ತಿಪ್ಪೇರುದ್ರಸ್ವಾಮಿ ಎಚ್., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ,** ಕುವೆಂಪು ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೯. ದೇವರಕೊಂಡಾರೆಡ್ಡಿ, ೨೦೦೨, **ಲಿಪಿಯ ಹುಟ್ಟು ಮತ್ತು ಬೆಳವಣಿಗೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೧೦. ನರಸಿಂಹನ್ ಅ.ಲ.(ಸಂ), ೧೯೯೭, **ಸಂಯೋಜನೆ,** ಸಂಯೋಜಿತ ಸಂಸ್ಥೆ, ಬೆಂಗಳೂರು.

೧೧. ನರಸಿಂಹನ್ ಅ.ಲ., ಮರಿಶಾಮಾಚಾರ್ ಎನ್.(ಸಂ), ೧೯೯೩, **ಚಿತ್ರಕಲಾ ಪ್ರಪಂಚ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೧೨. ನಾರಾಯಣ ಕೆ.ವಿ.(ಸಂ), **ಭಾಷೆ: ವಿಷಯ ವಿಶ್ವಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೧೩. ನಾಯಕ ಹಾ.ಮಾ.(ಸಂ), **ಕನ್ನಡ ಸಾಹಿತ್ಯ ಚರಿತ್ರೆ, ಸಂಪುಟ ೧,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೧೪. ನಿಂಗಣ್ಣ ಚಿ.ಸಿ.(ಸಂ), **ಕನ್ನಡ ಸಾಹಿತ್ಯ ಸಂಸ್ಕೃತಿ ಕೋಶ,** ಶ್ರೀ ಸಿದ್ಧಲಿಂಗೇಶ್ವರ ಪ್ರಕಾಶನ, ಗುಲಬರ್ಗಾ.

೧೫. ಪಾಟೀಲ ಎಸ್.ಸಿ., ೧೯೯೨, **ಕರ್ನಾಟಕ ಜನಪದ ಚಿತ್ರಕಲೆ,** ವೀರಶೈವ ಅಧ್ಯಯನ ಸಂಸ್ಥೆ, ಗದಗ, ಡಂಬಳ.

೧೬. ಪಾಟೀಲ ಎಸ್.ಸಿ., ಸತ್ಯಾನಂದ ಪಾತ್ರೋಟ(ಸಂ), ೨೦೦೩, **ನಿಜದ ನೆಲೆ,** ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ, ಬಾಗಲಕೋಟೆ.

೧೭. ಮರಿಶಾಮಾಚಾರ ಎನ್.(ಸಂ), ೧೯೯೫, **ಕಲಾಚೇತನ,** ಸಂಯೋಜಿತ ಸಂಸ್ಥೆ, ಬೆಂಗಳೂರು.

೧೮. ಮರಿಶಾಮಾಚಾರ ಎನ್., ನರಸಿಂಹನ್ ಅ.ಲ.(ಸಂ), ೧೯೯೪, **ಕಲಾಕೋಶ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೧೯. ಮರಿಶಾಮಾಚಾರ ಎನ್.(ಸಂ), ೧೯೯೬, **ಆರ್.ಎಂ.ಹಡಪದ,** ಸಂಯೋಜಿತ ಸಂಸ್ಥೆ, ಬೆಂಗಳೂರು.

೨೦. ಮರಿಶಾಮಾಚಾರ ಎನ್.(ಸಂ), ೨೦೦೬, **ಕಲಾಚರಿತ್ರೆ, ಭಾಗ ೧,** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೨೧. ಮುಗುಳಿ ರಂ.ಶ್ರೀ., ೧೯೯೮, **ಕನ್ನಡ ಸಾಹಿತ್ಯ ಚರಿತ್ರೆ,** ಗೀತಾ ಬುಕ್‌ಹೌಸ್, ಮೈಸೂರು.

೨೨. ರಾಜಪ್ಪ ದಳವಾಯಿ, ೧೯೯೬, **ಕನ್ನಡ ಸಾಹಿತ್ಯ ಕೋಶ,** ದಳವಾಯಿ ಪ್ರಕಾಶನ.

೨೩. ರಾಜೇಶ್ವರಿ ಮಹೇಶ್ವರಯ್ಯ, **ವರ್ಣನಾತ್ಮಕ ಭಾಷಾ ವಿಜ್ಞಾನ.**

೨೪. ವೀರೇಶ ಬಡಿಗೇರ, **ಕನ್ನಡ ಮೋಡಿ ಲಿಪಿ, ಸಂರಚನೆ ಮತ್ತು ಸಂವರ್ದನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨೫. ವೆಂಕಣ್ಣಯ್ಯ ಟಿ.ಎಸ್.(ಸಂ), **ಕನ್ನಡ ಸಾಹಿತ್ಯ ಚರಿತ್ರೆ,** ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

೨೬. ಶಾಸ್ತ್ರೀ ಬಿ.ವಿ.ಕೆ.(ಸಂ), ೧೯೯೧, **ರೇಖಾಚಿತ್ರ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೨೭. ಕಾಂತಾರಾಜ್ ಆರ್.ಎ.(ಸಂ), ೧೯೯೫, **ಕಲೆಗಳಲ್ಲಿ ಸಂಸ್ಕೃತಿ ಮತ್ತು ಪರಂಪರೆ,** ಸ್ಪಂದನ ಚಿತ್ರಕಲಾವಿದರ ಯುವ ಬಳಗ, ಬೆಂಗಳೂರು.

೨೮. ಶ್ರೀಪತಿ ಎನ್.(ಸಂ), ೧೯೯೭, **ಶಿಕ್ಷಣದಲ್ಲಿ ಕಲಾಭಿವ್ಯಕ್ತಿಗೆ ಆಕರಗಳು,** ಕರ್ನಾಟಕ ಚಿತ್ರಕಲಾ ಶಿಕ್ಷಕರ ಸಂಘ, ಬೆಂಗಳೂರು.

೨೯. ಸುಂದರ ಅ., **ಕರ್ನಾಟಕ ಪ್ರಾಗಿತಿಹಾಸ ಕಾಲದ ಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೦. ಸುಬ್ರಹ್ಮಣ್ಯಂ ಕೆ.ವಿ., ೨೦೦೪, **ಸಿ.ಪಿ.ರಾಜಾರಾಮ್,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೧. ಸುಬ್ರಹ್ಮಣ್ಯಂ ಕೆ.ವಿ., ೧೯೪೯, **ವೆಂಕಟಪ್ಪ: ಸಮಕಾಲೀನ ಪುನರಾವಲೋಕನ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೨. ಸುಬ್ರಹ್ಮಣ್ಯಂ ಕೆ.ವಿ., ೨೦೦೦, **ವಿಜಯ ಸಿಂಧೂರ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೩. ಸುಬ್ರಹ್ಮಣ್ಯಂ ಕೆ.ವಿ., **ಆರ್.ಎಸ್.ನಾಯ್ಡು,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೪. ಸುಬ್ರಹ್ಮಣ್ಯಂ ಕೆ.ವಿ. ೨೦೦೧, **ಎಸ್.ಜಿ.ವಾಸುದೇವ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೫. ಸುಬ್ರಹ್ಮಣ್ಯಂ ಕೆ.ವಿ., **ಕರ್ನಾಟಕ ಸಮಕಾಲೀನ ಶಿಲ್ಪಕಲೆ: ಶಿಲ್ಪ ಸಂಪುಟ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೬. ಸುಬ್ರಹ್ಮಣ್ಯಂ ಕೆ.ವಿ., ೧೯೯೫, **ಮಧ್ಯಪ್ರದೇಶದ ಕಲೆ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೭. ಸುಬ್ರಹ್ಮಣ್ಯಂ ಕೆ.ವಿ., ೨೦೦೪, **ಮುಖಗಳೊಂದಿಗೆ ಮುಖಾಮುಖಿ**(ಭಾವ ಚಿತ್ರ ಪರಂಪರೆ), ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೮. ಸುಬ್ರಹ್ಮಣ್ಯಂ ಕೆ.ವಿ., ೨೦೦೮, **ಇನ್‌ಸ್ಟಾಲೇಷನ್ ಕಲಾ ಪ್ರಪಂಚ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೩೯. ಸುಬ್ರಹ್ಮಣ್ಯಂ ಕೆ.ವಿ., ೧೯೯೫, **ಫೋಟೋರಿಯಲಿಸಂ,** ಕರ್ನಾಟಕ ಲಲಿತಕಲಾ ಅಕಾಡೆಮಿ. ಬೆಂಗಳೂರು.

೪೦. ಸುಬ್ರಹ್ಮಣ್ಯಂ ಕೆ.ವಿ., ೨೦೧೧, **ಶಿಲಾಶ್ರಯ ಚಿತ್ರಕಲೆಯ ದೃಶ್ಯಧ್ಯಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೪೧. ಸುಬ್ರಹ್ಮಣ್ಯಂ ಕೆ.ವಿ., ೧೯೯೭, **ಕಲಾ ಸಂವೇದನೆಯ ಒಳನೋಟಗಳು,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೪೨. ಸುಬ್ರಹ್ಮಣ್ಯಂ ಕೆ.ವಿ., ೨೦೧೧, **ಆದಿಮ ದೃಶ್ಯ ಸೌಂದರ್ಯದ ಆಧಿಪತ್ಯ**(ಅನ್ವೇಷಣೆ), ಚಿತ್ರಕಾವ್ಯ ಪ್ರಕಾಶನ, ಬೆಂಗಳೂರು.

೪೩. ಸುಬ್ರಹ್ಮಣ್ಯಂ ಕೆ.ವಿ., ೨೦೧೪, **ವೆಂಕಟಾಚಲಪತಿ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು.

೪೪. ಸುಬ್ರಹ್ಮಣ್ಯಂ ಕೆ.ವಿ., ೨೦೦೭, **ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ,** ಕರ್ನಾಟಕ ಶಿಲ್ಪಕಲಾ ಅಕಾಡೆಮಿ, ಬೆಂಗಳೂರು.

೪೫. ಸುಬ್ರಹ್ಮಣ್ಯಂ ಕೆ.ವಿ., **ಎನ್.ಹನುಮಯ್ಯ,** ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು.

೪೬. ಹಿರೇಮಠ ಎಸ್.ಎಂ., ೧೯೯೩, **ಕನ್ನಡ ಸಾಹಿತ್ಯ ಚರಿತ್ರೆಯ ಘಟ್ಟಗಳು,** ವಿದ್ಯಾನಿಧಿ ಪ್ರಕಾಶನ, ಗದಗ.

೪೭. ಹೊನ್ನಯ್ಯ ಸಿ.ಬಿ.(ಸಂ), ೨೦೦೫, **ಕನ್ನಡ ಸಾಹಿತ್ಯ ಸಂಸ್ಕೃತಿ ಮೀಮಾಂಸೆ,** ಜೈಭೀಮಾ ಪ್ರಕಾಶನ.

**ಸಂಶೋಧನ ಪ್ರಬಂಧಗಳು**

೧. ಉಮೇಶ್ ಎನ್., ೨೦೦೬, **ಆರ್.ಎಂ.ಹಡಪದ ಮತ್ತು ಕೆನ್ ಕಲಾಶಾಲೆ**(ಎಂ.ವ್ಹಿ.ಎ.)

೨. ಪ್ರಕಾಶ್ ಎಂ.ಎಂ., ೨೦೧೦, **ಬೆಂಗಳೂರು ಕಲಾಮಂದಿರ: ಒಂದು ಇತಿಹಾಸ ಅಧ್ಯಯನ** (ಎಂ.ವ್ಹಿ.ಎ).

೩. ಲಕ್ಕಣ್ಣನ್ನವರ ಪಿ.ಟಿ., ೨೦೧೦, **ಕರ್ನಾಟಕ ದೃಶ್ಯಕಲಾ ಸಾಹಿತ್ಯ: ಒಂದು ವೈಚಾರಿಕ ಅಧ್ಯಯನ**(ಪಿಎಚ್.ಡಿ.).

೪. ವಿಶ್ವನಾಥ ಟಿ.ಹಂಡಿ, ೨೦೧೩, **ಬೆಳಗಾವಿ ವಿಭಾಗದ ದೃಶ್ಯಕಲಾ ಸಾಹಿತಿಗಳ ಕೊಡುಗೆ** (ಎಂ.ವ್ಹಿ.ಎ.).

೫. ವಿಜಯಲಕ್ಷ್ಮಮ್ಮ, ೨೦೦೮, **ನೆಲಮಂಗಲ ತಾಲ್ಲೂಕು: ಸಾಂಸ್ಕೃತಿಕ ಚರಿತ್ರೆ**(ಎಂ.ಫಿಲ್.).

೬. ವೆಂಕಟೇಶ ಪಾಟೀಲ, ೨೦೧೩, ಕನ್ನಡ ವಿಶ್ವವಿದ್ಯಾಲಯ.

**ನಿಯತಕಾಲಿಕೆಗಳು**

೧. ಕಸ್ತೂರಿ

೨. ಕರ್ನಾಟಕ ಕಲಾವಾರ್ತೆ

೩. ಸಂಕುಲ

೪. ಸಂಚಯ

೫. ಹೊಸತು

**ದಿನಪತ್ರಿಕೆಗಳು**

೧. ಉದಯವಾಣಿ

೨. ಪ್ರಜಾವಾಣಿ

೩. ಲೋಕವಾಣಿ

೪. ವಿಜಯವಾಣಿ

೫. ಸಂಯುಕ್ತ ಕರ್ನಾಟಕ



ತುಮಕೂರಿನ ಡಾ.ಗುಬ್ಬಿ ವೀರಣ್ಣ ಕಲಾಕ್ಷೇತ್ರದಲ್ಲಿ ನಡೆದ ಅಖಿಲ ಭಾರತ ಚಿತ್ರಕಲಾ ಶಿಬಿರದಲ್ಲಿ ಪಾಲ್ಗೊಂಡಿದ್ದ ಕಲಾವಿದರೊಂದಿಗೆ ಅಧ್ಯಕ್ಷರಾದ ಡಾ. ವಿ.ಜಿ ಅಂದಾನಿ ಹಾಗೂ ಕಲಾವಿಮರ್ಶಕ ಕೆ.ವಿ. ಸುಬ್ರಹ್ಮಣ್ಯಂ .

ಇಳಕಲ್‌ನ ಕಲಾಬರಹಗಾರರ ಕಮ್ಮಟದ ಉದ್ಘಾಟನೆಯನ್ನು ಮಾಡುತ್ತಿರುವ
ಶ್ರೀ ಸೋಮಶೇಖರ ಎಂ. ಸಾಲಿಯವರು. ವೇದಿಕೆಯಲ್ಲಿ ಪ್ರೊ|| ವಿ. ಜಿ. ಅಂದಾನಿ
ಶ್ರೀ ಕೆ. ವಿ. ಸುಬ್ರಹ್ಮಣ್ಯಂ, ಡಾ|| ಶಂಭು ಬಳಿಗಾರ್, ಶ್ರೀ ಬಸವರಾಜ ಗವಿಮಠ ರವರುಗಳಿದ್ದಾರೆ.

